ಹೇಳಿಮತ್ತೆ ಕತ್ತೆ, ಕುದುರೆ, ಹಸು, ಎಮ್ಮೆ ವ್ಯಾಘ್ರ ಋಕ್ಷಾದಿಗಳು ಇವುಗಳ ವಿಷವು ಮಂತ್ರಧ್ಯಾನ ಗಳಿಂದ ನಾಶವಾಗುವುದೆಂದು ತತ್ತನ್ಮಂತ್ರಗ ಳನ್ನು ವಿವರಿಸಿ ಸ್ಥಾವರ ವಿಷನಾಶಕಗಳಾದ ಔಷಧಗಳನ್ನು ವಿವರಿಸಿ, ಒಂದೇ ಪದ್ಯದಲ್ಲಿ [1]ಉಮ್ಮತ್ತ, ಮಾವು, ಭಲ್ಲಾತಕ (ಗೇರು) ಇವುಗಳ ವಿಷಕ್ಕೆ ಪರಿಹಾರ ಹೇಳಿ, ಬಳಿಕ ಸಾಮಾನ್ಯವಾಗಿ [2]ವಿಷಚಿಕಿತ್ಸೆಯು ಎಂಟುವಿಧ, [3]ದ್ರವ್ಯದ್ರವಭಾಗಕಾಲಗಳು ಉಕ್ತವಾಗಿಲ್ಲದಿದ್ದರೆ ಯಾವಯಾವುವನ್ನು ಗ್ರಹಿಸಬೇಕೆಂಬುದು ಇವನ್ನು ಹೇಳಿ, ಜಂಗಮವಿಷಗಳು:— ದಂತ, ಶುಕ್ಲ, ನಖ, ರೋಮ, ನಖ,? ಅಸ್ಥಿ, ಸ್ವೇದ, ಮಾಂಸ, ರುಧಿರ,(೦ಚ) ಪುರೀಷ,(೦) ಮೂತ್ರ, ಪುಚ್ಛ, ನಯನ, ಆಸ್ಯ. ಜಲ(೦ಚ) ಘ್ರಾಣ—ಇವುಗಳಲ್ಲಿರುವುವು. ಸ್ಥಾವರವಿಷಗಳು, 1. ಪತ್ರ, 2 ಪುಷ್ಪ, 3 ಫಲ, 4 ಮೂಲ, 5 ಘೃತ, 6 ಬೀಜ, 7 ಕಂಟಕ, 8 ಪಯಸ್ಸು, 9 ಚರ್ಮ 10 (ವೈವ?) ಎಂದು ಹತ್ತುಬಗೆಯಾಗಿರುವುವು. ಎಂದು ಹೇಳಿ ಅಧ್ಯಾಯವು ಮುಗಿಯುವುದು.

೧೩-ರನೆಯ ಅಧ್ಯಾಯ,—ಬಳಿಕ ಕಶ್ಯಪನನ್ನು ನೋಡಿ ಗೌತಮನು "ಸ್ಥಾವರ ಜಂಗಮವಿಷಗಳನ್ನು ನಿವಾರಿಸುವ ಮಂತ್ರಗಳು, ಅವುಗಳ ವಿನಿಯೋಗ. ಇವುಗಳನ್ನು ವಿಧಿಪೂರ್ವಕವಾಗಿ ಕೇಳಿದೆನು. ಇನ್ನು ಅಭಿಷೇಕವಿಧಿಯನ್ನು ಹೇಳಬೇಕು' ಎಂದು ಕೇಳುವನು? ಬಳಿಕ ಕಶ್ಯಪನು ಅಭಿಷೇಕಮಂಟಪ, ಅಭಿಷೇಕಜಲ ಕುಂಭ, ಪುಂಸೂಕ್ತಾದಿ ಮಂತ್ರಗಳ ಅಷ್ಟೋತ್ತರ ಶತಕೃತ್ವ ಜಪ (ನಾಲ್ವರು ಅನುಜಪ ಮಾಡಬೇಕು.) ಬಳಿಕ ಅಗ್ನಿ ಕಾರ್ಯ-ನಿವೇದನ, ಗೋಮಯದಿಂದ ಮಂಡಲ, ತನ್ಮಧ್ಯದಲ್ಲಿ ಗುಲಿಕೆಗಳನ್ನಿರಿಸಿ ಅರ್ಚನೆ, (೧೦೮) ಸಾವಿರದೆಂಟು ಸಾರಿ ಗಾರುಡಮಂತ್ರಜಪ, ಬಳಿಕ ಕುಂಭಾಭಿಷೇಕ, ನವಗ್ರಹಯಜ್ಞ, ಋತ್ವಿಕ್ಕುಗಳಿಗೆ ಧನಧಾನ್ಯಾದಿ ದಾನ, ಬ್ರಾಹ್ಮಣ ತರ್ಪಣ, ಇವನ್ನು ಹೇಳಿ (ಇದನ್ನು ತಿಂಗಳು ತಿಂಗಳಿಗೂ ಮಾಡಬೇಕು. ಅಥವಾ ವರ್ಷಕ್ಕೊಂದಾವೃತ್ತಿಯಾದರೂ ಮಾಡಬೇಕು.) ಇದರಿಂದ ಆಯುಶ್ಶ್ರೀಮೇದಸ್ಸು ಮೊದಲಾದುವು ಹೆಚ್ಚುವುವು. 'ಚಿನ್ನ' ಅಥವಾ ಬೆಳ್ಳಿಯ ತಗಡಿನಲ್ಲಿಯಾಗಲಿ, ಭುಜಪತ್ರಿಯೆಲೆಯಲ್ಲಾಗಲಿ ಯಂತ್ರವನ್ನು ಬರೆದು ಪ್ರತಿಷ್ಠೆ ಮಾಡಬೇಕು. ಪ್ರಾಣಪ್ರತಿಷ್ಠೆ ಮಾಡಿ ೮೦೦೦ ಜಪಮಾಡಬೇಕು. ಅದಕ್ಕೆ ಸಮನಾಗಿ ಅಗ್ನಿಯಲ್ಲಿ ಆಜ್ಯಾಹುತಿ ಕೊಡಬೇಕು. ಮಂತ್ರಿಯೂ ಅಭಿಷೇಕವಾದಬಳಿಕ ಯಂತ್ರವನ್ನು ಧರಿಸಬೇಕು. ಎಂಬ ವಿಷಯದೊಡನೆ ಅಧ್ಯಾಯವು ಮುಗಿಯುವುದು. ಇಷ್ಟರಲ್ಲಿ ಗ್ರಂಥವು ಕೊನೆ ಮುಟ್ಟಿರುವುದು.

1. ಪದ್ಮೋ ಹೇಮವಿಷಂ—137—12—31.
2. ದಾಹಚ್ಛೇದ ಸಿರಾವೇಧ। ಶೋಷಣಾಭ್ಯಂಜನಾನಿ ಚ ॥
   ಪಾನಲೇಪನನಸ್ಯಾದಿ। ಚಿಕಿತ್ಸಾಷ್ಟವಿಧಾ ಸ್ಮೃತಾ ॥ 138—12—63.
3. ದ್ರವ್ಯೇऽಪ್ಯನುಕ್ತೇ ವಿಹಿತಂ ತು ಮೂಲಂ। ದ್ರವೇऽಪ್ಯನುಕ್ತೇ ಜಲಮೇವ ದೇಯಂ ॥
   ಭಾಗೇऽಪ್ಯನುಕ್ತೇ ಸಮಮೇವ ದೇಯಂ। ಕಾಲೇऽಪ್ಯನುಕ್ತೇ ದಿವಸಸ್ಯ ಪೂರ್ವಂ ॥

# ವಿ ಷ ಯ ಸೂ ಚಿ.



1. ಶ್ರ. ಬೆ. ಶಾ. 253 ರಲ್ಲಿ ಈ ದಂಡನಾಯಕನ ವಿಷಯವು ಹೇಳಿದೆ.
2. ಹಾಸ. ಶಾ. 110 ರಲ್ಲಿ "ಮುಗಳಿ" ಎಂದು ಈ ಪೂರಿನ ವಿಷಯ ಹೇಳಿದೆ.

* ಇದರ ಮಂತ್ರವು (ಹಸ್ತಲಿಖಿತ ಪ್ರತಿಗಳಲ್ಲಿ) ಗಳಿತವೆಂದು ತೋರುವುದು.

† ಇವೆರಡರ ದಂಶಲಕ್ಷಣೌಷಧಾದಿಗಳು (ಹಸ್ತಲಿಖಿತ ಪ್ರತಿಗಳಲ್ಲಿ) ಗಳಿತವೆಂದು ತೋರುವುದು.

‡ ಇದರ ಔಷಧಾದಿಗಳು (ಹಸ್ತಲಿಖಿತ ಪ್ರತಿಗಳಲ್ಲಿ) ಗಳಿತವೆಂದು ತೋರುವುದು.

ಮಂಗರಸವಿರಚಿತಂ

# ಖಗೇಂದ್ರಮಣಿದರ್ಪಣಂ

## ಪ್ರಥಮಾಧಿಕಾರಂ

* ಸ್ರ॥ ಶ್ರೀಮದ್ಗೀರ್ವಾಣಶೋಣಾಮಳಮಣಿಮಕುಟೋದ್ಯತ್ಪ್ರಭಾವಲ್ಲರೀಪ್ರೋ |
ದ್ಧಾಮಾಂಘ್ರಿದ್ವಂದ್ವಕಲ್ಪಾಂಘ್ರಿಪನನಘನಚಿಂತ್ಯಂ ಸಮಸ್ತಾರ್ಥ[1]ವಿನ್ನಿ ||
ಷ್ಕಾಮಂ ಸೋಮಾರ್ಕಕೋಟಿದ್ಯುತಿವಿಮಲಗುಣಂ ಮುಕ್ತಿಸೌಖ್ಯಾವನೀಜಾ |
ರಾಮಂ ಶ್ರೀಪಾರ್ಶ್ವನಾಥಂ ನಿರವಧಿಕಸುಖಾವಾಪ್ತಿಯಂ ಮಾಱ್ಕೆ ನಮ್ಗೊಳ್ || ೧ ||

ಮ॥ ಸ್ರ॥ ತೊಲಗಲ್ ವ್ಯಾಮೋಹಮಂತಾವೃತಿಯುಗಮುಸದುದ್ವಿಘ್ನಮಾಯುರ್ವಿನಾಮಾ |
ಮಲಗೋತ್ರಂ ವೇದನೀಯಂ ಸ್ಥಿರತರವೆನಿಪೀಸದ್ಗುಣಂ ತಾಮೆ ತಮ್ಗೊಳ್ ||
ನಿಲೆ ಸೌಖ್ಯಜ್ಞಾನಮುಖ್ಯಂ ಗುಣಮಗಣಿತಸಿದ್ಧರ್ಕಳಾಗಿರ್ಪರೆಮ್ಮಾ |
ವಿಲಭಾವಂ ಪಿಂಗೆ ಕೈವಲ್ಯದೊಳೆ ನಿಲಿಸಿ ರಕ್ಷಿಕ್ಕೆ ಸದ್ಭಾವದಿಂದಂ || ೨ ||

ಮ॥ ಮನಮೆಂಬೊಂದು ಮಹಾಮದದ್ವಿರದಮಂ ಸುಜ್ಞಾನಮೆಂಬಂಕುಶಂ |
ವಿನುತಂ ಕೈವಶಮಾಗಿರಲ್ಕದಱನಾತ್ಮಾಧೀನಮಂ ಮಾಡಿ ಭಾ[2] ||
ಪ್ಪಿನೆ ಪಂಚಾಚರಣಂಗಳಿಂ ಸಕಲಶಾಸ್ತ್ರಜ್ಞತ್ವದಿಂ ರೂ[3]ಢಿವೆ |
ತ್ತನವದ್ಯರ್ ದಯೆಗೆಯ್ಗೆ ಸೂರಿಗಳಶೇಷರ್ ನಮ್ಗೆ ಳಾಚಾರಮಂ || ೩ ||

ಸ್ರ॥ ಹೇಯೋಪಾದೇಯತತ್ವಂಗಳನಱಿಯೆ ಬುಧರ್ ದ್ವಾದಶಾಂಗಾಂಗಬಾಹ್ಯಂ |
[4]ದೇಯಂ ಶಾಸ್ತ್ರಾರ್ಥಮಾಗಲ್ ತಿಳಿಪಿ ತಣಿಪಿ ಮತ್ತಂ ಜಿನಾಧೀಶ್ವರೋಕ್ತ ||
ಶ್ರೇಯೋಮಾರ್ಗಾಗ್ರಗಾಮಿಪ್ರವರರಿವರೆನಲ್ ವಂದ್ಯರಪ್ಪರ್ ವರೋಪಾ |
ಧ್ಯಾಯರ್ ನಿರ್ಮಾಯರೆಮ್ಮಂ ಬಿಡದೆ ತಡೆಯದಿಂ ಪಾಲಿಸುತ್ತಿರ್ಕೆ ನಿಚ್ಚಂ || ೪ ||

---

1. ದಿಂನಿ (ತ) 2. ಭಾಃ, ಭಾಱಿಪ್ಪಿ (ತ) 3. ಱೂಢಿ. 4. ಹೇಯಂ (ಕ. ಖ.) ಧೇಯ (ಘ)

* ಕಂ॥ ಶ್ರೀದಿವಿಜಮುಕುಟಮಣಿಗಣ |
ವೇದಿತಘನದೀಪ್ತಿನಖಮುಖಾವಳಿ ವಿಲಸ ||
ತ್ಪಾದಸರಸೀಜರಾಜಿತ |
ಮಾಧವತನಯಾಂಕಗೀಶನೀವಂ ಸುಖಮಂ ||

ಪಾದಪಂಕೇಜಂ (ಈ ಪಾಠದಲ್ಲಿ ಛಂದಸ್ಸು ಕೆಡುವುದು) ಮಾಧವನಯನಾಂಕ (ಈ ಪಾಠದಲ್ಲಿ ಅರ್ಥವು ಕೆಡುವುದು—ವಿ॥ ಈ ಪದ್ಯವು ಟೀಕಾಪ್ರತಿಗಳಲ್ಲಿ ಮಾತ್ರವೇ ಪ್ರಾರಂಭದಲ್ಲಿ ೧-ನೆಯ ಪದ್ಯವಾಗಿರುವುದರಿಂದ ಟೀಕಾಕಾರನ ಮಂಗಳಪದ್ಯವಾಗಿರಬಹುದೆಂದು ರೇಖೆಯ ಕೆಳಗೆ ಕೊಟ್ಟಿದೆ.

ಮ॥ ಸ್ರ॥ ವಿಲಸದ್ಯೋಗಪ್ರಯೋಗಾಮೃತಜಲನಿಧಿಗಳ್ ಸರ್ವಸಂಕಲ್ಪದೂರರ್ |
ಖಲಕಾಳವ್ಯಾಳಹಾಲಾಹಲವಿರಹಿತ[1]ಸುಧ್ಯಾನಯುಕ್ತರ್ ವಿರಕ್ತರ್ ॥
ಕುಲಶೈಲಾಕಾ(ರ)ಶನಿಷ್ಕಂಪತೆ ತಮಗೆಸೆವಾ ಸಾಧುಗಳ್ ಸಾಧಿತಾತ್ಮೋ |
ಜ್ಜ್ವಲತೇಜರ್ ಪ್ರೇಮದಿಂ ರಕ್ಷಿಸುಗೆ ಮಿಸುಪ ಕಾರುಣ್ಯಭಾವರ್ಕಳೆಮ್ಮಂ ॥ ೫ ॥

*ಶಾ॥ ಹಂಸ†ಜ್ಞಾನದಿನಾಧಿನಾಥರನಘರ್ ಮಾಂಗಲ್ಯರೂಪರ್ ಜಿನರ್ |
ಸಂಸಾರಾಂಬುಧಿಪೋತರುನ್ನತಗುಣರ್ ಸಿದ್ಧರ್ ಸದಾಪಂಡಿತೋ ॥
ತ್ತಂಸರ್[2] ಪಾಠಕರಾಸುಸಂಯುತಯುತಂ ಸಾಧುವ್ರಜಂ ಕೂಡೆ ವಿ |
ಧ್ವಂಸಂಮಾಡಿ ಭವೋಗ್ರದುಃಖವಿಷಮಂ ರಕ್ಷಿಕ್ಕೆ ಭವ್ಯರ್ಕಳಂ ॥ ೬ ॥

ಚಂ॥ ಮದಮುಖಮಾಗಿ ಕಂಜಮದು ಸದ್ಗುಣಮಂ ಕೆಳಗಿಟ್ಟುದಂತುಮ |
ಲ್ಲದೆ ದಿನದೊಳ್ ದಿನಾಂತ್ಯದೊಳೆ ರಾಗವಿರಾಗತೆವೆತ್ತು ದುರ್ಜನ ॥
ತ್ವದೊಳೆಣೆಯಾಗಿ ರಾಜಸಭೆಯೊಳ್ ತಲೆಗುತ್ತುವುದೇವುದೆಂದು ಬಂ |
ದಿದೆ ವರವೆಂದು ವಾಣಿ ನೆಲಸಿರ್ಕೆ ಮದೀಯಮುಖಾರವಿಂದದೊಳ್ ॥ ೭ ॥

ಕಂ॥ [3]ಕೋಮಳಲತಾಂಗವಿಲಸ |
ತ್ತಾಮರಸಮುಖಾನ್ಯಪುಷ್ಟರವಗಜಗತಿಯಿಂ ॥
ಕಾಮವನೋಪಮತನು ವೆಸೆ |
ವಾ [4]ಮಹಿಮಾವನಧಿ ಪದ್ಮೆ ಪಾಲಿಸುಗೆಂದುಂ ॥ ೮ ॥

ಉ॥ ಮಂಗಳದೇವತಾಸದನಸದ್ಗುಣಪಾವನಸಜ್ಜನಾಳಿಸೇ |
ವ್ಯಂ ಗಣಭೃತ್ಪದಾಂಬುರುಹ [5]ಸಂಕುಳಮಾವಗಮಸ್ಮದೀಯಭಾ ॥
ವಾಂಗಪವಿತ್ರಮಾನಸದೊಳಿಂತೆಸೆದಿರ್ಕೆ ಸುರಾಗದೇೞ್ಗೆಯಿಂ |
ಪಿಂಗದೆ [6]ದೋಷಭಾವಭವಬಂಧಮದಾಮಯದುಃಖಸಂಕುಳಂ ॥ ೯ ॥

ಚಂ॥ ಸುರುಚಿರಪಾರ್ಶ್ವಜೈತ್ಯವಿಭುಶೋಭಿತರತ್ನಕಿರೀಟಮೌಕ್ತಿಕಾ |
ಭರಣ ಮನೋಹರಾಂಗ ಧರಣೇಂದ್ರಮನಸ್ಸರಸೀಮರಾಳೆ ಸುಂ ॥
ದರಕರಪಾದಪದ್ಮೆ [7]ಯಭಯಾಂಕುಶಹಸ್ತೆ ಮದಿಷ್ಟಸಿದ್ಧಿಯಂ |
ತ್ವರಿತದೊಳಿತ್ತು ರಕ್ಷಿಪುದು ಪದ್ಮೆ ಸರೋರುಹಸದ್ಮೆ ಸಂತತಂ ॥ ೧೦ ॥

ಚಂ॥ ಅಧಿಗತತತ್ವರುಂ ವಿಗತರೌದ್ರ[8]ರೆನಿಪ್ಪ ಸಮಂತಭದ್ರರಂ |
ಮಧುರಮನೋಹರಾಂಗವಿನಯೋಕ್ತನಯಾರ್ಥವಚಃಪ್ರಯುಕ್ತರಂ ॥
ವಿಧುನಿಭಕೀರ್ತಿಸಂಯಮಪವಿತ್ರರ[9]ನೂರ್ಜಿತಪುಣ್ಯಪಾತ್ರರಂ |
ಬುಧತತಿವಂದ್ಯರಂ ಪೊಗೞ್ವೆನಾದರದಿಂದಮೆ ಪೂಜ್ಯಪಾದರಂ ॥ ೧೧ ॥

---

1. ಸದ್ಧ್ಯಾ (ತ) 2. ಮಂಜುಳಕೀರ್ತಿಯುಕ್ತರನಿಶಂ. 3. ಕೋಮಳೆ (ಕ) 4. ಮಹಿಮೆಮನ ವಡೆ....ಗೆಮ್ಮಂ (ಕ) 5. ಸಂಕುಳಮಸ್ಮದೀಯಭಾ. 6. ಪಿಂಗದೊಳ್ಪವದಬಂಧ (ಘ); ದೋಷಭಾರ, ಪಿಂಗದೆ ಪಿಂಗೆದೋಷ (ತ) 7. ವಿಜಯಾಂ, ವಿಭಯಾ (ತ) 8. ರುಮ. 9. ಮಾರ್ಜಿತ (ಕ)

* ೬, ೮ ನೆಯ ಪದ್ಯಗಳು (ತ) ಪ್ರತಿಯಲ್ಲಿಲ್ಲ. †. ಜ್ಞಾನರಿಳಾ (ಘ) (ಇದು ಕ ಪ್ರತಿಯಲ್ಲಿ ೨ ನೆಯ ಪದ್ಯವಾಗಿದೆ ೨ ರಿಂದ ೫ ರ ವರೆಗಣ ಪದ್ಯಗಳು ಇಲ್ಲ.)



ಮ॥ ಸ್ಥಿರಮಾಗಿರ್ಕೆ ಮದೀಯಮಾನಸದೊಳಂ ಶ್ರೀವೀರಸೇನವ್ರತೀ |
ಶ್ವರನಾ ಶ್ರೀಪದಕೋಮಳಾರುಣಪಯೋಜದ್ವಂದ್ವ[1]ಮಸ್ಮತ್ಪರಾ ॥
ದುರಭಿಪ್ರಾಯದಿನಾದ ದುಷ್ಕೃತತಮಂ ಪಿಂಗಲ್ಕೆ ನೈರ್ಮಲ್ಯದೃ |
ಷ್ಟಿರಮಾದೇವತೆ ರಾಗದಿಂ ನಿಲೆ ಚಿರಂ[2] ತತ್ಖ್ಯಾತಿವಿಖ್ಯಾತಿಯಿಂ ॥ ೧೨ ॥

*ಉ॥ ಬಂಧವಿದೂರನಂ ಭುವನಬಾಂಧವನಂ ಸಕಲಜ್ಞನಪ್ಪಸೀ |
ಮಂಧರನಂ [3]ಮನೋಮುದದಿನೆಯ್ದಿ ತದೀಯವಚಃಪಯೋಧಿಯೊಳ್ ॥
ಸಂಧಿಸಿ ಬುದ್ಧಿಮಂದರಮನಾ ಸಮಯಾಮೃತದಿಂದೆ ಮುಂ [4]ಕೃಪಾ |
ಸಿಂಧುವೆ ಕೊಂಡಕುಂದಮುನಿ ಪಾಲಿಸಿದಂ ಬುಧರಂ ಧರಿತ್ರಿಯೊಳ್ ॥ ೧೩ ॥

ಮ॥ ತಪದೊಳ್ಪಿಂ ಮನವೊಲ್ದು ದೇವತೆಯೆ ತತ್ಸಿದ್ಧೌಷಧಂ ಲೇಪಮಾ |
ಗೆ ಪದಾಂಭೋಜತಳಕ್ಕೆ ಪೂಸಲದಱಿಂ ವ್ಯೋಮಾಧ್ವದಿಂದಾ ವಿದೇ ॥
ಹಪರಕ್ಷೇತ್ರಮನೆಯ್ದಿ ತೀರ್ಥಕರಸಚ್ಛ್ರೀಮೂರ್ತಿಯಂ ಕಂಡು ಕೀ |
ರ್ತಿಪ ಪುಣ್ಯಕ್ಕೆ ಸುಪಾತ್ರವಾದ ಮಹಿಮಂ ಶ್ರೀಪೂಜ್ಯಪಾದೋತ್ತಮಂ ॥ ೧೪ ॥

ಮ॥ ಭಯಮಂ ಮನ್ಮಥತಸ್ಕರಂಗಭಯಮಂ ಭವ್ಯರ್ಗೆ ರಾಗಾದಿಗಂ |
ಕ್ಷಯಮಂ ಸುಶ್ರುತದೇವಿಗಂ ವಿನಯಮಂ ವೈಶೇಷಿಕಾದ್ಯರ್ಗೆ ವಿ ॥
ಸ್ಮಯಮಂ ತಮ್ಮ ತಪೋಗುಣಂಗಳಿ [5]ನಶೇಷಜ್ಞತ್ವದಿಂದಿತ್ತನಿ |
ರ್ಭಯನಂ ಶ್ರೀಗುರುಪೂಜ್ಯಪಾದಮುನಿಯಂ ಸದ್ಭಾವದಿಂ ವಂದಿಪೆಂ ॥ ೧೫ ॥

ಚಂ॥ ಅನುಪಮಭಾನುಕೀರ್ತಿಮಲಧಾರಿಮುನೀಶ್ವರನಿಂತಿರಲ್ಕೆ ತ |
ತ್ತನುವಿನೊಳಂ ತಿಲಾಂಶದನಿತಂ ಮಲಮಂ ತೆಗೆದೊರ್ವೆ ಸರ್ಪದ ॥
ಷ್ಟನ ತನುವಿಂಗೆ ಪೂಸೆ ವಿಷಮಾಗಳೆ ಪಿಂಗುಗುಮೆಂದೊಡಿನ್ನು ತ |
ನ್ಮನಿಯ ತಪಃಪ್ರಭಾವಮನದೇವೊಗೞ್ವರ್ ನರರೊಂದು ಜಿಹ್ವೆಯೊಳ್ ॥ ೧೬ ॥

ಕಂ॥ [6]ಹೇಮಾಂತಂ ತತ್ಕಾಂತಂ |
ನಾಮಾಂತಗಜಾಂತಮಾದ ಶಾಸ್ತ್ರಸುಹೋರಾ ॥
ಮಾಮಹಿಮೆಗೆ ನೆಱೆ ನೋಂತಂ |
ಸೋಮಂ ಜೈನಾಗಮಾಮೃತಾಂಬುಧಿಸೋಮಂ ॥ ೧೭ ॥

ಚಂ॥ ಮದಮದನಾಂಗಗೋಷ್ಠಿ ಪುದಿದಿರ್ದ ವಿಮೋಹವಿಷಾದಚಿಂತೆ ಪೊ |
ಣ್ಮಿದ ಮದಲೋಭಮೆಂಬಿವಿನಿತುಂ ತಲೆದೋಱದ ಚಿತ್ತಶುದ್ಧಿಯಿಂ ॥
ದೊದವಿದ ಕೀರ್ತಿಯಿಂದಮರಸಂತತಿ ಯರ್ಚಿಸಿ ವಂದಿಸುತ್ತೆ ಮಾ |
ಡಿದ ನುತಿಯಿಂದೆ ತಾನಮರಕೀರ್ತಿಯೆನಲ್ ನೆಗೞ್ದಂ ಧರಿತ್ರಿಯೊಳ್ ॥ ೧೮ ॥

---

1. ಮಾಸತ್ಸುದೀ (ಘ) 2. ಮನೋಮುದದಿನೆಯ್ದಿ (ಕ) 3. ತಾಂಪೂರ್ಣ (ತ) 4. ಕೃಪಾಳೇಂದುವೆ ಕೊಂಡಕುಂದ ಪಾಲಿಸಿದಂ. 5. ನಶೇಷದಿನಿತ್ತನಿ. 6. ಹೇಮಂತಾಂ ತರ್ಕಾಂತ ಗಜಾಂತವಾದ ಶಾಸ್ತ್ರನು ಹೋಮಗಾಮಾ.

* ಕ. ಘ. ಪ್ರತಿಯಲ್ಲಿ - ವಚನ— ಇಂತು ವಂದಿಸಿ ಸರ್ವಜನೋಪಕಾರಿಯಪ್ಪ ಖಗೇಂದ್ರಮಣಿದರ್ಪಣಮೆಂಬ ವೈದ್ಯಗ್ರಂಥಮಂ ಪೇೞ್ವೆನದೆಂತೊಡೆ— ಎಂದು ಈ ಗದ್ಯವಾದ ಬಳಿಕ " ಶ್ರೀ ಜಿನಯೋಗಿಯಿಂ " ಎಂಬ ಪದ್ಯದಿಂದ ಮುಂದುವರಿದೆ.

ಉ|| ಆಮುನಿಮುಖ್ಯಶಿಷ್ಯತಿಲಕಂ ನೆಗೞ್ದಿಂ ಸಲೆ ಧರ್ಮಭೂಷಣಂ |
ಶ್ರೀಮದಶೇಷಭವ್ಯಜನಸೇವ್ಯಪದಾಂಬುರುಹದ್ವಯಂ ಸದಾ ||
ಕಾಮಮದೇಭಕೇಸರಿ [1]ಜಿನಾಗಮವಾರ್ಧಿಸುಧಾಕರಂ ಸ್ಥಿರಂ |
ಭೂಮಹಿಳಾಧಿನಾಥಮಹಿತಂ ಮುನಿಸಂಘಸರೋಜಭಾಸ್ಕರಂ || ೧೯ ||

ಕಂ|| ಧ್ಯಾನತಪೋರತ್ನಮುಮಂ |
ಭಾನುಪ್ರತಿಮಾನಕೀರ್ತಿಯಂ ವಂದಿಸುವೆಂ ||
ಜ್ಞಾನೋದಯಗುಣಮಣಿಯಂ |
ಭೂನುತನಂ ವರ್ಧಮಾನಮುನಿಪುಂಗವನಂ || ೨೦ ||

ಚಂ|| ಶುಭತರಭಾವನಾನಲನ[2] ಪೆರ್ಚುಗೆಯಿಂದುರಿ ತಳ್ತುವೀಗಳೀ |
ವಿಭವದ ಕರ್ಬುವಿಲ್ ಕಮಲ[3]ನಾಳದ ನೂಲರಲಂಬು ಮನ್ಮಥಾ ||
ತ್ರಿಭುವನಮಂ ಭಯಂಗೊಳಿಸಿದೆಂ ಗಡಮೆಂಬತಿಗರ್ವಮೇಕೆ ಮಾ |
ಣಭಿನವಧರ್ಮಭೂಷಣಮುನೀಶನ ಮುಂದೆ ಭವತ್ಪ್ರತಾಪಮೇಂ || ೨೧ ||

ಕಂ|| ಖಂಡಿಸಿ ಮಿಥ್ಯಾತಮಮಂ |
ಕೊಂಡಾಡಿ ಜಿನೇಂದ್ರಮಾರ್ಗಮಂ ಬೆಳಗಿ ಮಹೀ ||
ಮಂಡಲದೊಳೆಸೆದನಭಿವನ |
ಪಂಡಿತಚಂಡಾಂಶುಗಂ ಸಮಪ್ರಭರೊಳರೇಂ || ೨೨ ||

ಗುರುಕುಚೆಯರ ಮಱೆಯಿಂದಂ |
[4]ಸ್ಮರನಾರ್ದಿಸಲರಲ ಸರಲ್ಗಳಿಂ ತನ್ನ ತಪ ||
ಶ್ಚರಣದವಾಗ್ನಿಯಿನುರಿಪಿದ |
ವರಲಕ್ಷ್ಮೀಸೇನಮುನಿಪನಂ ವಂದಿಸುವೆಂ || ೨೩ ||

ಮಾಣಿಕ್ಯನಂದಿ ಮುನಿಪದ |
ಮಾಣಿಕ್ಯಜ್ಯೋತಿಯಿರೆ ಮನೋಗೇಹದೊಳಂ ||
ಕಾಣಲರಿದಾವುದಿಳೆಗ |
ಕ್ಷೂಣಜಿನಾಗಮದೊಳಖಿಳವಸ್ತುಸ್ಥಿತಿಯಂ || ೨೪ ||

ಸಾರಂ ಸಾರತ್ರಿತಯಂ |
ಮಾರಮದಪ್ರಹರಣೈಕದಕ್ಷನ ಮತದೊಳ್ ||
ಧಾರಿಣಿಯೊಳೊಪ್ಪಿದಂ ತ |
ತ್ಸಾರತ್ರಯವೇದಿ [5]ಯೆನಿಸಿ ಕೇಶವವರ್ಯಂ || ೨೫ ||

1. ಜಿತಾಬ್ಧಿಸುಧಾ. ಜಿನಾರ್ಥಿಸುಧಾ. 2. ....ಪೆರ್ಚುಗೆದುರಿದತ್ತದೀಗ. 3. ನಾಳದನೂನಲ(ರ)ಲಂಬು, ನಾಳದಮಾಮಲಳಂಬು. 4. ಸ್ಮರನಾರ್ದಿಸೆ ಅರಲಸರಲ್ಗಳಂ ತನ್ನ. 5. ಯೆನಿಪ (ಕ)



*ಕಂ|| ಆರ್ಮೊದಲೊಳಮರಿನೃಪರಂ |
ನಿರ್ಮೂಲಿಸಿ ಕಳೆದುಮೇಕಚತ್ವಾರಿಂಶ ||
ತ್ಕರ್ಮದ ಬಂಧಮನಱಿದಾ |
ನಿರ್ಮಳನಂ ಧರಣಿಯಲ್ಲಿಯುಂ ಪೊಗೞಿದರಾರ್ || ೨೬ ||

ದಯೆಯಿಂ ಜೀವಂಗಳನೋ |
ವಿಯೆ ಮನ್ಮಥನೆಂಬ ತಸ್ಕರಂಗಿತ್ತು ಮಹಾ ||
ಭಯಮುಮನಶ್ರಾಂತಂ ಮು |
ಕ್ತಿಯನೆಯ್ದುವ ಮುನಿಗಳೆನಿಬರನಿಬರ್ಗೆಱಪೆಂ || ೨೭ ||

ಪಂಡಿತಜೈನೋತ್ತಮನಿಜ |
ಮಂಡಲಮಂ ಜೈನಗೃಹಸಹಸ್ರಂಗಳುಮಂ ||
ದಂಡಾಧಿನಾಥಮುಖ್ಯನ |
ಖಂಡಿತಮೆನೆ ಪಾಲಿಸುತ್ತುಮಿರ್ಪಂ ಬೊಪ್ಪಂ || ೨೮ ||

ಸ್ರ|| ಸದ್‌ಜ್ಞಾನೋಪಜ್ಞಧರ್ಮಸ್ಥಿತನುತ(ವರ)ಸಮ್ಯಕ್ತ್ವಚಾರಿತ್ರಯುಕ್ತಂ |
ಕುಜ್ಞಾನಾಜ್ಞಾವಿದೂರೀಕೃತತರಜಿನಸಂಕಲ್ಪಿತಂ ಕಲ್ಪಭೂಜಂ ||
ಪ್ರಜ್ಞಾವಿಜ್ಞಾನಭೇದೋದ್ಭವವಿಮಲಿನವೈದಗ್ಧ್ಯದಗ್ಧಾಘಕೈವ |
ಲ್ಯಜ್ಞಾನಾಧಾರ ಭೂಭೂವಿಭುಗುಪಸಚಿವಂ ಬೈಚಮಂತ್ರೀಶಪುತ್ರಂ || ೨೯ ||

ವ|| ಅಂತು ಪೊಗೞ್ತೆವೆತ್ತುವೊಪ್ಪಂ ಬಡೆದಯಿರುಪಗ ದಂಡಾಧೀಶನ ಸತ್ಕೀರ್ತಿಯೆಂತೆಂದೊಡೆ.

†ಕಂ|| ಇರುಗಪಮಂತ್ರಿಯ ಮತಿಸಾ |
ಗರಮಂ ಬೆರಸಿದುವಶೇಷವಿದ್ಯಾನದಿಗಳ್ ||
ನಿರುಪಮಚರಿತ್ರರತ್ನಾ |
ಕರನದಱಿಂ ತಿರ್ದುವೆನಿಪನಾ ಗುಣನಿಳಯಂ || ೩೦ ||

ವಚನಂ—ಎಂದು ವಂದಿಸಿ ಸರ್ವಜನೋಪಕಾರಿಯಪ್ಪ "ಖಗೇಂದ್ರಮಣಿದರ್ಪಣ" (ದೊಳ್ ನಿರ್ವಿಷೀಕರಣಮಂತ್ರಯಂತ್ರೌಷಧ) ಮೆಂಬ ವೈದ್ಯಗ್ರಂಥಮಂ ಪೇೞ್ವಿನದೆಂತೆಂದೊಡೆ—

ಉ|| ಶ್ರೀಜಿನಯೋಗಿಯಿಂ ಪ್ರಥಿತಮಾದುದು ಯಾದವವಂಶ[1]ಮುಂ ಕರಾಂ |
ಭೋಜದೊ[2]ಳಂತವರ್ ಪಿಡಿದ [3]ಕುಂಚದ ಪೆರ್ಬುಲಿಯೊಂದು ಕಾರಣಂ ||
ಯೋಜನೆಗಾಯ್ತು ನಾಮಮದು [4]ಹೊಯ್ಸಳವೆಂದು ತದೀಯರಾಜ್ಯಮುಂ |
[5]ರಾಜಿಪುದಿಂತು ತಾನನುಗತಾರ್ಥಮದಾಗಿರೆ ಹೊಯ್ಸಳಾ[6]ಖ್ಯದಿಂ || ೩೧ ||

1. ಮುಕುರಾಂ. 2. ಳಂದವರ್. 3. ಕುಂಚದೆ ಪೆರ್ಬುಗ್ರಿ (ಖ). 4. ಹೊಯ್ಸರಮೆಂದು. 5. ರಾಜಿಸುತಿಂತು. 6. ಖ್ಯೆಯಿಂ (ಕ. ಖ.)

* ಇಲ್ಲಿಂದಮುಂದಣ ೫ ಪದ್ಯಗಳು "ತ" ಪ್ರತಿಯಲ್ಲಿಮಾತ್ರವಿದೆ.

† ಈ ಪದ್ಯವಾದಮೇಲೆ ೨೭ ನೆಯ ಪದ್ಯವಿದೆ (ತ)

ವ|| ಅದೆಂತೆಂದೊಡೆ.—

ಚಂ|| [1]ಪರಿವೃತಮಾದ ವಾರ್ಧಿಯೆನಿಪುದ್ಧಸರೋವರಮಧ್ಯದೊಳ್ ನಿರಂ |
[2]ತರಮಿರೆಯೆಂಬ ಪಂಕಜದ ಕರ್ಣಿಕೆ[3]ಯಂತೆ ಸುಮೇರುವಂತದ ||
ಕ್ಕುರುತರದಕ್ಷಿಣಾಶೆ [4]ಯೊಳಗಿರ್ಪುದು ಹೊಯ್ಸಳದೇಶ[5]ಮಂತದಾ |
ಧರೆಗನುರಾಗಮಂ ಹರಿಹರಕ್ಷಿತಿಪಂ ಕೊಡು[6]ತಿರ್ಪನೊಲ್ಮೆಯಿಂ || ೩೨ ||

ಚಂ|| ಸಕಳಕಳಾಕಳಾಪಪರಿಪೂರ್ಣಮಹಾಮತಿಗಳ್ಗೆ ಸತ್ಯಭಾ |
ವಕ ಕವಿವಾದಿವಾಗ್ಮಿಗಮಕಿಪ್ರಕರಕ್ಕವನೀಸುರರ್ಗೆ ಮಾಂ ||
ತ್ರಿಕರಿಗಭೀಪ್ಸಿತಪ್ರದನಮೇರುಸಮಾನತೆಯಿಂ ವಿರಾಜಿಕುಂ |
ಪ್ರಕಟಿತಧರ್ಮನೀ ಹರಿಹರಾವನಿಪಂ ನೃಪವಂಶಭೂಷಣಂ || ೩೩ ||

ಶಾ|| ದೂರೋ[7]ತ್ಸಾರಿತವೈರಿಭೂಪನಚಳಶ್ರೀಹೃದ್ಯವಿದ್ಯಾಸ್ಪಕೂ |
ಪಾರಾವಾರಗುಣಂ ಧರಾಮರಸಮೂಹಾನಲ್ಪಕಲ್ಪದ್ರುಮಂ |
ಕ್ರೂರಾತ್ಮಾರಿಮದೇಭಭೈರವಮಹಾಕಂಠೀರವಂ ಸದ್ಗುಣಾ ||
ಧಾರಂ ಧಾರಿಣಿಯಂ ಚಿರಂ ಹರಿಹರಕ್ಷ್ಮಾಪಾಲಕಂ ಪಾಲಿಪಂ || || ೩೪ ||

ವ|| ಅಂತಾ ನೃಪವಂಶತಿಳಕಂ ಹರಿಹರೇಶ್ವರನಾಳ್ವ ಸರ್ವಸುಖಾವಲಂಬನಮಪ್ಪ ಪಲವುಂ ದೇಶಂಗಳೊಳ್.

ಕಂ|| ಭಾವಿಸಲರಿದದಱರವಂ |
ಭೂವನಿತೆಯ ಲಪನದಂತಿರಾವಗಮೆಸೆಗುಂ ||
ದೇ(ದೀ)ವಳಿಗೆಯೆಂಬ ದೇಶಂ |
ದೇವರ್ಗಣಮಿಲ್ಲಮಲ್ಲಿಯಖಿಳಸುಖಂಗಳ್ || ೩೫ ||

ಉ|| ಸನ್ನುತಮಪ್ಪ ದೇವಳಿಗೆನಾ[8]ಡಿಳೆಯೊಳ್ [9]ಖರದಂಡಮುಂ ಸಮು |
ತ್ಪನ್ನಕರಪ್ರಪೀಡೆ ಕಠಿನತ್ವ(ಮಿ)ಮು(ವಿ)ಮಿಲ್ಲೆನುತಿರ್ಪರೆಲ್ಲರುಂ ||
[10]ನನ್ನಿಯದೇ ಸರಂಗಳೊಳೆ ಧೇನುಕುಚಂಗಳೊಳಂಗನಾಜನ |
ಸ್ವರ್ಣಘಟೋಪಮಾನಕುಚಯುಗ್ಮದೊಳುಂಟದ[11]ಱಂ ಪ್ರಸಿದ್ಧಮೇ || ೩೬ ||

[12]ಶಾ|| ಚೋರಾಂಗತ್ವನಿಷೇಧಮಾರ್ಗಮುಪವಾದಂ ತದ್ವಿಘಾತಾಖ್ಯಮುಂ |
ಟಾರಾಜಂ ಪರಿರಕ್ಷಿಸಿರ್ಪ ಜನತಾವಿಚ್ಛಬ್ದಶಾಸ್ತ್ರಂಗಳೊಳ್ ||
ಸಾರಾಪೀಡನಮೆಂಬುದುಂಟು ವನಿತಾಬಿಂಬಾಧರಸ್ಥಾನದೊಳ್ |
ಧೀರಂ ಭಾವಿಪೊಡಿಲ್ಲ ಮತ್ತೆ ನರನಾರೀವೃಂದದೊಳ್ ನಿಶ್ಚಯಂ || || ೩೭ ||

1. ಪರಿಕೃತ (ತ) ಮಾದವಾರಿ ನಿಧಿಯೆಂಬರೋ (ಘ)(ಖ) 2. ತರಮಿಳೆಯೆಂಬ, ತರಧರೆಯೆಂಬ (ತ) 3. ಯಂತಿರೆಮೇರು (ಖ) 4. ಯೊಳಮಿರ್ಪುದು (ತ) 5. ಮಾವಗಂ. 6. ತಿರ್ಪನಾವಗಂ. (ತ) ತಿರ್ಪನದಾವಗಂ? 7. ಚ್ಛಾದಿತ (ತ), 8. ಡೊಳೆಯಾ, ಈ ಪದ್ಯ (ಕ. ಖ.) ಪ್ರತಿಗಳಲ್ಲಿಲ್ಲ (ಟೀ) ೧೭-ನೆಯ ಪದ್ಯವಾಗಿದೆ. 9. ವರದಂಡಮುಂ (ಖ) 10. ನನ್ನಿಯತಿಪ್ರತಾನದೊಳಮಾರಯೆ ಯೌವನ ಯುಕ್ತಕಾಮಿನೀ। ಸೊನ್ನ (ಸ್ವರ್ಣ) ಘಟೋ (ಕ) 11. ಱೊಳ್. 12. ಇಲ್ಲಿಂದ ಮುಂದಣ ೩ ಪದ್ಯಗಳು "ತ" ಪ್ರತಿಯಲ್ಲಿಮಾತ್ರ ಇವೆ.



ಕಂ|| ಬಾಲಕರೊಳ್ ನಿರ್ಲಜ್ಜತೆ |
ಮಾಲೆಯೊಳಂ ವರ್ಣಸಂಕರಂ ಕುಟಿಲತ್ವಂ ||
ಬಾಲೆಯರ ಕುರುಳೊಳಲ್ಲದೆ |
ಪೋಲಿಪೊಡಾ ಜನದ ಮನದೊಳಿಲ್ಲಮಿವೆಂದುಂ || || ೩೮ ||

ಆನಾಡೊಳ್ ಸೊಗಯಿಸುಗುಂ |
ಭೂನುತವೆಂದೆನಿಪ ಚಿಕ್ಕಮುಗುಳಿಯದುಂ ಸ್ವ ||
ಸ್ಥಾನಪ್ರಾಪ್ತಿಯನೀಗುಂ |
ಜ್ಞಾನನಿಧಾನರ್ಗಶೇಷಸುಕವಿಜನಕ್ಕಂ || || ೩೯ ||

ವ|| ಅದೆಂತೆಂದೊಡೆ.

[1]ಕಂ|| ಆಜನಪದಕಾಂತಾಮುಖ |
ರಾಜೀವದವೋಲ್ ಕರಂ ಮನಂಗೊಳಿಸಿ ರಮಾ ||
ಭಾಜನಮೆನೆ ಮುಗುಳಿ ಕರಂ |
ರಾಜಿಸುಗುಂ ಸಕಲಸುಖದ ಪೊಂಪುಱಯಿಂದಂ || ೪೦ ||

[2]ಚಂ|| ಮದನಶರಂಗಳಂತೆಸೆವ ಕಾಂತೆಯರಿಂ ವನವೃಕ್ಷಮಾಲೆಯಿಂ |
ಮೃದುಮಧುರಂಗಳಪ್ಪ ಫಲದಿಂ ಕುಸುಮಾವಳಿಯಿಂ ಸುನರ್ತಕೀ ||
ಸುದತಿಯರಿಂದೆ ಗಾಯಿಕೆಯರಿಂದೆ ಸಮುಗ್ರತೆವೆತ್ತದೆತ್ತಲುಂ |
ಮುದಮನದಾಗಿಕುಂ ವಿಷಯಪಂಚಕದಿಂ ಮುಗುಳೀಪುರಂ ಕರಂ || ೪೧ ||

ಮ|| ವರಪದ್ಮಾಕರದಿಂದೆ ಪುಷ್ಪಿತಕುಜವ್ರಾತಂಗಳಿಂ [3]ಷಟ್ಪದ |
ಸ್ವರದಿಂದೊಪ್ಪುವ ಗಂಧಶಾಳಿವನದಿಂದುತ್ತುಂಗಚೈತ್ಯಾಲಯೋ ||
ತ್ಕರದಿಂ ಹರ್ಮ್ಯಗೃಹಾಳಿಯಿಂ ಸುಜನರಿಂ ಸಂಪತ್ತಿಯಿಂದಾವಗಂ |
[4]ನಿರುತಂ ಶ್ರೀಮುಗುಳೀಪುರಂ ಸೊಗಯಿಕುಂ [5]ವಿಶ್ವಂಭರಾನೂಪುರಂ || ೪೨ ||

ಕಂ|| ಅದಱಧಿಪ[6]ರಬ್ಜಗರ್ಭನ |
ವಿದಿತಪರಂಪರೆಯಿನೆಸೆವ ವಂಶಾರ್ಣವದೊಳ್ ||
ವಿಧು ವುದಯಿಪಂತಿರೊಗೆದರ್ |
ಸದಮಳಗುಣನಿಳಯ[7]ರಾದ್ಯರಗಣಿತರವರೊಳ್ || ೪೩ ||

ಉ|| ಶ್ರೀಜಿನಪಾದಪದ್ಮಮಧುಪಂ [8]ಪರಮಾಗಮದತ್ತಚಿತ್ತನಂ |
ಭೋಜದಳೇಕ್ಷಣಂ ಪರಮಲಕ್ಷಣಲಕ್ಷಿತ [9]ಪುಣ್ಯದೇಹದಿಂ ||
ರಾಜಸಮಾನ ನಿಂದ್ರವರ[10] ವೈಭವ ಸಜ್ಜನಪಾರಿಜಾತನೆಂ |
ದೀ ಜಗ[11]ಮುಱ್ತಿಯಿಂದೆ ಸಲೆ ಬಣ್ಣಿಸುಗುಂ ವಿಭು ಮಂಗರಾಜನಂ || ೪೪ ||

1. ೧೮. (ಕ. ಖ.) ಇಲ್ಲ. 2. ಈ ಪದ್ಯವಿಲ್ಲ (ಕ. ಖ. ತ.) 3. ಷಟ್ಪದಾಸ್ಪದದಿಂ. 4. ನಿರತಂ (ಖ) 5. ಭರಾಭೂಷಣಂ, ಭರಾಚಕ್ರದೊಳ್, ಭರಾಕ್ಷೇತ್ರದೊಳ್. 6. ಪನ....ರೊಗೆದಂ, ಸದಮಳಗುಣನಿಳಯಂ ಕಾವ್ಯರಗಣಿತರವರೊಳ್ (ಕ). 7. ಳಯಮಂಗರಾಜವರೇಣ್ಯಂ || ೨೦ || (ಖ) 8. ಪರಮಾತ್ಮ ವಿಲೀನ ಚಿತ್ತನಂ (ಖ) 9. ದಿವ್ಯದೇಹದಿಂ (ಖ) 10. ಭವಸಜ್ಜನಪಾರಿ (ಖ), ವೈಭವದಿಂ ಜನಪಾರಿಜಾತ (ಘ) ವೈಭವನಾಶ್ರಿತಪಾರಿಜಾತ, ಎಂದಿರಬಹುದು. 11. ಮುತ್ತ್ಯಿ

* ಚಂ|| ಸುರುಚಿರವೃತ್ತರತ್ನಸದನಂ ಜನರಕ್ಷಣದಕ್ಷನಬ್ಜಮಂ |
ದಿರೆಯ ಸುಜನ್ಮಭೂಮಿ ಪುರುಷೋತ್ತಮಸಂಗತನಾವಗಂ ಶುಭಾ ||
ಕರವಿಲಸತ್ಸರಸ್ವತಿ ನಿರಂತರಮಿರ್ಪುದಱಿಂದೆ ಸಿಂಧುಗಂ |
ದೊರೆ ಮುಗುಳೀಪುರಪ್ರಭು ವಿದಗ್ಧಶಿಖಾಮಣಿ ಮಂಗಣೋತ್ತಮಂ[1] || ೪೫ ||

[2]ವ|| ಇಂತನೇಕನೆಗೞ್ತೆಗೆ (ಪೊಗೞ್ತೆಗೆ) ನೆಲೆಯಾದ ವಿಭುಲಲಾಮನ ಮನೋಮರಾಳಕೇಳಿಗೆ ಸರಸಿಜಾಕರಮಾದ

ಚಂ|| ಕಲನಿನದಂ ಪಿಕಸ್ವನಮೆ ತದ್ವಿಳಸದ್ವಿಮಳಾಂಗಿಯಂಗಕೋ |
ಮಲಲತೆ ತಾನೆ ಕಾಮಲತೆ [3]ಪೂಗಣೆಗಳ್ ತದಪಾಂಗಮಿಂದುಮಂ ||
ಡಲಮದು ಮಂಗಳಾನನಮೆನಲ್ ಕುಸುಮೇಷುಗೆ [4]ಪೆರ್ಮಲೆಯಾಕೆ ನಿ |
ಶ್ಚಲ ಬಲಮಾಗಿರಲ್ ಮನಮ[5]ನಂಡಲೆವಳ್ ನಲಿದಾತ್ಮನಾಥನಾ || ೪೬ ||

ಕಂ|| ಆಸಮ್ಯಕ್ತ್ವನಿಧಾನೆಗೆ |
ವಾಸವನ [6]ಸತೀಸಮಾನೆಗನ್ಯೂನಕಲಾ ||
ವಾಸವಿಧುವದನೆಗುೞಿದರ್ |
[7]ಪಾಸಟಿಯಪ್ಪರೆ ಮನುಷ್ಯಸತಿಯರ್ ಕ್ಷಿತಿಯೊಳ್ || ೪೭ ||

ಚಂ|| ಎನೆ ನೆಗೞ್ದಾ ತ್ರಿಲೋಕಪತಿ ಪಾರ್ಶ್ವಜಿನಾಂಘ್ರಿಸರೋಜಭೃಂಗ ಸ |
ನ್ಮನುಜಮುಕುಂದನೆಂದೆನಿಪ ತದ್ವಿಭುಗಂ ಮೃಗನೇತ್ರೆಯಪ್ಪ [8]ತ ||
ನ್ಮನವಿಲಸಲ್ಲತಾಲಲಿತೆ ಪೆರ್ಮಲೆಗಂ ಜನಿಸಿರ್ದಪಂ ಸದಾ |
ಘನತರಕೀರ್ತಿ ಪುಣ್ಯಕರಮೂರ್ತಿ ಮಹಾಪ್ರಭು ಮಂಗಮನ್ಮಥಂ || ೪೮ ||

ಶಾ|| ಶ್ರೀಮನ್ಮಂಗಣವರ್ಯನಾ ಗುಣಗಣಾಲಂಕಾರನೀಡ್ಯಾನುಜಂ |
ಪ್ರೇಮಕ್ಕಾಸ್ಪದಮಪ್ಪ ಪುತ್ರವಿನುತರ್ ಜವ್ವಾನೆ ಮೇಧಾವಿಯೆಂ ||
[9]ಬೀಮೂವರ್ ವಿಭುಮಂತ್ರವುತ್ಸಹಮೆನಿಪ್ಪಾ ಶಕ್ತಿಯಿಂತಾಗಿರ |
ಲ್ಕೀಮಾನ್ಯಂಗೆ ಸಮಾನನಾವನೆನಿಪಂ ವಿಶ್ವಂಭರಾಚಕ್ರದೊಳ್ [10] || ೪೯ ||

---

1. ತ. ಪ್ರತಿಯಲ್ಲಿ ಈ ಪದ್ಯವಿಲ್ಲ (ಕ. ಖ. ತ.) ೨೨-ನೆಯ ಪದ್ಯವಾಗಿದೆ. 2. ಈ ಗದ್ಯವಿಲ್ಲ (ಘ) ವ|| ಇಂತು ನಿರಂತರಂ ಸಕಲಜನಂ ಪೊಗೞೆ ವಿದ್ವದ್ಗೋಷ್ಠಿಯೊಳಿರುತ್ತು ಮಿರಲೊಂದು ದಿನಂ.... ಎಂಬ ಗದ್ಯವಾದ ಬಳಿಕ "ಕನ್ನಡದಿಂ ಸಮಸ್ತಜನ" ಎಂಬ ಪದ್ಯವಿದೆ (ಕ. ಖ.) 3. ಪೂಗಣೆಯಿಂದದು (ಘ) 4. ಪೆಂಮಿಯುನಿ, ಪೆರ್ಮೆಯು. 5. ಚ್ಚಲಜಲ (ಕ) ನಂಡಲೆವಳ್ನಲಿನಾಥನ, 6. ಸತೀ; ಶಚೀ. ಸುದತೀ, 7. ಪಾಸಟಿವರ್ಪರೆ. 8. ಮನ್ಮನ (ಕ) ಮನ್ಮದ (ತ)

9. ಬೀಮೂವರ್ ನಯುನಂಬೊಲಾಗಲಭವಂ ಸಾದೃಶ್ಯಮೆಂಗನ್ಯರೇಂ |
ಸಾಮಾನ್ಯಂ ದೊರೆಯೇ ಮಹಾವಿಭುತೆಯಿಂ ವಿಜ್ಞಾನದಿಂ ಮೈಮೆಯಿಂ || (ಕ)

10. ಚಂ|| *ವರತರವೃತ್ತರತ್ನಸದನಂ ಜನರಕ್ಷಣದಕ್ಷನಬ್ಜಮಂ |
ದಿರೆಯ ಸುಜನ್ಮಭೂಮಿ ಪುರುಷೋತ್ತ†ಮಸಂಗತನಾವಗಂ ಶುಭಾ ||
ಕರವಿಲಸತ್ಸರಸ್ವತಿ ನಿರಂತರಮಿರ್ಪ್ಪುದಱಿಂದೆ ಸಿಂಧುಗಂ |
ದೊರೆ ಮುಗುಳೀಪುರಪ್ರಭು ವಿದಗ್ಧಶಿರೋಮಣಿ ಮಂಗಣೋತ್ತಮಂ ||

ಇದು ಭಿನ್ನಪಾಠವುಳ್ಳ ೪೫ ನೆಯ ಪದ್ಯ (ತ) ಪ್ರತಿಯಲ್ಲಿ ಈ ಸ್ಥಳದಲ್ಲಿದೆ. * ಶುಭತರವೃತ್ತರತ್ನಸದನಂ. † ಮಸಂಗತಿಯಾ.... ಕ್ಕೆಯೆನಿಪ್ಪ, ಮನಂಗಯಾವಗಂ ಮಹಾಭವಸಹ.



ಚಂ|| ಸುರುಚಿರ ಮೇರುವುಂ * [1]ವರಬುಧಾವಳಿಸೇವ್ಯನಮೇರುವುಂ ಮನೋ |
ಹರತರದುಗ್ಧವಾರಿಧಿಯು[2]ಮಿರ್ದವೊಲಾವಗಮೊಪ್ಪೆ ಧೈರ್ಯಮುಂ ||
ನಿರುಪಮಮಪ್ಪುದಾರತೆಯುಮೊಳ್ಪಿನಗಾಧತೆಯುಂ ವಲಂ ಗುಣೋ |
[3]ತ್ಕರಮಿವು ಬಂದುಮಿಲ್ಲಿ ನೆಲಸಿರ್ಕುಮಮೋಘಶುಭಾಂಗಮಂಗನೊಳ್ || ೫೦ ||

ಶಾ|| ದಾರಿದ್ರ್ಯಾಂಬುಧಿಶೋಷಣೌರ್ವದಹನಜ್ವಾಲಾವಳೀವಿಭ್ರಮಂ |
ಧೀರಂ ಪುಣ್ಯಪುರಾಣಸುಶ್ರುತತರಂ ದಾನಪ್ರಸಂಗಂ ಸದಾ ||
ಚಾರಂ ಚಾರುಗುಣಾನ್ವಿತಂ ಬುಧನುತಂ ಸಮುಕ್ತ್ವರ[4]ತ್ನಾಕರೋ |
ದಾರಂ ದೇವಲದೇಶಮುಖ್ಯಸುಜನಶ್ರೀ[5]ಸಂಗನೀ ಮಂಗಣಂ || ೫೧ ||

ಚಂ|| ಸ್ಮರಪರಿತಾಪದಿಂ ನೆಱೆ ಮರುಳ್ತನದಿಂ[6]ದಜತಾತನೆನ್ನೊಳಂ |
ಬೆರಸಿದನೀ ವಧೂಭವದ ಪುಟ್ಟುಗೆ ಪೊಲ್ಲೆನು[7]ತಿಲ್ಲಿ ರಾಗದೊಳ್ ||
ನಿರುಪಮನಪ್ಪ ಮಂಗವಿಭುವಾದಳೊ ಭಾರತಿ ಯಲ್ಲದಂದು ಪೇೞ್ |
ಪರರಿಗಿದೆ[8]ತ್ತಣ ಪ್ರಥಿತಸರ್ವಕಳಾ[9]ಕುಶಲತ್ವಮೊಪ್ಪುಗುಂ || ೫೨ ||

ಚಂ|| ವಿನುತಕಳಾಗಮಜ್ಞನಮಲಾನ್ವಯಕೀರ್ತಿ ಮನೋಜಮೂರ್ತಿ ಸ |
ಜ್ಜನತಿಳಕಂ ಪರಾರ್ಥಚರಿತಂ ಕೃತಪುಣ್ಯನಮೋಘವಾಕ್ಯಪಾ ||
ವನ ವಿಭುವಂಶಮಂಡನನಶೇಷಜನಸ್ತುತ ಸತ್ಕವೀಶನೆಂ |
ದನುದಿನಮುೞ್ತಿಯಿಂದೆ ನೆಱೆ [10]ಬಣ್ಣಿಕುಮಾತನ ಸಚ್ಚರಿತ್ರಮಂ || ೫೩ ||

ಚಂ|| ಮೃದುತರ [11]ಸೂಕ್ತಿಯಿಂದೆ [12]ರಸಘಟ್ಟಗಳಿಂದೆ ಪದಪ್ರಯೋಗದಿಂ |
ದುದಿತ [13]ಘನಪ್ರಬಂಧನಯ [14]ದಿಂದಮೆ ಸರ್ವಜನೋತ್ಸವತ್ವಮಂ ||
ಪುದಿದನುರಾಗದಿಂದಮೃತವೃಷ್ಟಿಗಳಂ ಕಱೆವಂತು ಪೇೞ್ದಿ ತಿ |
ರ್ದಿದ ಕೃತಿಯಂ ಬುಧರ್ ಕಿವಿಗಳಿಂ ಮೊಗೆವರ್ ಪ್ರಭು[15]ಮಂಗನುಕ್ತಿಯಿಂ || ೫೪ ||

[16]ವ|| ಎಂಬ ಕವಿತ್ವಸರಣಿಯಿಂ ಮಂತ್ರೌಷಧಂಗಳ ಪ್ರಕರಂಗಳಂ ಕೇಳೆ ಬುಧರ್ ಪರಿಭಾವಿಸುತ್ತಿರಲ್ಕೆ—

---

1. ಮಿದಾವಳಿ ಸೇವ್ಯವಮರುವಂ. (ಕ) 2. ತ್ತವೊ (ತ) 3. ತ್ಕರಮಿವುಬಧಮಿಲ್ಲ, (ತ) ತ್ಕರವಿದ ಬಂದವಿಲ್ಲ. (ಕ), 4. ತ್ನೋತ್ಕರೋ (ತ) 5. ಶ್ರೀಗಂಗಣೀಮಂಗಣಂ. (ಗ) 6. ದಜತಾಂತನೆನ್ನೊಳುಬ್ಬರಿಸಿದ (ಕ) ದಜರಾಂತ ನೆನ್ನೊಳುಬ್ಬರಿಡ. 7. ತಲ್ಲಿ, ತೆಲ್ಲಿ. 8. ತ್ತಣವ್ರತಸರ್ವ. 9. ಕುಶಲತ್ವಮದಪ್ಪುಗುಂ. 10. ಬಣ್ಣಿಸುಗಾತನ. 11. ಶೂಕ್ತಿಯಿಂದೆ, ಶುಕ್ತಿಯಿಂದೆ (ಕ) 12. ಪುಷ್ಟಿಗಳಿಂದೆ. (ಘ) 13. ಪೊದನಪಬಾದ (ಕ) 14. ದಿಂದೆಸುಸರ್ವ (ಘ) 15. ಮಂಗಣೋಕ್ತಿಯಿಂ (ಕ) 16. ಈ ಗದ್ಯ (ತ) ಪ್ರತಿಯಲ್ಲಿ ಮಾತ್ರವಿದೆ.

* ವಿನುತದಾನವವೈರಿ ಮಹೀಜಮುಂ. ಎಂದು (ತ) ಪ್ರತಿಯಲ್ಲಿ ಬೇರೆ ಪಾಠವನ್ನು ಓಲೆಯ ಕೆಳಗಣ ಸಾಲಿನಲ್ಲಿ ಬರೆದಿದೆ.

*ಕಂ|| ಪದ್ಯಂ[1]ಗಳ್ ರಸಪುಷ್ಟಿಗ |
ಳುದ್ಯತ್ಕವಿವೃಷಭನಿಗದಿತಂ ಪೆಱತೇನನ ||
ವದ್ಯಮುಮೆನೆ ಪೇೞಿರ್ ಸತ್ಕವಿ |
ಹೃದ್ಯಂಮಾೞ್ಪುಕ್ತಿ ಮಂಗ ನಿನ್ನೊಳ್‖ಸಹಜಂ || ೫೫ ||

ವ|| ಎಂದು ಪ್ರಯೋಜನಾಭ್ಯರ್ಥನೆಯಂ ಮಾಡಿದರದೆಂತೆಂದೊಡೆ.

ಶಾ|| ಏಕಾನೇಕ [2]ಮತಸ್ವತತ್ವ ಸದಸತ್ಸ್ಯಾದ್ವಾದವಿದ್ಯಾಂಬುಧಿ |
ಶ್ಲೋಕಾ[3]ಧ್ವಾನ ಗಭೀರಮಾರ್ದವಯುತಂ ಸಾರ್ತ್ಥಂ ಪರಿತ್ಯಕ್ತಮೋ ||
ಹಾಕಾರಂ ವಿಮಲಂ ಜಿನೇಂದ್ರವಚನಂ ತತ್ಸರ್ವಭಾಷಾತ್ಮಕಂ |
ಲೋಕಾರೋಗ್ಯನಿಮಿತ್ತಮಿಲ್ಲಿ ತಿಳಿದರ್ ಮುಂ ಪೇೞ್ದ[4]ರೀ ಗ್ರಂಥಮಂ || ೫೬ ||

ಉ|| ಕನ್ನಡದಿಂ ಸಮಸ್ತಜನಗೋಚರಮಪ್ಪವೊ[5]ಲೊಲ್ದು ಪೇೞ್ವುದೈ |
ನೀನ್ನಮಗೆಂದು ಭವ್ಯರೊಸೆದಱ್ತಿಯೊಳಂ ಬೆಸಗೊಳ್ವುದುಂ ಕರಂ ||
ನನ್ನಿಯೊಳಂತವರ್ಗೆ ತಿಳಿಪಲ್ ಮನದಂದೆನಿದಂ ವಿಳಾಸಸಂ |
ಪನ್ನತೆವೆತ್ತುದೀ ಕೃತಿ ಯದಂತೆನೆ[6]ಮತ್ಸುಕೃತಪ್ರಭಾವದಿಂ || ೫೭ ||

ವ|| ಅದೆಂತೆಂದೊಡೆ.

ಕಂ|| ಎನಿತಸ್ಮದೀಯಪದಮುಂ |
ಟನಿತಱೊಳಪಶಬ್ದಮಾತ್ರಮಿಲ್ಲಿಂ ಭಿಷಗಾ ||
ನನಗಹ್ವರದೊಳಮುಂಟೆಂ |
ಬ ನಯೋಕ್ತಿಯನಱಿದು ಪೇೞ್ದಪೆಂ ತತ್ಕೃತಿಯಂ || ೫೮ ||

[7]ಉದಕಂ ಪಡೆದೊಡಮೇಂ ಪ |
ದ್ಮದ ಗಂಧಂ ಗಂಧವಾಹನಿಂ ಪರೆವವೊಲಿಂ ||
ತೊದವಿದ ಮದೀಯಕವಿತಾ |
ಭ್ಯುದಯಯಶಂ ಪರೆಗುಮಿಳೆಗೆ ಸಂತರೆ ನಿಮ್ಮಿಂ || ೫೯ ||

[8]ವಾದಿಚಮತ್ಕೃತಿ ಸತ್ಕೃತಿ |
ಯಾದೊಡೆ ಮುಂ ಕೊಂಡುಕೊನೆವಿರಿ[9] ನೀವಿಂ ||
ಮೇದಿನಿಯೊಳಾಗದೊಡೆ ಸಂ |
ವಾದಂ ಪ್ರಾರ್ಥಿಸಿದೊಡಹುದೆ [10]ತತ್ಸ್ವಾಮಿತ್ವಂ† || ೬೦ ||

---

1. ಪದಡೆ ಸಮುಷ್ಟಿ. 2. ಮತತ್ವತತ್ವಸ್ಯಾದ್ವಾದ. 3. ದ್ವಾವ. 4. ರೀಗಂತದಂ (ತ) 5. ಲಂಣ ಪೇೞ್ವಿದೈನೀನಮುಗೆಂದಾ....ಳಂದು ಬೆಸ. 6. ತೆನಿಸುಂ ಕೃತಸತ್ರಭಾವದಿಂ; ತತ್ಸು (ಘ) 7. ಉದಕಂ ಪಡೆ ಪದವೆಂಸದ್ಮದನಂದು ಗಂದವಾನುಂಪರೆಗು | ವಂದಿಂತೊದವಿದ ಮದೀಯಕವಿ ತದ್ಭುದಯಶಂ (ಕ. ಖ.) ಪಡೆ ದೊಡವಂ....ನಿಂಪಂ ಸಮುದಿಂ (ಘ) 8. ವಾದಿಸಿ ಮತ್ಕೃತಿ. (ಕ, ಖ.) 9. ಯೆಳವದಸಾರ್ದ್ದಿ 10. ತತ್ಸಾಹಿತ್ಯಂ (ಕ)

* ಈ ಪದ್ಯವು, (ತ) ಪ್ರತಿಯಲ್ಲಿ ಮಾತ್ರವಿದೆ.

† ಇದು ೨೪-ನೆಯ ಪದ್ಯವಾಗಿದೆ. (ಕ)



* ಮ|| ಗುಣಮಂ ಕಂಡೊಡೆ ಸಜ್ಜನಂ ಸಭೆಗಳೊಳ್ ಕೊಂಡಾಡುಗುಂ ದೋಷಮಂ |
ಗುಣಹೀನಂ ಕೃತಿಬಂಧದೊಳ್ ಪ್ರಕಟಿಸುತ್ತಿರ್ಪಂ ಗುಣಗ್ರಾಹಿಯ ||
ಲ್ಲಣಕಕ್ಕಗ್ರಣಿಯಾದನಿರ್ವರೊಳವುಂ ನೈಜಂಗಳೆಂಗುಂ ಮಹಾ |
ಗ್ರಣಿ ಲೇಶ್ಯಾಪರಿಣಾಮಭೇದಮೆನಲಿನ್ನಾರ್ ವಾರಿಪರ್ ಭಾವಮಂ || || ೬೧ ||

† ಕಂ|| ಧರ್ಮಾರ್ಥಕಾಮಮೆಂಬಿವ |
ನೊರ್ಮೊದಲೊಳೆ ಬಯಸುವಾತನೀಗಾರುಡಮಂ ||
[1]ಧರ್ಮಮೆನಲ್ ಪೇೞ್ವೆಂ ತ |
ಕ್ಕೂರ್ಮೆಯೊಳಂ ಮಿಕ್ಕವಿದ್ಯೆಯೇದೊರೆಯಿದಱೊಳ್ || ೬೨ ||

‡ ಮ|| ಮರನಂ [2]ಗಾಳಿಯ ಧೂಳಿಯಂ ರಜನಿಯಂ [3]ನೀರಾಟಮಂ [4]ಬೇಟಮಂ |
ಸುರೆಯಂ ಸೂೞೆಯರಂ [5]ವಿಟಾಟವಿಕರಂ ಕೊಂಡಾಡಿ ಬೆಂಡಾಗದೀ ||
ಧರೆಯೊಳ್ ಸರ್ವಜನೋಪಕಾರ[6]ಮೆನಲೀ ಮಂತ್ರೌಷಧವ್ರಾತಮಂ |
ನಿರುತಂ ಭಾವಿಸಿ [7]ಪೇೞ್ದ ಮಾನವನೆ ತಾಂ ದೇವಂ ಧರಾಚಕ್ರದೊಳ್ || ೬೩ ||

ವ|| ಎಂದಶೇಷಬುಧಜನೋಪಕಾರಾರ್ಥಂ ಸ್ಥಾವರ ಜಂಗಮ ಕೃತ್ರಿಮಪ್ರಭೃತಿ ನಾನಾವಿಷಹರಣ ಕಾರಣಮಪ್ಪ ಗ್ರಂಥಮಂ ಪೇೞಲೊಡರ್ಚಿದೆನದೆಂತೆದೊಡೆ—

§ ಕಂ|| ಗುಣನಿಧಿ " ಖಗೇಂದ್ರಮಣಿದ |
ರ್ಪಣ " ಮಿಾಕೃತಿ [8]ರಚಿತಮಾಯ್ತು [9]ಮಂಗಪ್ರಭುವಿಂ ||
ಪ್ರಣುತಂ ಜನಹಿತಮೆನೆ ಧಾ |
ರಿಣಿಯೊಳಿದಂ ಮೆಚ್ಚದಿರ್ಪ ಸಜ್ಜನ[10]ರೊಳರೇ || ೬೪ ||

ನರರ್ಗರುಜತೆ ಭೇಷಜದಿಂ |
ದರುಜತೆಯಿಂ ದೇಹ ದೇಹದಿಂದಂ ಜ್ಞಾನಂ ||
ಪರಮಜ್ಞಾನದೆ ಮೋಕ್ಷಂ |
ದೊರೆಕೊಳ್ಗುಮದೆಂದು ಪೇೞ್ದಪೆಂ ಭೇಷಜಮಂ || ೬೫ ||

‖ ಆದ್ಯರ ಹಿತತ್ವದೊಳಗಾಂ |
ಹೃದ್ಯಮೆನಲ್ ಪಲವುಮತ[11]ದೊಳಾನಱಿವನಿತಂ ||
ವೈದ್ಯಮಿದೆನಲ್ಕೆ ಪೇೞ್ವೆಂ |
ವೈದ್ಯಾಂಭೋನಿಧಿಯೊಳೆತ್ತಿ ತತ್ಸಾರಮುಮಂ || ೬೬ ||

---

1. ಶರ್ಮದಮಂ, (ಶರ್ಮಶಮುಮಂ) ಪೇೞ್ವುದು, ಧರ್ಮಮುಮಂ (ಗ) ಪೇೞ್ದಾತಂತತ್ಕೂರ್ಮೆ (ಘ) 2. ಘಾಳಿ (ತ) 3. ಘೋರಾಜಿಯಂ. 4. ಬೆಟ್ಟುಮಂ. 5. ವಿಟಾದಿವಿಕರಂ. 6. ಮೆನುತೀ. 7. ಪೇೞ್ವ. 8. ರಂಜಿತ. 9. ಮಂಗಣವಿಭುವಿಂ, ಮಂಗಳವಿಭುವೀ. 10. ರುಂಟೇ (ತ) 11. ದೋ ನ್ನಱಿವನಿತಂ.

* (ತ) ಪ್ರತಿಯಲ್ಲಿಮಾತ್ರವಿದೆ. † ಇದು (ತ) ಪ್ರತಿಯಲ್ಲಿಲ್ಲ. ‡ ಇದು ೨೫-ನೆಯ ಪದ್ಯ. (ಕ)
§ ಇದು ೨೬-ನೆಯ ಪದ್ಯ ‖ ಇದು ೨೭-ನೆಯ ಪದ್ಯ, (ಕ. ಖ.). ಟೀಕಾಪ್ರತಿಗಳಲ್ಲಿ ಟೀಕೆ ಇಲ್ಲಿಂದ (ಪ. ೨೮) ಆರಂಭವಾಗಿದೆ.

ಉ|| ಆಗಳೆ ದಷ್ಟಜೀವಿತಮದಾಗಳೆ ದಷ್ಟನ ಸಾವು ಭಾವಿಸ |
ಲ್ಕಾಗಳೆ ಕೀರ್ತಿ[1]ಯಾಗಳಪಕೀರ್ತಿ ಯಭಿಜ್ಞತೆಯಿಂದಮಜ್ಞತಾ ||
ಯೋಗದಿನಾಭಿಷಕ್ತಮಜನಕ್ಕಹ ಕಾರಣದಿಂದಮಾಂ ಪರೀ |
ಕ್ಷಾಗುಣಮುಖ್ಯಮೆಂದೊಸೆದು ಪೇೞಲೊಡರ್ಚಿದೆನೀ ಪ್ರಪಂಚಮಂ || ೧೭ ||

**ಸ್ಥಾವರ ಜಂಗಮ ಕೃತ್ರಿಮ ವಿಷಭೇದಂಗಳ್.**

ಕಂ|| ಉರಗಮೃಗಮಾಖುವೃಶ್ಚಿಕ |
ಸುರೆ[2] ಕೀಟಕಮುಂ ಕುಧಾನ್ಯತಂಬುಲ ಕನಕಂ ||
ನಿರುಪಮಿತಕೃತ್ರಿಮಂಗಳ್ |
ಪರಿಕಿಪೊಡಿವು ದಶವಿಧಂ ವಿಷಂಗಳೆನಿಕ್ಕುಂ || ೧೮ ||

ಮ|| ಉರಗಂ ವೃಶ್ಚಿಕ ಮೂಷಿಕಾದಿ(ಳ)ಶುನಕವ್ಯಾಘ್ರಾದಿಯುಂ ಗೌಳಿಯುಂ |
ಸರಟಂಗಳ್ ಮೊದಲಾದುವುಂ ಮಕರಮತ್ಸ್ಯ[3]ದ್ಯಪ್ಟರವ್ರಾತಮುಂ ||
ನೊರಜುಂ ಗುಂಗುಱು ಷಟ್ಪದಾದಿಗಳಿವುಂ ಪಕ್ಷಿವ್ರಜಂ ಮರ್ತ್ಯರುಂ |
ಧರೆಯೊಳ್[4] ನಂಜಿಲಿ ನಲ್ಲಿಱುಂಪೆ ಮೊದಲಾದೆಲ್ಲಂ ವಿಷಗ್ರಾಹಿಗಳ್ || ೧೯ ||

ವ|| ಇನ್ನು ಕೃತ್ರಿಮ ವಿಷಂಗಳಾವುವೆನೆ—

ಕಂ|| ಬಾಷ್ಟಂಗಳೆಂಬನಿತ್ತಱ |
ಕಷ್ಟತೆಯಿಂ ಕೃತ್ರಿಮಂಗಳಂ [5]ಪೆಱರಿಂದಂ ||
ಚೇಷ್ಟಿಸಿದಭಿಚಾರಂಗಳ |
ನಿಷ್ಟತ್ವವಿಘಾತಮಂತ್ರತಂತ್ರಮನುಸಿರ್ವೆಂ || ೨೦ ||

ವ|| ಅದೆಂತೆಂದೊಡೆ ನಾನಾವಿಷಂಗಳೊಳಗೆ ವಿಭೇದಂಗಳ್ ಸ್ಥಾವರ ಜಂಗಮಮೆಂ ಬೆರಡು ತೆಱಗಳುಂಟು [6]ಅವಱೊಳ್.

ಕಂ|| ಸ್ಥಾವರವಿಷಮಿರ್ಪತ್ತ |
ಯ್ದಾವಾವುವಿವೆಂಬ ನಾಮವಿಷವೀರ್ಯಮುಮಂ ||
ಕೇವಳಕುತ್ಸಿತವಿಷಮಂ |
ಭಾವಿಪೊಡವಱುಪಶಮಂಗಳಂ ವಿವರಿಸುವೆಂ || ೨೧ ||

---

1. ಕೀರ್ತಿ............ಯಿಂದ ಮಜ್ಞತಾಯೋಗದಿನಾಭಿಷಕ್ಕಿದು ಜನಕ್ಕಹಕಾರಣದಿಂದಮಾಂ ಪರಿಖ್ಯಮೆಂದೊಸೆದೆ ಪೇೞಲೊಡರ್ಚಿದೆನೀಪ್ರಪಂಚಮಂ|| ೨೯|| ; ಭಿಷಗ್ಜನಕೆಬರ್ಪುದು ತಾನದಱಿಂದಮಾಂ (ತ) ಬಿಷಗ್ಜನಕಮಾಗಳೆ ಬರ್ಪುದರಿಂದಮಾ (ಘ) 2. ಕಟಕವಮುಂತು. 3. ದ್ಯಪ್ಸರೋವ್ರಾತ (ತ) 4. ನಜಿಲಿಯಲ್ಲಿ ಪರಿಕ್ಷಿ (ಘ) 5. ತಿಳಿಯೆಪೆಱರ್ ಚೇಷ್ಟಿಸಿದಭಿಚಾರಂ । ಘಾತಮಾತ್ರ ತಂತ್ರಮನುಸಿರ್ವೆಂ || ೩೨ || 6. ವ|| ಇವಱೊಳ್.

ಕಂ|| ಸ್ಥಾವರ ಜಂಗಮ ಕೃತ್ರಿಮ ।
ಮಾವಾವ ವಿಷಕ್ಕೆ ತತ್ಪ್ರತೀಕಾರಮುಮಂ ||
ಜೀವಹಿತಮಪ್ಪುದಂ ಪರಿ ।
ಭಾವಿಸಿ ಪೇೞ್ವೆಂ ಜಿನಾಗಮೋಕ್ತಿಕ್ರಮದಿಂ || ೩೧ ||

ಸ್ಥಾವರ.... ಭಾವಿಸಲವಱುಪಶಮಂಗಳಂ....|| ೩೨ || ಎಂಬ ಆನುಪೂರ್ವಿ ಯಿದೆ (ತ)



ಉ|| ಕೂಟದ ತಕ್ಷಕಂ [1]ಕುಳಿಕ ಪದ್ಮ ನನಂತ ಮಹೋಗ್ರಪದ್ಮ ಕ |
ರ್ಕೋಟಕ ಶಂಖಪಾಳ ನುತವಾಸುಗಿ ಯೆಂಬ ಕುಲಂಗಳೆಂಟಱೊಳ್ ||
ಸ್ಫೋಟನೆಯಿಂದೆ ತೋರ್ಪವಱ ಚಿಹ್ನಮನನ್ವಯವರ್ಣಮಂ ವಿಷೋ |
ತ್ಪಾಟನಭೇದಮಂ ದಶನಭೇದಮುಮಂ ತಿಳಿವಂತು ಪೇೞ್ದಪೆಂ || ೨೨ ||

ಉ|| [2]ದೂತಿ ಕರಾಳಿ ಕಾಳಿ ಯಮದೂತಿಗಳೆಂಬ ಸುತೀಕ್ಷ್ಣದಂಷ್ಟ್ರಸಂ |
ಘಾತದ ಭೇದಮಂ ಕ್ಷತಪರೀಕ್ಷೆಗಳಂ ಧರೆ ವಾರಿ ವಹ್ನಿ ಸಂ ||
ವಾತವಿಶೇಷದಂತಕಮನಂತವಱಿಂದಹ ಚೇಷ್ಟೆಯೆಂಬಿವಂ |
ಧಾತುಗಳಂ ಪರೀಕ್ಷಿಸುವುದೊಪ್ಪುವ ಜಾಂ(ಗು)ಗಳಿಕಂ ಧರಿತ್ರಿಯೊಳ್ || ೨೩ ||

ವ|| ಅದೆಂತೆಂದೊಡೆ.

ಕಂ|| ಕಾಣದ ಮುನ್ನಂ ದಷ್ಟ |
ಪ್ರಾಣದ ಗತಿ ದಷ್ಟನನ್ವಯಂ ಕ್ಷತದೆಡೆಯಂ ||
ಜಾಣೆನೆ ಪೇೞಲ್ ಜಗದ |
ಕ್ಷೂಣ ಜಿನೋಕ್ತಿಯೊಳೆ ಮಂಗರಾಜಂ ಬಲ್ಲಂ || ೨೪ ||

ಮ|| ನೆಲನಿಂ ದೂತನಿನಾದ ಚೇಷ್ಟೆಯೊದವಿಂ ವಾರಂಗಳಿಂ ಹೋರೆಯಿಂ |
[3]ವಿಲಸದ್ವೃಕ್ಷದಿನಾ ದಿನಪ್ರತತಿಯಿಂ ಮರ್ಮಂಗಳಿಂ ಪೊೞ್ತಿನಿಂ ||
ಪಲವಪ್ಪ ಸ್ವರದಿಂ ನಿಮಿತ್ತತತಿಯಿಂ ಮಂತ್ರೌಷಧಿವ್ರಾತದಿಂ |
ಸಲೆ ಜೀವಿಪ್ಪನಿವಂ ಮೃತಾಂಗಿಯಹನೆಂಬೀ ಭೇದಮಂ ಪೇೞ್ದಪೆಂ || ೨೫ ||

ಕಂ|| ತಾಪಿಸುವ ದಷ್ಟದೇಹಿಗ |
ಳೋಪರ್ಗೆ ತದೀಯದೂತರಪ್ಪ ನರರ್ಗೀ ||
ವಾಪರವಿಧಾನಮುಮನಾ |
ಲಾಪದೊಳೇಂ ಶಬ್ದನಿರ್ವಿಷಂಗಳನುಸಿರ್ವೆಂ || ೨೬ ||

[4]ವ|| ಅಂತಗಣ್ಯಮಪ್ಪ—

ಕಂ|| ಸ್ಥಾವರಜಂಗಮ ಕೃತ್ರಿಮ |
ಮಾವಾವ ವಿಷಕ್ಕೆ ತತ್ಪ್ರತೀಕಾರಮುಮಂ ||
ಜೀವಹಿತಮಪ್ಪವಂ ಪರಿ |
ಭಾವಿಸಿ ಪೇೞ್ವೆಂ ಜಿನಾಗಮೋಕ್ತ ಕ್ರಮದಿಂ || ೨೭ ||

**ದ್ರವ್ಯಸಂಗ್ರಹ ನಿರೀಕ್ಷೆ.**

ವ|| ಸಂಗ್ರಹ ದ್ರವ್ಯನಿರೀಕ್ಷೆಯಂ ಪೇೞ್ವೆಂ—

ಚಂ|| ಗಿರಿಶ ನಿರೀಕ್ಷಣಾವಧಿ(ನಿ)ಯೊಳಂ ಭಸಿತಂಗಳೊಳಸ್ಥಿಚರ್ಮದೊಳ್ |
ಪಿರಿಯ[5]ಪಥಂಗಳೊಳ್ ಮಲದೊಳೂರೊಳಮಾ ಮಲಮೂತ್ರದಿಕ್ಕೆರ್ಭೀ ||
ಕರತರರುದ್ರಭೂಮಿ ಪುೞುಕೊಂಡೆಡೆಯೊಳ್ ಬೆಳೆದಿರ್ದ ಮೂಲಮಂ |
ತರು ಲತೆ ಗುಲ್ಮಮಂ ತರಿಸಿ ಸಂಗ್ರಹಿಸಲ್ಕಣಮಾಗದಾವಗಂ || ೨೮ ||

---

1. ಕುಳಿಕ ಪಥರನಂತ.... ಸ್ಫೋಟನ ಇಂತೆಂದುದಿತೇರ್ಪ.... ಹ್ನಮನಂನಯ ವಿಷೋತ್ಪಾಟನ. 2. ಕರಾಸಾಮಯ....ಯೆಮದೂತಿ (ತ) 3. ವಿಲಸತ್ಪಕ್ಷ....ಧರ್ಮಂ (ಘ) 4. ಇಲ್ಲಿ "ಸ್ಥಾವರ ಜಂಗಮ ಕೃತ್ರಿಮ" ಎಂಬ ೩೧-ನೆಯ ಕಂದವಿದೆ. 5. ಪದಂಗಳೊಳ್ ಮಲದೊಳೂ.

### ದ್ರವ್ಯಸಂಗ್ರಹ*ಕಾಲಂ.

ಕಂ|| ಅಲರಂ ಬಸಂತದೊಳ್ ತ |
ತ್ಫಲಮಂ ಗ್ರೀಷ್ಮದೊಳೆ ಮೂಲಮಂ ಶರದದೊಳಂ ||
ದಲಮಂ ಶಿಶಿರದೊಳಂ ತಾಂ |
ನಲವಿಂ ಪ್ರಾವೃಡ್ದಿನಂಗಳೊಳ್ [1]ಛಲ್ಲಿಗಳಂ || ೭೯ ||

ಹೇಮಂತದೊಳಂ ಪಣ್ಗಳ |
ನೇಮಾತಿಂತೀ ಕ್ರಮಂಗಳಿಂ ದ್ರವ್ಯಮುಮಂ ||
ಪ್ರೇಮದೊಳಂ ಸಾಧಿಪುದು ಮ |
ಹಾಮಯಹಾಲಾಹಳಕ್ಕೆ ಸಂಗ್ರಹಕಾಱಂ || ೮೦ ||

### ಪರಿಭಾಷೆ.

ಶಾ|| ಕುಂದೇಂದೀವರಜಾತಿಪೂತಕರನಂದ್ಯಾವರ್ತದೊಳ್ ಪುಷ್ಪಮಂ |
ಸಂದಾ ದಾಡಿಮನಾಳಿಕೇರಕದಳೀವ್ರಾತಂಗಳೊಳ್ ತತ್ಫಲಂ ||
ಸಂದಾನಾಗಸುಭೂರ್ಜತಾಳತೃಣವಲ್ಲ್ಯಾದ್ಯಂಗಳೊಳ್ ಪತ್ರಮಂ |
ಕಂದಂ ಗ್ರಾಹ್ಯಮೆ ಸೂರಣಾದಿಗಳೊಳ್ ಬಾಳಾದಿಯೊಳ್ ಮೂಲಮಂ || ೮೧ ||

ಕಂ|| ಪ್ರಸವಕ್ಕೆಪತ್ರ ಪತ್ರ |
ಕ್ಕೆಸೆವ ಫಲಂ ಫಲಕ್ಕೆ [2]ಛಲ್ಲಿ ಛಲ್ಲಿಗೆ ಪಣ್ಣಂ ||
ತಸದೃಶದ ಪಣ್ಗೆ ಬೇರ್ಗಳ್ |
ವಿಶೇಷತರವೀರ್ಯವೃದ್ಧಿಯಿಂದೆಂಟುಗುಣಂ[3] || ೮೨ ||

ಉ|| ಭಾಗಮಿದಿಂತುಟೆನ್ನದುವುಮಂ ಸಮಭಾಗಮುವೆಂಗೆ ವಸ್ತುವಂ |
ತಾಗಲಲರ್ ಫಲಂ ದಳಸಮೂಲಮಿವೆನ್ನದೆ ಪೇೞ್ದವೆಲ್ಲಮಂ ||
ಬೇಗದೊ[4]ಳೆಂಗೆ ಬೇರ್ಗಳನಣಂ [5]ರಸಮಿಂತುಟದೆಂದು ಪೇೞಿದಂ |
ದಾಗಳೆ ನೀರೊಳಂದರೆದು ಕೊಳ್ವುದು ನೀಂ ಪುರುಷಾರ್ಥಸಾಧ(ಕಾ)ಕಂ || ೮೩ ||

ವ|| ತನ್ಮಾಂತ್ರಿಕಲಕ್ಷಣಂ.

ಚಂ|| ವಿನಯನಿದಾನನಾರ್ಯಜನಸಂಗತಿ ಲೋಭವಿದೂರನಾವಗಂ |
[6]ಮನುನಿಯಮಾದಿನಿಷ್ಠ [7]ಮದನಾಂಗವಿವರ್ಜಿತನಿಷ್ಟವರ್ಗಸ ||
ಜ್ಜನಹಿತಕಾರಿ ಸೂರಿ ಯಭಿಮಾನಿ [8]ವಿವರ್ಜಿತಮಾನರೋಷನೆಂ |
[9]ಬನುಪಮಪಂಡಿತಂ ಧರೆಯ ಮಾಂತ್ರಿಕರೊಳ್ ಗುರುಭಕ್ತನಪ್ಪವಂ || ೮೪ ||

1. ವಲ್ಲಿ; ಬಳ್ಳಿ; ಝುಲ್ಲಿ (ತ) * ಕಾಲಂ ಎಂದು ತಿದ್ದಿದೆ. 2. ವಲ್ಲಿವಲ್ಲಿಗೆ (ಕ) ದಲ್ಲಿದಲ್ಲಿಗೆ (ಘ) ಝುಲ್ಲಿ ಯೆಂದು ತೊಂಗಟು ಎಂದು ಒಂದುಪ್ರತಿಯಲ್ಲಿ ಪಾಠಭೇದವನ್ನೂ, ಅರ್ಥವನ್ನೂ ಬರೆದಿದೆ. 3. ಗುಣಂಗಳ್. 4. ಳಿಂದೆ; ಳೊಂದೆ. 5. ಸಮಯೇವುದೆಂದು. 6. ತನನಯ ನಾದಿ (ಕ, ಘ) ಮನನಯಮಾದಿ (ಖ) 7. ಮದಾನಂಗ (ಖ) 8. ವಿನಿರ್ಜಿತ ಮಾರದೋಷ. 9. ಬನೆವಲಮಿಾಡಿತಂ (ಕ)



ಚಂ|| ಸ್ಥಿರತರಬುದ್ಧಿಭಾವಯುತನನ್ವಯಶುದ್ಧನನೂನ[1]ಮೂರ್ತಿ ಸ |
ತ್ಪುರುಷನಮೋಘವಾಕ್ಯನಮಲಾಂಗನಕುತ್ಸಿತಕರ್ಮನಾಗಳುಂ ||
ಪರಹಿತವೃತ್ತನೊಳ್ಪಿದನುದಾರಗಭೀರಗುಣಾಢ್ಯನಪ್ಪವಂ |
[2]ಧರೆಯ ಭಿಷಗ್ವರಾಗ್ರಣಿಯೆನಿಪ್ಪನತಂದ್ರನವದ್ಯವರ್ಜಿತಂ || ೮೫ ||

### ಪಾತ್ರಾಪಾತ್ರವಿಶೇಷಂಗಳ ಪರೀಕ್ಷೆಗಳ್.

ವ|| ಅದೆಂತೆಂದೊಡೆ—ಇಂತಪ್ಪ ನುತಚರಿತಕೀರ್ತಿಯಶರಪ್ಪವರ್ಗಳಾರ್ಗೆ ಪೇೞ್ವೆ ದೆಂದೊಡೆ -

ಕಂ|| ಕರುಣನಿಧಿ ಯಾಗಮಜ್ಞಂ |
ಗುರುಭಕ್ತಂ ಪರಹಿತಂ ನಿಮಿತ್ತಾದಿಗಳೊಳ್ ||
ಪರಿಣತನಪ್ಪ ನರಂಗಂ |
ದಿರ[3]ದುಪದೇಶಿಪುದು ಬಲ್ಲರೀಗ್ರಂಥಮುಮಂ || ೮೬ ||

ಕಂ|| ನೀರಸನತಿನಿರ್ಘೃಣನವಿ |
[4]ಚಾರಪರಂ ಶಾಸ್ತ್ರದೂಷಕಂ ಖಳನೆಗ್ಗಂ ||
ಕ್ರೂರನತಿಕಷ್ಟನಿಷ್ಠುರ |
ಜಾರನೆನಿಪ್ಪವಗೆ ಪೇೞವೇಡಿದನೆಂದುಂ || ೮೭ ||

ಉ|| ಧರ್ಮಪರರ್ಗೆ ದಾನಗುಣಮುಳ್ಳವರ್ಗಂ ವ್ರತಶೀಲಯುಗ್ಮದಿಂ |
ನಿರ್ಮಲಚಿತ್ತರಪ್ಪವರ್ಗೆ ವಂಶವಿಶುದ್ಧರಿ[5]ಗೞ್ತಿಯಿಂದೆ [6]ಪೇ ||
ೞ್ವಮರ್ದದಿಂದೆ ಕೂಡೆ ಕುಡುವರ್ ಪಡೆಗುಂ [7]ಶುಭಕೀರ್ತಿಲಕ್ಷ್ಮಿಯಂ |
ಶರ್ಮದಮಪ್ಪ ಧರ್ಮ[8]ವಸುಕಾಮಸುಖಂಗಳನೀಧರಿತ್ರಿಯೊಳ್ || ೮೮ ||

— ಗದ್ಯ —

ಇದು
ಸಕಲವಿಮಲ ಜಿನೇಂದ್ರೋಕ್ತಸಿದ್ಧಾಂತಪಯಃಪಯೋನಿಧಿಪಾರಗ
ಶ್ರೀಪೂಜ್ಯಪಾದಮುನೀಂದ್ರ ಚಾರುಚರಣಾರವಿಂದ
ಗಂಧಗುಣಾನಂದಿತ ಮಾನಸಂ
ಶ್ರೀಮದಖಿಲಕಲಾಗಮೋತ್ತುಂಗ
**ಮಂಗವಿಭು**
ವಿರಚಿತಮಪ್ಪ

## ಖಗೇಂದ್ರ ಮಣಿದರ್ಪಣದೊಳ್

ಸಂಜ್ಞಾಧಿಕಾರಂ
ಪ್ರಥಮಂ.

---

1. ಮಂತ್ರಿ (ತ) 2. ದಲೆಯುಭಿಷಗ್ಗನಾಗ್ರಣಿ, ಭಿಷಗ್ವರಾಗ್ರಣಿ. 3. ದುಪದೆಸೆದಪುದುಂ. 4. ಚಾರರತಂ, ಸಚ್ಛಾಸ್ತ್ರ 5. ಗರ್ತ್ಥಿ. 6. ಪೇೞ್ವುದು ಮುದದಿಂದೆಮಾಡಿ. 7. ವರಕೀರ್ತಿ, ನಿಜಕೀರ್ತಿ. 8. ಬಹುಕಾಮ.

# ದ್ವಿತೀಯಾಧಿಕಾರಂ

## ಸ್ಥಾವರವಿಷಕ್ಕೆ-

[1]ಕಂ|| ದೇವಾದಿ ದೇವ[2]ನಂ ಜಿತ |
ಭಾವಜನನಚಿಂತ್ಯಮುಕ್ತಿಲಕ್ಷ್ಮೀವರನಂ ||
ಭಾವಿಸಿ ವಂದಿಸಿ ಜನದಾ |
ಸ್ಥಾವರವಿಷಹರಣಮಂ ವಿವಕ್ಷಿಸಿ ಪೇೞ್ವೆಂ || ೧ ||

ಉ|| ದೇವಜಿನೇಂದ್ರಭಾಷಿತವಿಷಂಗಳೆ ಮೂದೆಱನಪ್ಪ [3]ವೆಂತೆನಲ್ |
ಸ್ಥಾವರ ಜಂಗಮಂ ಕೃತಕಯೋಗಜಮೆಂದಿವಱೊಳ್ [4]ವಿವೇಕಿಸಲ್ |
ಸ್ಥಾವರಮಿರ್ಪ್ಪತಯ್ದು ತೆಱನಂತಧಿಕಂ[5]ಗಳುಮಲ್ಲಿಯಯ್ದುಮುಂ |
ಕೇವಳಮಧ್ಯಮಾಧಮವಿಭೇದಮನಾದರದಿಂದೆ [6]ಪೇೞ್ದಪೆಂ || ೨ ||

ವ|| ಅದೆಂತೆಂದೊಡೆ:—

## **ಪಂಚವಿಂಶತಿ ಸ್ಥಾವರ ವಿಷನಾಮಂಗಳ್.**

ಕಂ|| ಸಲೆ ಮುಸ್ತೆ ವತ್ಸನಾಭಂ |
[7]ಬಲಾಹ ಪುಷ್ಕರ[8]ಶರಂ ಹರಿದ್ರಾಶೃಂಗೀ ||
[9]ಕುಲಮೇಷಶೃಂಗಿ ಹಾಳಾ |
ಹಲಕಾಸ್ತುಕ ರಕ್ತಶೃಂಗಿ [10]ಮಧುಪಾಕಂಗಳ್ || ೩ ||

ಪರಿವಿಡಿಯೊಳಿಂದ್ರವಜ್ರಂ |
ಸ್ಫುರದುರುಕರ್ಕಾಟಶೃಂಗಿ ಮಧುರಂ ಕ್ರೌಂಚಂ ||
[11]ಹರಿತಾರ್ಕಕಾಳಕೂಟಕ |
ಮರಿದೆನಿಸಿದ ಪುಂಡರೀಕ [12]ಸಂಕೋಚಂಗಳ್[13] || ೪ ||

ಗಾಳವಮಂಜನ ರೋಹಿಣ |
[14]ಮಾಳೋಚಿಸಲೇಕವೀರ ಮಿಂತಿರ್ಪ್ಪತ್ತು ||
[15]ಯಿದ್ದಾಳೋಕದೊಳಂ ಕ್ರೂರ |
ಜ್ವಾಳಿಗಳಿಂತಿವಱೊಳಯ್ದು ತಿಕ್ರೂರಂಗಳ್ || ೫ ||

1. ಈ ಆಶ್ವಾಸದ ಆದಿಯಲ್ಲಿಮಾತ್ರ ೞಶಬ್ದಪ್ರಯೋಗವಿಲ್ಲ. 2. ವಂದಿತ (ಘ) 3. ದೆಂದೆನಲ್ (ಗ) 4. ವಿಶೇಷದಿಂ. 5. ಗಳನಲ್ಲಿ. 6. ಪೇೞುವೆಂ (ಗ) 7. ಬಲುಹುಂ. 8. ಶಠಂ ಹರಿದಿಂದ್ರಂ....ಮೇಶ ಹಾಲಾಹಲ ಕೌಸ್ತುಕರಕ್ತ (ಗ) 9. ಕುಲಮೇಷ ಶೃಂಗಿಹಾಲಾ | ಹಲಕಸ್ತುಕ. 10. ಪದು. 11. ಹರಿತಾಳಕಾಳ. 12. ಸಂಕಾಚಂಗಳ್. 13. ಪಂಚವಿಂಶತಿ ಸ್ಥಾವರವಿಷಂಗಳಂ ಮುಂದೆ ಹೇಳುತ್ತಾರೆ (ಗ) (ಎಂಬ ಗದ್ಯವಿದೆ. 14. ಮಾಳೋಚಿಸಲೇಕವಿಂತಿಪ್ಪತ್ತೆಂದೀ. 15. ಯ್ದುಲೋಕದೊಳಂ.



[1]ವ|| ಅವಾವುವೆಂದೊಡೆ :—

ಕಂ|| ಸಂಕೋಚಕಾಳಕೂಟವಿ |
[2]ಷಾಂಕಮು[3]ಮಾವತ್ಸನಾಭಿ ಮುಸ್ತಕಶೃಂಗಾ ||
ಖ್ಯಂ ಕರಮಿಳಿಯೊಳಿವಯ್ದುಂ |
ಪಂಕಜಭವ[4]ನಱಿಯಲರಿದು ತತ್ಕ್ರೂರತೆಯಂ || ೬ ||

ಉೞಿದಿಪ್ಪತ್ತುಂ ಮಧ್ಯಮ |
[5]ಮಿಳೆಯೊಳಗಿಂಮಿಕ್ಕುವೆಲ್ಲ [6]ಮಲ್ತೆ ಜಘನ್ಯಂ ||
ವಿಳಸತ್ತನುವಂ ಬೆರಸಾ |
ವಿಳಮಂ [7]ಮಾಡಲ್ ತದಂಗಚೇಷ್ಟೆಯ [8]ನೊರೆವೆಂ || ೭ ||

ಮ|| ಅತಿಸಾರಂ ಮೂರ್ಛೆ ದಾಹಂ ಮತಿವಿಕಳತೆಯುಂ ಭ್ರಾಂತಿ ಹೃಚ್ಛೂಲೆ ತಾಪಂ |
ಗತಸತ್ವಂ ನೇತ್ರಮಾಂದ್ಯಂ ಪ್ರಕೃತಿವಿಕೃತಿಯುಂ ಗದ್ಗದಧ್ವಾನಕಂಠಂ ||
ಗತಿಭಂಗಂ ಶ್ವಾಸಖಾಸಂ ರುಧಿರವಮನಮುಂ ಸ್ವೇದಮತ್ಯಂತ[9]ಖೇದಂ |
ಧೃತಕೋಪಂ ತಾಮಿವೆಲ್ಲಂ ವಿಷಮತರಮೆ [10]ನಿಪ್ಪಂಗೆ ಚಿಹ್ನಂಗಳಕ್ಕುಂ || ೮ ||

ಕಂ|| [11]ಇಂತಧಿಕಸ್ಥಾವರವಿಷ |
ಸಂತತಿಯುಮನವಱ ನಾಮವಿಷ[12]ವೀರ್ಯಮುಮಂ ||
ಭ್ರಾಂತರ್ಗೆ ತಿಳಿಯಪೇೞ್ದಂ |
[13]ಮುಂತಱಿಪುವೆನಾವಿಷಾಪಹರಣಕ್ರಮಮಂ || ೯ ||

ಪಲವೌಷಧಿ [14]ಮಂತ್ರದೊಳಂ |
ಕೆಲವುಂ ದುರ್ಲಭತರಂಗಳೆನ[15]ವೇಡವಱೊಳ್[16] ||
ನೆಲೆಯಱಿದು ಯೋಜಿಪಂಗತಿ |
ಸುಲಭಂಗಳೆನಲ್ಕೆ [17]ಪೇೞ್ದಪೆಂ ಮುನಿಮತದಿಂ || ೧೦ ||

## **ಮಂತ್ರಂಗಳ್.**

[18]ಮಂತ್ರಂ

(೧) ಓಂ ನಮೋಭಗವತೇ ಪಾರ್ಶ್ವನಾಥಾಯ ಸ್ಥಾವರಜಂಗಮಕೃತ್ರಿಮ ವಿಷ [19]ಸಂಹಾರಯ, ಹಂ, ಝಂ, ಝಿಂ, ಕ್ಷಿಂ ಹಂಸ ಪಾರ್ಶ್ವನಾಥದೇವತಾಜ್ಞಾ, ವಿಷಹರ ಮಲ್ಲಿನಾಥದೇವತಾಜ್ಞಾ, ತ್ರಿಭುವನಗರುಡಾಜ್ಞಾ, ಶ್ರೀಧರದೇವತಾಜ್ಞಾ ಶೀಘ್ರಂ ನಿರ್ವಿಷಂ ಕುರು [20]ಹುಂ ಫಟ್ ಸ್ವಾಹಾ :— **ಇದು ಸಕಲವಿಷಹರಮಂತ್ರಂ.**

1. ಅವೆಂತೆಂದೊಡೆ. 2. ಷಾಂತಮು (ಗ) 3. ಮಾತ್ಸ್ಯನಾಭ ಮುಕ್ತಿಕ. 4. ನುೞಿಯು....ತೆಯಿಂ(ಗ) 5. ಯೊಳಮಿಂ, ಯೊಳಗಿಂ. 6. ಮತ್ತೆ. 7. ನೋಡಲ್ (ಗ) 8. ನರಿವೆಂ. 9. ಭೇದಂ. 10. ನಿಪ್ಪಂಗ. 11. ಇಂತೀ ಸ್ಥಾವರವಿಷ. 12. ವೀರ್ಯಮನ ಭ್ರಾಂತರಿಗೆ. (ತ) 13. ಮಂತಱಿ. 14. ಮಂತ್ರಗಳೊಳ್. 15. ವೇಡಿವ(ದ)ಱೊಳ್. 16. ಪೇೞ್ವೆಮೆಂತ ಹರೋಳ್ಪಲೆಲ್ಲವ ಜಯರಿಯಲ್. 17. ಪೇೞ್ವೆನಾ ಭೇಷಜಮಂ. 18. ಮತ್ತಂ. 19. ಸಂಹ(ಹಾ)ರಾಯ (ತ) ಹರ್ಂ ಝುರ್ಂ ಮಿರ್ಂ ಕ್ಷಿರ್ಂ ಹಂಸ ಪಾರ್ಶ್ವನಾಥ ದೇವರಾಜ್ಞಾ,........ದೇವರಾಜ್ಞಾ, ತ್ರಿಭುವನ ಗರುಡನಾಜ್ಞಾ ಶೀಘ್ರಂ. (ತ) 20. ಹಲೊಂಫಟ್ (ಗ) ಕುಹೂಂಫಟ್.

(೨) ಓಂ ನಮೋಭಗವತೇ ಸ್ವಚ್ಛಂದ ಭೈರವೆ [1]ಮಹಾಭೈರವೆ, ಕಾಳಕೂಟ ವಿಷಂ ಸ್ಫೋಟಯ, (ಪಾತಯ) [2]ಖಂಡಯ, ಅವದಾ(ತಾ)ರಯ, ನಾಭಿವಿಷಂ, ಹಾಲಾಹಲ[3] ವಿಷಂ ಕೃತ್ರಿಮವಿಷಂ [4]ಶಂಕಾವಿಷಂ (ಉಪಘಾತವಿಷಂ) ಸ್ಥಾವರವಿಷಂ ಜಂಗಮವಿಷಂ (ವಿಷಂ) ಕಾಲಚಂಚುಚಾಪರಯೂತಾಜ [5]ಸುಮಂತು ಜ(ಹಾ)(ನಾ)ದ್ವಯುಃ ಚಿನ್ನ[6]ನಳ(ನ)ಖ ಚಂದ್ರ ಜಯ ಓಂ ಕಾಳಾಯ ಮಹಾಕಾಳಾಯಕಾಳಗರ್ಭ(ವಿಷ)ದೇವಿ ಅಮೃತಗರ್ಭ ದೇವಿ [7]ಓಂ ಕ್ಷಾಂ ಕ್ಷೀಂ ಕ್ಷೂಂ ಕ್ಷಾಂ ಕ್ಷೂಂ ಓಂ ಹುಂಫಟ್‌ಸ್ವಾಹಾ [8]ನಾಸ್ತಿ ವಿಷಸ್ವಾಹಾ :—

**ಇದು ಸ್ವಚ್ಛಂದ ಭೈರವೀಮಂತ್ರಂ.**

(೩) ಓಂ ಅಮೃತೇ, ಅಮೃತೋದ್ಭವೇ, ಅಮೃತವರ್ಷಿಣಿ, ಇದಮಮೃತಂಸ್ರಾವಯ ಸಂ, ಕ್ಲಿಂ ಬ್ಲೂಂ, ದ್ರಾಂ, ದ್ರಿಂ, ದ್ರಾವಯ, ಹಂ ಝುಂ ಝುಂ (ಕ್ಷಿಂ) ಹಂಸಸ್ವಾಹಾ :—

**ಇದು ಅಮೃತಧಾರಾಮಂತ್ರಂ.**[9]

*(೪) ಓಂ ನಮೋ ಭಗವತೇ [10]ಒಡ್ಡಾಮರೇಶ್ವರಾಯ ಕುಂಚಿತವೃತ್ತ ಅಮೃತ [11]ಜಟಾ(ಧರಾ)ಯ ಠ ಓಂ [12]ಅಭಮಹಾಯುತೋ ಒಬಿ ಹಠಾಲೇವರ್ಸಸ್ವಿ ನಯನಖಾತಯು ಖಾಯಿನೆಮಯುಖಾಯೆ, ಶ್ರೀರಾಮೇಶ್ವರಾಯ ದ್ರಾಂ ಹ್ರೂಂ ಹ್ರಾಂ ಹರಹರವಿಷಂ ಸ್ವಾಹಾ:—

**ಇದು ಒಡ್ಡಾಮರೇಶ್ವರೀಮಂತ್ರಂ.**

ಈ ನಾಲ್ಕುಮಂತ್ರಂಗಳ್ ಪಠಿತ ಸಿದ್ಧಿ.[13]

ಈ ಮಂತ್ರವಾರ್ಧಾರೆಯ ವಿಧಿತ್ರಯ (ಪಠಿತಸಿದ್ಧಿ).

ಶಾ|| ಈಮಂತ್ರಂಗಳೊಳಾವುದೊಂದ[14]ಱೊಳಣಂ ತಾಂ ನಂಜಿನಿಂ ದಗ್ಧನ |
ಪ್ಪಾ ಮರ್ತ್ಯಂಗಮ[15]ನೊರ್ಮೆ ಮಂತ್ರಿಸು[16]ವುದಂತಾ ಮಂತ್ರವಾರ್ಧಾರೆಯಿಂ ||
[17]ಸೋಮಧ್ಯಾನವಿಶೇಷದಿಂ ತಳಿದು[18] ಸಮ್ಯಗ್ಭೇಷಜಾನೀಕಮಂ |
ನಾಮೋಚ್ಚಾರಣಪೂರ್ವಕಂ ಪಠಿಸಿ ದಷ್ಟಂಗೀಯೆ ಬಾಳ್ಗುಂ ದಿಟಂ || ೧೧ ||

---

1. ಇದು ಒಂದುಪ್ರತಿಯಲ್ಲಿಲ್ಲ. 2. ಖಾದಯ, ಅವತಾರಯ. 3. ಇಲ್ಲಿ. 4. ಶಂಕಾವಿಷಂ, ಉಪಘಾತುಕವಿಷಂ, ಸ್ಥಾವರ ಜಂಗಮವಿಷಂ, ಕಾಲಚಂಚು ಜಾಪರಯುತ ಸುಮಂತುಜಸಾಧಯ. 5. ಸುಮಂತಿಜ. 6. ನರಖ ಚಂದ್ರಯ. ಜನ್ಮವಳನಮಿ ಚಂದ್ರಜಯ ಓಂ ಕಾಳಾಯ ಮಹಾಕಾಳಾಯ ಗರ್ಭದೇವಿ ಓಂ ಕ್ಷರ್ ಕ್ಸಾರ್ ಹುಂಫಟ್‌ಸ್ವಾಹಾ (ಇದು ನಾಲ್ಕಾವೃತ್ತಿ ಎಂದು ಕೆಲವುಪ್ರತಿಗಳಲ್ಲಿವೆ. (ಹೂಂ ಫಟ್) ಎಂಬುದು ನಾಲ್ಕಾವೃತ್ತಿಯಿದೆ. 7. ಓಂ ಕ್ಷಾಂ ಕ್ಷಾಂ ಕ್ಷಾಂ ಓಂ ಹೂಂ ಹೂಂ ಹೂಂ ಫಟ್ ಫಟ್ ಫಟ್ ಫಟ್ ಫಟ್. 8. ನಾಶಿವಿಷಂ. 9. ತ್ರಯಪಠಿತ ಸಿದ್ಧಿ. 10. ದಡ್ಡಾವರೇ........ತ ಓಂ ಆಭಾಬೂ ಹೂಯಿ ದ್ರೋಭಕಹಡಾಲೆವಪತಿಚಪಿ ಯೆನಕತಯು ಕೋಯಾನಮಯುಖಯು ಶ್ರೀ ರಾಮೇಶ್ವರರಾಯ ದ್ರಾಮ್, ಹೂಮ್ ಹಮ್ ಹರವಿಷಂಸ್ವಾಹಾ, ಈ ನಾಲ್ಕುಮಂತ್ರಗಳೂ ತ್ರಿಪಠಿತಸಿದ್ಧಿ. 11. ವೃತ್ತಜಟಾಯ (ಗ) 12. ಅಭಯೇಸ್ವಾಮಿತೋಭ ನಿಹದೊತೆವೆರ್ಸತಿ । ಚಕೀಟನರತಯುಖೋಯಾನ ಮಯೂಖಾಯೇ ಶ್ರೀ ರಮೇಶರಾಯ (ಗ) (ತ) 13. ಈ ನಾಲ್ಕುಮಂತ್ರಗಳುಂ ಪಠಿತಸಿದ್ಧಿ (ಗ) (ತ) 14. ಱಿನತೀವಂ. 15. ನೊರ್ಪ್ಪೆ (ಗ) 16. (ತ) ವುದುತಾಂ ಪುದುಂತಾಂ, ಮಂತ್ರಾತ್ಮ (ಗ) (ತ) 17. ಸಾಮಧ್ಯಾನ, ಸೋಮೋಧ್ಯಾನ (ಗ) 18. ಸಮ್ಯಗ್ಭೇಷಜವ್ರಾತಮಂ (ತ)

* ಆರಾಜ್ಯೆನಲೈಬ್ರರಿಯ ಓಲೆಯಪ್ರತಿಯಲ್ಲಿ ಈ ಮಂತ್ರವಿಲ್ಲ ನಿರಂತರವಾಗಿ ಸಂಖ್ಯೆ ೧೯ ಇದೆ.



ಕಂ|| [1]ವಮನೋಪವಾಸಮಂ ತ |
ತ್ಕ್ರಮದಿಂ ಮಾಡಿಸಿ ಮಲಾಪರಣಮದಿಂಬಿಂ ||
ಸಮನಿಸೆ ಬಱಿಕ್ಕಮವರ್ಗಂ |
ದು ಮಹಾಭೇಷಜಮನೀ(ಯೆ)ಗೆ ವಿಷಹರಮಕ್ಕುಂ || ೧೨ ||

**ಸರ್ವವಿಷಕ್ಕೆ ವಮನಂಮಾಳ್ಪುದು.**

ಕಂ|| ಮದನಫಲಲೋಧ್ರಮೆಂಬಿವ |
[2]ನುದಕದೊಳಂ ಕುಡಿಯೆ ಕುಡುವುದಂತಲ್ಲದೊಡೀ |
ವುದು ಬಜೆಯೊಳುಪ್ಪುಮಂ ಬೆರ |
ಸಿದು ವಮನಮದಾಗೆ ಸರ್ವ[3] ವಿಷಹರಮಕ್ಕುಂ [4]|| ೧೩ ||

ಉದಕದೊಳೆ ಬಿಳಿಯ ಬೇರಂ |
ಪದನಱಿದೀಯಲ್ಕೆ ವಿಷಮ[5]ನಱಿದಾ ವಮನಂ ||
ಅದು ದೊರಕದಂದು ಚುಂಚಿನೊ |
ಳೊದವಿದ ಬೀಜಮುಮನರೆದು ಕುಡುವುದು ಬೇಗಂ || ೧೪ ||

ನೀರೊಳ್ ಮಱುಗಿಸಿ ಕುಡು ಕಾ |
ಳ್ವೀರೆಯ ಬೇರಂ ಸಮಾಕ್ಷಿಕಂ [6]ಘೃತದಿಂ ಸಂ ||
ಹಾರಿಸುಗುಂ ವಮನಂ ವಿಷ |
ದಾರುಣಮಂ ತತ್‌ಕ್ಷಣಂ [7]ಭಿಷಗ್ವರಮತದಿಂ || ೧೫ ||

ನೀರೊಳ್ ಮಱುಗಿಸಿ ಕುಡು ಕಾ |
ಳ್ವೀರೆಯ ಫಲವೊಂದನಾದೊಡಂ ತತ್‌ಕ್ಷಣದಿಂ ||
ದಾರುಣವಿಷಂಗಳಂ ಸಂ |
ಹಾರಿಸುಗುಂ ಛರ್ದಿಯಾಗೆ ಮನುಮುನಿಮತದಿಂ || ೧೬ ||

ಚಂ|| ಎಳದೆನಿಸಿರ್ಪ [8]ಕೈಪೆಸೊರೆಯೊಪ್ಪುವ ಕಾಯ ರಸಂ ಬರಲ್ಕವಂ |
[9]ಪಿಱಿ ಮೆಲುಗಿಚ್ಚಿನಿಂದಡು ಗುಳಂ [10]ಬಱಿಯೊಳ್ ಚಣಕಪ್ರಮಾಣದಿಂ ||
ಗುಱಿಗೆಯನೊಪ್ಪೆಮಾಡಿ ಗುಡಮಿಶ್ರಮದಾಗಿರ[11]ಲಿತ್ತೊಡಾಕ್ಷಣಂ |
ತೊಲಗುಗುಮೆಯ್ದೆ ವಾಂತಿಯೊಳೆ ಸರ್ವವಿಷಂ ವಿಭುಮಂಗನುಕ್ತಿಯಿಂ || ೧೭ ||

---

1. ಮಮನೋ (ಗ) ....ಮನಿಂಬಿಂಸಮನಿಸಿ 2. ನುದಕದೊಳಂ ಕುಡಿಯೆ ಕೊಡುವುದಂತಲ್ಲ(ದೊಡೆ); ಡಿಂಬೀ; ದೊಡೇಂ ಇದು (ಗ) 3. ದಾಗೆ ಸರ್ವವಿಷಸಂಹರಣಂ. 4. ಪದ್ಯಸಂಖ್ಯೆ ೧೩ ಇದೆ, ಇಲ್ಲಿಂದ ಟೀಕೆಯಿದೆ. 5. ನಱಿಗುಮಮೋಘಂ....(ಗ), (ತ) 6. ಸಘೃತಂ ಸಂಹಾ (ತ) 7. ಭಿಷಜ್ಜ್ವರ. 8. ಕೈಸೊರೆಯೊಳೊಪ್ಪುವ. 9. ಬಳಿಮೆಲುಗಿರ್ಚಿನಿಂ. 10. ಬಳಿ(ಲಿ)ಯಲ್ ಬಣಕಪ್ರಮಾಣಿನಿಂ. 11. ಲಿತ್ತ ದಾಕ್ಷಣಂ.

ಉ|| ನಂಜು[1]ತಗುಳ್ದ ದೆಂದೆನಿಸುಮುಂಜಲದೇವುದು (ದೊ)ಶೀತತೋಯದಿಂ ||
ರಂಜಿಪ ಪುತ್ರಜೀವಿಯನೆ ನಿಷ್ಕಸಮಾನಮನಿತ್ತೊಡಂತೆ[2] ತಾ ||
ನಂಜನನಶ್ಯದಿಂದಳಱಿಕುಂ[3] ಹರಿಯೆಂತು ತಗುಳ್ವದಂತಱಿಂ |
ಕುಂಜರಕೋಟಿಯುಂ ಬೆದಱುವಂದದೊಳಂ ಕವಿಪದ್ಮಭಾಸ್ಕರಾ || ೧೮ ||

## ಹಾಳಾಹಳಾದಿ ಮುಖ್ಯವಿಷಕ್ಕೆ.

ಕಂ|| ಮೂಲಫಲಪತ್ರಸಂಭವ |
ಹಾಲಾಹಲಮುಖ್ಯಜಾತಿಯಂ ಸಂಹರಿಸಲ್ ||
[4]ನೀಲಿ ಹಯಗಂಧಿ ಅಱಿಂಚಿಕೆ |
ಸಾಲದೆಯೊಂದೊಂದೆ ಧರೆಯೊ[5]ಳಂ ಕೊಲೆ(ಳೆ)ಯಿವಱಿನೊಳ್ || ೧೯ ||

ಬಜೆ ತುತ್ಥಟಂಕಣಾಖ್ಯಂ |
ರಜನಿ ಭುಜಂಗಾಕ್ಷಿ ಶೈಲ[6]ಕರ್ಣಿಕೆ[7]ಯೆಂದುಂ ||
[8]ವೃಜಿನವೆನಿಪಖಿಳಗರಳ |
ತ್ಯಜನಕ್ಕೊಂದೊಂದೆ ಕುಡಿಸು ನರಮೂತ್ರಯುತಂ || ೨೦ ||

## ಸರ್ವಸ್ಥಾವರಕ್ಕೆ.

ಕಂ|| ಮಧುವಿಂ [9]ಮುಸಲೀ ಕಂದಂ |
ವಿಧಿಯುಕ್ತಂ ಕಟುಕಮಿಶ್ರಿತಂ ಮೇಣ್ ಮಧುವಿಂ ||
ಸುಧೆಗೆಣೆಯಪ್ಪಜದಂಡೆಯ |
ನೆ ಧಾರ್ಮಿಕಂ [10]ಕುಡಿಸಲದು ವಿಷಂಗಳನಱಿಗುಂ || ೨೧ ||

ಮ|| ಸ್ರ|| ಅರಿದೀ ಹಾಲಾ [11]ಹಲಾದ್ಯಂ [12]ವಿಷಮತರಮಿದೆಂದಂಜ [13]ವೇಡಿಲ್ಲಿ ಬೇಗಂ |
ನರಮೂತ್ರಂ ಗವ್ಯಮೂತ್ರಂ ಪಱಿಯಘೃತಮಿರಲ್ಕಾವುದೊಂದೊಂದಱಿನೊಳ್[14]ಕೊಂ||
ಡರೆದಾ ಹಾರಿದ್ರವೊಂದಂ [15]ಕುಡೆ ಪರಿಹರಿಕುಂ ಕಾಳಕೂಟಾದಿಯಾ ಸ್ಥಾ |
ವರಮಂ ತಜ್ಜಂಗಮಾಖ್ಯಂಗಳವೆನಿತನಿತಂ ಮಂಗರಾಜೋಕ್ತಿಯಿಂದಂ || ೨೨ ||

ಕಂ|| ಅರಿಸಿನ ಗೋಕ್ಷೀರಂ ಮೇ |
ಣರಿಸಿನ ರುಜೆವೆರಸು ಪಾಲೊಳಂ ಮಱುಗಿಸಿ ಮೇ ||
ಣರಿಸಿನರುಜೆ ಮಧ್ವಾ[16]ಜ್ಯಮು |
ನಿರದೀಂಟಲ್ ಸರ್ವವಿಷಮು ವಿಷ[17]ಸಂಹರಣಂ || ೨೩ ||

---

1. ತರಳ್ದದೆಂದಿನಿಸುಮುಂಜಲದೀವುದು. 2. ಡಂತೆ ಮತ್ತಂಜನ. 3. ಹರಿಯಂತುರೆ ತಪ್ಪದಾ ಕ್ಷಣಂ....ಬೆದಱಿಪಂದದೊಳಂ, ಹರಿಯೆಂತು ತಗುಳ್ವದುಕರಂ (ಗ) 4. ನಿಱಿಹಯ, ....ಅಂಜಿಗೆ. 5. ಳಂ ಕೊಱಿವಳ್. 6. ಕನ್ಯಕಿ. 7. ಯಿವನೀಂ । ವ್ರಜನ....ದೊಂದ. 8. ವ್ಯಜನ. 9. ಮೂಶಲಕಂದಮು ಮಧು. 10. ಕುಡಿಸಲರದು ವಿಷಗಳ. 11. ಹಲಾದ್ಯಂಗಳೆವಿಷ; ಹಲಾಖ್ಯಂ 12. ವಿಷಮತರವಿಷಕ್ಕಂಜವೇಡಿಷ್ಟ ಬೇಗಂ. ವಿಷಮುಮಿವೆಂ (ತ) 13. ವೇಡಣ್ಣ. 14. ಕೊಂಡರೆಹಾ ರಿದ್ರವೊಂ (ಗ) 15. ಕೊಡೆ. 16. ಜ್ಯಮು ನಿರದೀಂ. 17. ಪರಿಹಾರಂ (ತ)



ಕಂ|| ನೀರಿಂದೆ ಬಿಳಿಯಗುಂಜಿಯ |
ಬೇರಂ[1]ಬಜೆವೆರಸು ರಾಗದಿಂ ಕುಡಿಸಲೊಡಂ ||
ದಾರುಣವಿಷ[2]ದಗ್ಧಂಗಂ |
ಪಾರದೆ ಪೆಱತಂ ವಿಷಾಪ[3]ಹರಣಮಿದಕ್ಕುಂ || ೨೪ ||

## (ಹಾಲಾಹಲಕ್ಕೆ) - ಕಾಲಕೂಟವಿಷಕ್ಕೆ.

ಕಂ|| [4]ವರತಿಗುಡೆಗೂಡಿ ಕೊತ್ತುಂ |
ಬರಿಯೊಂದೆ ಕಳೆವುದಲ್ತೆ ಹಾಲಾಹಲಮಂ ||
ನಿರುತಂ [5]ಗುಡ ಕಾರ್ಪಾಸದ |
ಸುರಸಂಗಳ್ ಕಾಲಕೂಟಮಂ ಪರಿಹರಿಕುಂ || ೨೫ ||

## ರಕ್ತಶೃಂಗೀವಿಷಕ್ಕೆ.

ಕಂ|| ಅರಿದೆನಿಪ ರಕ್ತಶೃಂಗಿಯ |
ಗರಳಕ್ಕಂ ಗೋಮಯೋತ್ಥಜಲಮಂ ಕುಡಿಸಲ್ ||
[6]ಪರಿಹರಿಕುಂ ಮೇಣ್ ಶೃಂಗಿಯ |
ಗರಳಮನಂಗುರುವಿದೊಂದೆ ಕಳೆಗುಮಮೋಘಂ || ೨೬ ||

## ವತ್ಸನಾಭಿಗೆ.

ಕಂ|| [7]ಸಾಸಿವೆ ಮೆಣಸುತ್ತರಣೆಯ |
ನಾಸರ್ಪಿಶ್ಶರ್ಕರಾಯುತಂಗ[8]ಳನರೆದೀ ||
ಗಾಸುರದ ವತ್ಸನಾಭನ |
ವಾಸನೆಯಿಂ ಕಿಡಿಸಿ ಕಳೆಗುಮಾ ಕ್ಷಣದಿಂದಂ || ೨೭ ||

ಜೀರಕಮತಿಬಜೆ [9]ತಗಚೆಯು |
ಮಾರ[10]ಜನಿಯುಮಭ್ರನಾದಿ ಯಜ[11]ಮೂತ್ರಯುತಂ ||
[12]ವಾರಿಪುವು ವತ್ಸನಾಭನ |
ಕ್ರೂರತೆಯನಿವಾಱು[13]ಮರ್ದಿನೊಳ್ ಪ್ರತ್ಯೇಕಂ || ೨೮ ||

ಅಭಯಾಮಲಕಾಕ್ಷಂಗಳ್ |
[14]ಸುಭಾಂಡದಿಂ ಕ್ವಥಿತಮಾದ ಜಲಮಂ ಕುಡಿಸ ||
ಲ್ಕಭಿಭವಿಪ ವತ್ಸನಾಭ |
ಪ್ರಭವಭಯಂ ಪಿಂಗುಗುಂ ಮನೋಹರ[15]ಚರಿತಾ || ೨೯ ||

---

1. ಬಳಿಚೆ. 2. ದಷ್ಟಂಗಂ ಸಾಲದೆ(ರ)ಪೆಱತೇಂ (ಗ) (ತ) 3. ಹಾರಮಿ. 4. ಮರದಿಗುಡೆ. 5. ಕುಡು. 6. ಪರೆಗುಂಮೇಣಾ (ತ) 7. ಸಾಸುವೆಸುತ್ತರಣೆ. 8. ಗಳೊಳರೆದೀ, ದ್ವಯಂಗಳೊ (ತ) 9. ಚಗಚೆ, ತಗತೆ. 10. ರಜನಿವರಾಭ್ರ (ತ) 11. ಮೂತ್ರಮಿವುಂ. 12. ಜಾರಿಪುವು, (ಗ) ಬಾರಿಪುವು (ತ) 13. ಮರ್ದೊಳಂ. 14. ಸುಭದಿಂ. 15. ಚರಿತಂ.

### [1]ನಾಂಗು(ಲೀ)ರಿಕದವಿಷಕ್ಕೆ.

ಕಂ|| ವಮನೋಪವಾಸಮೇ ಮು |
ಖ್ಯ[2]ಮದಕ್ಕಂ ಕ್ರಮದೊಳೊಂದೆ ಕುಡುವುದು ದುಗ್ಧಾ ||
ಜ್ಯಮುಮಂ ಮಲಹರಣಮುಮಂ |
ಕ್ರಮದಿಂ ಮಾಡಿಸುಗೆ [3]ನಾಂಗುರಿಕವಿಷಮಳಿಗುಂ || ೩೦

*ಪೊಸತಪ್ಪಕೋಷ್ಠ ಸೈಂಧವ |
ಮೆಸೆವುಷ್ಣೋದಕದೊಳೀಯಲಳಿಗುಂ ಮತ್ತಂ ||
ವಸುಧೆಯೊಳೆ [4]ಬಿಳಿಯಸುಂಡೆಯೆ |
ದೆಸೆಗೆಡಿಕುಂ ನಾಂಗುರೀಕ [5]ದೆಸಕದ ವಿಷಮಂ || ೩೧ ||

ಮಾಗಧಮೊಂದಲ್ಲದೊಡಾ |
ನಾಗರಮದುಮಿಲ್ಲದಿರ್ದೊಡಂ ನೀಲಿಯುಮಂ ||
[6]ಬೇಗದೊಳರೆದೀವುದು ತಾ |
[7]ನಾಗಳೆ ನಾಂಗುರಿ(ಲಿ)ಕ ವಿಷಮವಿಷಮಂ ಕಳೆಗುಂ || ೩೨ ||

†ನಾಗರಮಧುಕಮುಮಂ ಸಮ |
ನಾಗಿರೆ ತಕ್ರದೊಳೆ ಕುಡಿಸೆ ಮೇಣಕ್ಕೆಯುಮುಂ ||
ಬೇಗಂ ಬೆನ್ನೀರೊಳ್ ಕುಡೆ |
ನೀಗುಗುಮರಿದೆನಿಪ[8]ನಾಂಗುರೀಕದ ವಿಷಮಂ || ೩೩ ||

### [9]ಕಣಿಗಿಲ (ಬೇರು ಎಣ್ಣೆಗೆ) ವಿಷಕ್ಕೆ.

ಕಂ|| ಕರವೀರದ ಸೊಕ್ಕಿಂ[10]ಗರೆ |
ದರಿಸಿನಮಂ ದಧಿಘೃತಂಗಳಿಂ ಕುಡು ಮತ್ತಂ ||
ದೊರಕದೊಡಣಿಲೆ ನಿಶಾಶ |
ರ್ಕರೆಯಂ [11]ಬೆರಸಿತ್ತೊಡಾಗಳಂತದು [12]ಕಿಡುಗುಂ || ೩೪ ||

---

1. ಕೋಟಕುಟುಕನ ಗೆಡ್ಡೆಗೆ. 2. ಮದಕ್ಕಂ ಶ್ರಮದೊ. 3. ಣಾಂಗುರೀಕವಿಷಘ್ನಂ. ನಾಂಗುಲಿಕದೆಸಕ ವಿಷಘ್ನಂ (ತ) 4. ಬಳ್ಳಿಸುಂಡೆಯಿ (ತ) 5. ದೇಸದ. 6. ಬೇಗಂ ನೀರೊಳ್ ಕುಡಿಯಿಸೆ, ಬೆನ್ನೀರೊಳ್ ಕುಡೆ. 7. ನೀಗುಗುಮರಿದೆನಿಪ ವಿಷಮುಮಂ ಮೂರ್ಛೆಯುಮಂ. 8. ನಾಂಗುಲಿಕ ಮೂರ್ಚ್ಛೆಯುಮಂ. (ತ) (ಗ) 9. ಕಣಿಗಿಲೆಬೇರು ಎಣ್ಣೆಗೆ. 10. ಗಿರದೀ. 11. ಬೆರಸಿತ್ತೊಡಾಗಳುಂತದುತಿಳಿಗುಂ, ಬೆರಸೀಯಲಂತದಾಗಳೆತಿಳಿಗುಂ, (ಗ)........ಸೊಕ್ಕಿಂ. (ಕ. ಖ.) 12. ತಿಳಿಗುಂ.

* (ಗ) ಪ್ರತಿಯಲ್ಲಿ ಈ ಪದ್ಯವಿಲ್ಲ. ಮುಂದಣ ಪದ್ಯವು ಲ್ಲದೊಡಂ ನಾಗರಮಧುಮಿಲ್ಲದಿರ್ದೊಡಂ.... ಗೊಳರೆದೀವುದು.—ಎಂದಿದೆ (ತ) ಪ್ರತಿಯಲ್ಲಿ ಈ ಪದ್ಯವನ್ನು ಓಲೆಯಮೇಲೆ ಸಣ್ಣಕ್ಷರದಲ್ಲಿ ತಿದ್ದಿಬರೆದಿದೆ.

† ಈ ಪದ್ಯವು—ಕ. ಖ ಗಳಲ್ಲಿಲ್ಲ.



ಕಂ|| [1]ಅಭಯ ನಿಶೆ ಮರಿಚ ಮಧುಕ |
ಪ್ರಭೇದದಿಂ[2]ದಿರ್ದ ನಾಲ್ಕುಮಂ [3]ಕೂಡಿಯವಂ ||
ಶುಭದಪಯೋಮಿಶ್ರದಿನೀ |
ಯೆ ಭಯಂಕರಮಪ್ಪ ಕಣಿ[4]ಗಿಲತಿವಿಷಮಳಿಗುಂ || ೩೫ ||

*ಪುಳ್ಳುಂಪುಣಿಸೆ[5]ಯುಮುಮಂ ಕೂ |
ಡೊಳ್ಳಿದುವೆನಿಸಿರ್ಪ ಗೋಳಿಯಂ ಕುಡು ಮತ್ತಂ||
ಮಲ್ಲಿಗೆನೀಲಿಗಳಂ ತಳು |
ವಿಲ್ಲದೆ [6]ಕುಡು ಕಣಿಗಿಲುಗ್ರತರವಿಷಮಳಿಗುಂ || ೩೬ ||

ಅರಿಸಿನಮಂ ಶರ್ಕರೆಯಿಂ |
ದರೆದೀವುದು ಮಧುಕಸಹಿತಮಣಿಲೆ[7]ಯುಮುಮಂ ಮೇ ||
ಣಿರದೀವುದಣಿಲೆಯೊಂದಂ |
ಪರಿಹರಿಕುಂ ಕಣಿಗಿಲುಗ್ರ ವಿಷಮೆನಿತನಿತಂ || ೩೭ ||

ಖದಿರ ಪ್ರಸೂನ[8]ಮಾ ಖದಿ |
ರದ ರಸಮಂಬಿಲಮುಮಾಮ್ರ ಗೋಕ್ಷೀರಮು[9]ಮೊ ||
ಳ್ಳಿದುವಪ್ಪ ಬೆಣ್ಣೆ ಯಂಗುರು |
ಮದಿರಿಪುದೊಂದೊಂದೆ ಕಣಿಗಿಲುಗ್ರಮನನಿತಂ || ೩೮ ||

### † (ಅಶ್ವಮಾರಿಯ ವಿಷಕ್ಕೆ?)

ಕಂ|| ತರಣಿಯ ಮೂಲಂ ಸಜಲಂ |
ಮರಿಚಂ ಸಹತಕ್ರಮಲ್ಲದಂ[10]ದರೆ ಬೆನ್ನೀ ||
ರರಿಸಿನಮಂ ನೀರೊಳದಂ |
ಭರದಿಂ ಕುಡಲಶ್ವಮಾರಿಯುಗ್ರವಿಷಘ್ನಂ †|| ೩೯ ||

### ಭತ್ತದ (ನೆಲ್ಲ) ಬೇರ ವಿಷಕ್ಕೆ.

ಕಂ|| ಅಂಬಿಲ ಲವಣಹರೀತಕಿ |
ಜಂಬೂಫಲ [11]ಯಷ್ಟಿಮಧುಕಮೆಂಬಿವು ನಿಜದಿಂ ||
"ಕಿಂಬಹುನಾ" ಶಾಲಿಯ ಬೇ |
ರಿಂಬಿನ ವಿಷಹರವಿದಲ್ತೆ ಸುಜನವರೇಣ್ಯಾ || ೪೦ ||

---

1. ಅಭಯುಗಿಮ (ಗ) 2. ಪೇಲ್ದ. (ತ) 3. ಸಮಂಕೂಡುಗವಂ. 4. ಗಿಲ....ಮಿಳಿಗುಂ. (ತ) 5. ಯೊಳಂ. 6. ಕುಡೆ. 7. ಯುಮಂದಿರ. 8. ನಮಂತಾ | ಖದಿಸೂನಮೂಲದಿಂದ....ಮ್ರಗೋಕ್ಷೀ, ಸೂನಮೂಲದಸಮಂಬಿಲ....ಮ (ತ) 9. ಮೊಳ್ಳಿದರ್ಪ ಬೆಣ್ಣೆಯಂಗುರುಗುದಿತಿಪುಡೊಂ. 10. ಬೆಂದಿಪೆರಡರಿದರೆ ಬೇಗಿಟ್ಟೆರಡರಿಸಿನಮಂ ನೀರೊಳ್, ದರೆಗಿರದರಿಸಿನಮಂ ನೀರೊಳ್ (ಗ) ದಿರದರಿಸಿನಮಂ ನೀರೊಳ್ಭರದಿಂ (ತ) 11. ನಷ್ಟಿ (ಗ), ನಷ್ಟಿಮಧುರ.

* (ತ) (ಗ) ಇದು ಕೆಲವುಪ್ರತಿಗಳಲ್ಲಿ ೩೯ ನೆಯ ಪದ್ಯವಾದ ಮೇಲಿದೆ. † ಅಶ್ವಮಾರಿ ಎಂಬುದೂ ಕಣಿಗಿಲಾದುದರಿಂದ ಈ ಶಿರೋಲೇಖನವು ಪುನರುಕ್ತವಾಗಿರುವುದು.

ಕಂ|| ಕಿಱುನೆಲ್ಲಿ ಯಕ್ಕಿಗರ್ಚುಮ |
ನೆಱೆ[3]ವುದು ಮೇಣ್ ಪುಳಿಯನೆಱೆ[3]ವುದಲ್ಲದೊಡಂ ತಂ ||
ದೆಱೆ[3]ವುದು ಕಾಂಜಿಕವೊಂದಂ |
[1]ಪಱಿಪಡಿಕುಂ(ಗುಂ) ನೆಲ್ಲಬೇರ ವಿಷಮಾಕ್ಷಣದಿಂ || ೪೧ ||

**ಕಹಿಸೋರೆಯ ವಿಷಕ್ಕೆ.**

ಸಲಿಲಯುತಮರಳಗಂಜಿಯ |
ನಲಸದೆ ಮೇಣ್[2]ದಧಿಯುತಂ ಪುನರ್ನವಿಯಂ ಮೇಣ್ ||
[3]ಪಲವರೊಳೇನಂಗುರಮಂ |
ಜಲದಿಂ ಕುಡಿಸಲ್ಕಲಾಬುವಿಷಮಂ ಕಳೆಗುಂ || ೪೨ ||

**ಕಹಿಹೀರೆಯ ವಿಷಕ್ಕೆ.**

ಜಂಬೂರಸಮಂ ಕುಡು ಕಟು |
ತುಂಬಿಯ ಫಲದಲದೊಳೊಗೆದ ಪಟುತರವೆನಿಪಾ ||
ಡಂಬರದ ವಿಷಮನಱಿಗುಮು |
ದಂಬುಧರಂ ಕೈಪೆವೀರೆಗುಪವಿಷಮುಕ್ಕಂ *|| ೪೩ ||

ಘ(ಗ)ಟಯಿಸಿತಿದು ಕಾಱ್ಸೀರೆಯ |
ಪಟುವಿಷವೆಂದಂಜಬೇಡ ಘನರವವೊಂದಂ ||
ಕಟುತರಪಿಪ್ಪಲಿಯಂ ಮೇಣ್ |
[4]ಝುಟಿತೆಯೊ[5]ಳಿಕ್ಕಲ್ಕದಱಿಯದೇ ತದ್ವಿಷಮಂ || ೪೪ ||

**ಕಾಂಜೀರ ವಿಷಕ್ಕೆ.**

[ಭೋರನೆ ನೇಱಿಲ ತಿಗಡಂ |
[6]ಕ್ಷೀರದೊಳಲ್ಲದೊಡೆ ನಿಶೆಯು]ಮುಭಯಮುಮಂ ಬೆ ||
ನ್ನೀರೊಳ್ ಕುಡೆ ಕಳೆಗುಂ ಕಾಂ |
ಜೀರವಿಮಿಶ್ರಿತಮೆನಿಪ್ಪ ತಿಳಜದ ವಿಷಮಂ || ೪೫ ||

**ಇಟ್ಟಬೀಜದ ವಿಷಕ್ಕೆ.**

ಬಾಱಿ[3]ಯ ಪಣ್ಣೇಱಲ[7]ತಿವು |
ಡಾಳೋಚಿಸೆ ಮೇಣದುಕ್ಕಿ[8]ನುದಕಂ ಮೇಣ್ ಸಿತ ||
ಬಾಳಂ ತೋಯಸಮೇತ[9]ಮ |
ದೇಱಲಮೇನಿಟ್ಟಯೆಸೆವ ವಿಷಮಂ ಕಳೆಗುಂ || ೪೬ ||

1. ಪರಿಪರಿಗುಂ. 2. ಮೇಣ್ಣದಿಯುತಂ. 3. ಪಲವರತೊಳೊನಂಗುರ ನಟಯಿಸಿತದು ಕಾಱ್ಸೀರೆಯ ಪಟುವಿಷವೆಂದಂ (ಗ) 4. ಝುಡಿತೆಯಿಸೆ ವಿಸಲ್ಕದಱಿಯದತದ್ವಯ.... || ೪೭ || 5. ಳೀಯಲ್ಕದಿಱ 6. ಕ್ಷೀರದೊಡಲ್ಲದೊಡಂ ನಿಶಿಯಂಭೋರನೇಱಲತಿಗುಡಂಭಯಮಂ. 7. ತೊವಲಾಯದೇಂ ನಿಂದಪುದೇ, 8. ನುದಕಂ ಶ್ವೇತಂ, ಸೆತಬಾಳಂ. ಟೀಕೆಯಲ್ಲಿ - ಅದಲ್ಲದಿದ್ದರೆ ಉಕ್ಕುಳಿಯಕುಡಿಸುವುದು - ತುವರಳೊಜಿಸ. 9. ಮವೇಳಿದುವೊನಿಟ್ಟ.
ಎಂದು ಅಸ್ಪಷ್ಟವಾದ ಅರ್ಥ ಬರೆದಿದೆ.

* ಇಲ್ಲಿಂದ (ಕ. ಗ) ಪ್ರತಿಗಳಲ್ಲಿ (ಇದು ೪೬-ನೆಯ ಪದ್ಯವಾಗಿ) ೩ ಪದ್ಯ ಹೆಚ್ಚಿದೆ. M. O. M. ಪ್ರತಿಯಲ್ಲೂ ಹೀಗಿಯೇ ಇದೆ.



**ಜೇಪಾಳದ ವಿಷಕ್ಕೆ.**

ಕಂ|| ಜಂಬೀರ ಪುತ್ರಜೀವಿಯ |
ನಿಂಬಿಂ[1]ಕುಡಿಸಲ್ಲದಂದು ಹೆಸಱಿನ ಪೊಸಕ ||
ಟ್ಟಿಂಬುದುಮಂ ಕುಡೆ ಜೇಪಾ |
ಳಂ[2]ಬೊರೆದ ವಿಷಂಗಳಂ ವಲಂ ಸಂಹರಿಕುಂ || ೪೭ ||

**ಉನ್ಮತ್ತದ ವಿಷಕ್ಕೆ.**

ಉ|| [ತಾವರೆಯಕ್ಕದಲ್ಲದೊಡ] ಮಾಸಡಿ ಮೇಣ್ ರವಿಮೂಲಮು[3]ಕ್ಕದಾ |
ತಾವರೆ ಶರ್ಕರಾನ್ವಿತಮದಾಗಲಿ ಪಱಿತ್ತಿಯ ಬಿತ್ತುಪಾಲ್ಗಳುಂ ||
ಭಾವಿಸಲಾ ನಿಶಾದ್ವಯಮದಲ್ಲದೆ ಕೈತಕಮೂಲಮುಕ್ಕದಂ |
[4]ಜೀವನಮಿಶ್ರದಿಂ ಕನಕದುಗ್ರವಿಷಾಪಹಮುಕ್ಕುಮಾಕ್ಷಣಂ || ೪೮ ||

**ಸಣಬಿನ ವಿಷಕ್ಕೆ.**

ಕಂ|| ಸಣಬಿನ ವಿಷಕ್ಕೆ [ಕುಡು ಚೊ |
ಕ್ಕಣಿಕೆಯ ಕೂಡಮೃತಲತೆಯನಲ್ಲದೊಡಂತಾ ||
ಕ್ಷಣದೊಳ್ ಕಿಱುಗೋ(ಳಿ)ಣಿಯುಮಂ |
ಪ್ರಣುತಯಶಂ ಕೊಡುವುದುಪವಿಷಂ [5]ಭೂವಿನುತಾ || ೪೯ ||

**ಇಲಿವಾಲದವಿಷಕ್ಕೆ - ಎಕ್ಕೆಯಹಾಲವಿಷಕ್ಕೆ.**

ಕಂ|| ಇಲಿವಾಲದ ವಿಷಮಂತದು |
ತಿಳಿಗುಂ ದಂತಿಯುಮನಣಿಲೆಯಂ ಕುಡೆ ಮತ್ತಾ ||
ತಿಳಜಸಿತತಕ್ರಪಾನಂ |
ಕಳೆಗುಂ [ರವಿದುಗ್ಧದೋಷಮಂ] ತತ್ಕ್ಷಣದಿಂ || ೫೦ ||

ಎಕ್ಕೆಯ ಪಾಲ್ಗಳ [6]ವಿಷಮಂ |
[7]ದುಕ್ಕಲಿಕುಂ ತೈಲಟಂಕಣಾಂ[8]ಬುಗಳಿಂದಂ ||
ನಿಕ್ಕುವಮೇಂ ಪಾಲೊಳ್ ಕುಡೆ |
[9]ಚಿಕ್ಕನೆ ಗೋಱಿ(ಳಿ)(ಣಿ)ಯುಮನಣಿಲೆಯಂ ಬುಧಮಿತ್ರಾ || ೫೧ ||

ವ|| ಮತ್ತೆ.

ಮ|| ಸ್ರ|| ಎಳನೀರಿಂ ಕ್ಷೀರದಿಂ ಸ್ನಾನಮ [ನೊಡ[10]ರಿಪುದಾ ಸ್ನಾನದಿಂ ಪಾನದಿಂದಂ] |
ತಿಳಿಗುಂ ತಾನರ್ಕದುಗ್ಧಪ್ರಭವಮದಮದಾಗಲ್ ಕರಂ ಕಣ್ಣೊಳಿರ್ದಾ ||
ವಿಳಮಂ ಮಾಡಲ್ಕೆ ಬೇಗಂ ತಿಳಜಮನೆ ವಲಂ ಕೊಂಡು ಪಿಂಡಲ್ಕದಾಗಳ್ |
ಕಳೆಗುಂ ನೇತ್ರವ್ಯಥಾಭೀತಿಯನಿದುಱಿಯೆ ಬೇಱಗ್ಗಳಂ ಮದ್ರ್ಧಮುಂಟೇ || ೫೨ ||

1. ಕುಡೆಸಲ್ಲ. 2. ಬೆರೆದ (ಗ) 3. ಕ್ಕುಮಾ. 4. ಜೀವನ. 5. ಬುಧವಿನುತಾ, ಬುಧಮಿತ್ರಾ || ೫೧ || ಘ. || ೪೮ || 6. ವಿಷಕಂ. 7. ದುಕ್ಕಲಿಮಂ. 8. ಣಾಸ್ವಿತದಿಂದಂ | ನಿಕ್ಕುಮೆಪಾಲೊಳ್ (ಘ) 9. ಚಕ್ಕನೆ ಗೋಣಿಯು (ತ) 10. ರಿಸಲಾ.

### ಕಳ್ಳಿಯಹಾಲ ವಿಷಕ್ಕೆ.

ಉ|| ಆವರಿ ನೆಲ್ಲಿ ಯಷ್ಟಿಮಧುಕಂ [1]ತಿಲವಾಸಡಿ ಕೊಗ್ಗಿ [2] ಗೋಷ್ಪಯಂ |
ತಾವರೆ ನೇಱಿ[3]ಲಂಕವಲೆ ಶರ್ಕರೆ ಪಾಲ್ಮರದಾ ಪ್ರಸೂನಮಿಂ ||
ದೀವರ ಮಿತ್ರಭಕ್ತ ಕಟುಕತ್ರಯಮೆಂಬಿವು ಬೇಱಿವೇಱಿ[3] ತಾಂ |
ಭಾವಿಸೆ ಕಳ್ಳಿಯುರ್ಕನಱಿಗಂತು ವಿಲೇಪನಪಾನದಿಂ ದಿಟಂ || ೫೩ ||

### ಹುಲಿಗಿಲಿ ವಿಷಕ್ಕೆ - ಕಾಗಿದೊಂಡೆ ವಿಷಕ್ಕೆ.

ಕಂ|| ಹುಲಿಗಿ[4]ಲ ವಿಷಕ್ಕೆ ಜಂಬುವಿ |
ನೆಲೆಯುಂ [5]ಮೋಹೋವನರೆದು ಕುಡು ತಕ್ರದೊಳಂ ||
[6]ಜಲದಿಂ ಗಿರಿಕರ್ಣಿಕೆಯುಮ |
ನಲಸದೆ ಕುಡೆ ಪೋಕು ಕಾಗಿತೊಂಡೆಯ ವಿಷಮುಂ || ೫೪ ||

### [7]ಅಂಗುರು ವಿಷಕ್ಕೆ - ನುಗ್ಗೆಯ ವಿಷಕ್ಕೆ.

ಕಂ|| ಕೊಗ್ಗಿಯ ಕಷಾಯ[8]ಮೊಂದುಂ |
ಮುಗ್ಗಿಸುಗುಮದಂ [9]ಗುರುಗ್ರವಿಷಮುಂ ಮತ್ತಂ ||
ನುಗ್ಗೆಯ ಮದಮಂ ಕ್ಷೀರಂ |
[10]ತಗ್ಗಿಸುಗುಮದಮಲಚರಿತನನುಮತದಿಂದಂ || ೫೫ ||

### [11]ಅಶ್ವಗಂಧಿಯ ವಿಷಕ್ಕೆ.

ಕಂ|| ಹಯಗಂಧಿಯ ಸೊರ್ಕ್ಕ ಫಲ |
ತ್ರಯದ ಕಷಾಯಂಗಳಿಂದಮುಱಿಗುಮವಶ್ಯಂ ||
[12]ನಯವಿದನಪ್ಪ ವಿಷಾಗ್ನಿಯ |
ಭಯಮಂ [13]ಪಿಂಗಿಸುವ ಮಂಗನನುಮತದಿಂದಂ || ೫೬

1. ತಿಳಿವಾಸಡಿಕೊನಿ. 2. ತಗ್ಗಿಗೋಱ್ಪ(ರ್ಪ)ಯಂ ಗೊಪ್ಪಯಂ (ಕ. ಖ.) 3. ಲಂಕವರೆ, ನೇರಿಲಂಕವಲೆ. 4. ಲುವಿಷಕಂ ಜಂಮಿಲಿ, (ಕ) 5. ಮೋಹೊತ್ತೇವದರೆದು (ಕ) ಮೋಹೊತ್ತವಟನರೆದು (ಗ) 6. ಜಲಧರಗಿರಿಕರ್ಣಿಯ ನೀನಲಸದೆ, (ಕ) ಜಲಧರ ಗಿರಿಕರ್ಣಿಕೆಯಂ। ಜಲದಿಂದೀಂಟಿಸುಗೆ ಕಾಗಿತೊಂಡೆಗೆ ನಯದಿಂ ‖ ೫೪ ‖ (ಗ), ತೊಂಡೆಗೆ (ಮ)ಯದಿಂ (ಖ.) 7. ಅಶ್ವಗಂಧಿವಿಷಕ್ಕೆ, ನುಗ್ಗಿಯವಿಷಕ್ಕೆ (ಕ. ಖ.) 8. ಮೊಂದೇ (ಕ. ಖ.) ಮೆಂದುಂ (ಗ) 9. ದಂಗುರೋಗ್ರ (ಖ) 10. ತಗ್ಗಿಪುದೊಂದಮಲ ಚರಿತನಮ (ಗ) 11. ಅಶ್ವಗಂಧಿಗೆ, ನುಗ್ಗಿಗೆ? (ಕ. ಖ.) ಹಿರೇಮದ್ದಿನ ವಿಷಕ್ಕೆ (ಗ) 12. ನಯಗುಣ ದಹಿತ (ಗ) 13. ಪಿಂಗಿಸುಗು ಮಂಗರಾಜನ ಮತದಿಂ (ಕ. ಖ.) ಮಂಗರಾಜನೆ ಬಲ್ಲಂ (ಗ) ನಯಗುಣ ರಹಿತವಿಷಾಗ್ನಿಯ....ಪಿಂಗಿಸುಗು ಮಮಲಕರಗುಣ ನಿಲಯಾ (ಖ)



### ದೇವದಾಳಿಯ ವಿಷಕ್ಕೆ.

ಕಂ|| ಸುರದಾಳಿ(ಳಿ)ಯ ಸೊಂರ್ಕಿಂಗಂ |
[1]ದರಿಮೇಥದ ತಿಗುಡನರೆದು ಕುಡುವುದು [2]ಮತ್ತಾ ||
ಸಿರಿಸದ [3]ಕುಸುಮಂಗಳನಂ |
ತರೆದೀವು[4]ದದಂ ಕ್ಷಣಾರ್ಧದಿಂ ಪರಿಹರಿಕುಂ || ೫೭ ||

### ಮುಗ್ಗಾರೆ ವಿಷಕ್ಕೆ - ಚಿಲ್ಲದ ವಿಷಕ್ಕೆ.

ಕಂ|| [5]ಜಾದುಂ ತಕ್ರಂ ಲೋಧ್ರಂ |
*ನೈದಿಲ್ ಮುಗ್ಗಾರೆಗುಪವಿಷಂ [6]ಚಿಲ್ಲಮುದ ||
ಕ್ಕೈದೆ ಘನನಾದಿ ಕಾಂಜಿಕ |
ಮಾದಂ [7]ಕೌತುಕಮೇಂ ತಾನದುಪವಿಷಮುಕ್ಕುಂ || ೫೮ ||

### ಕರ್ಪೂರದ ವಿಷಕ್ಕೆ.

ಕಂ|| [8]ಗೋರೋಚನ ಕುಂಕುಮಮಂ |
ನೀರಿಂ ಶ್ರೀಗಂಧದಿಂದೆ ಕಳೆಗುಂ ಮೋಣ್ ಕ ||
ರ್ಪೂರದ ವಿಷಮಂ ಬೇಗಂ |
[9]ಧಾರಿಣಿಯೊಳ್ ಭೃಂಗರಸಮಿ [10]ದೊಂದತಿಶಯದಿಂ || ೫೯ ||

ಬಿಸಿನೀರೊ[11]ಳಣಿಲೆಯಂ [12]ಕೊಳ್ |
ಬಿಸಜಂ ಮಲಯರುಹ [13]ಶೀತವಾರಿಯುಮಂ ಮೋಣ್ ||
ದೆಸೆಗಿಡಿಕುಂ ಕರ್ಪೂರದೊ |
ಳೆಸೆವ ವಿಷಂಗಳನಶೇಷಗುಣಗಣನಿಳಯಾ || ೬೦ ||

### ಕರ್ಪೂರ ಮಿಶ್ರತೈಲದ ವಿಷಕ್ಕೆ.

ಕಂ|| ಅರೆದು [14]ಕುಡು ಮೋಘರವಮಂ |
ಕರಿದೆನಿಸುವ ಜೀರಕಾನ್ವಿತಂ ವಾರಿಯೊಳಂ ||
ದರಿದೆನಿಸಿದ ಕರ್ಪೂರಂ |
ಬೆರಸಿದ ತೈಲದ ವಿಷಂ[15]ಗಳುಪಶಮಿಸಿರ್ಕುಂ || ೬೧ ||

1. ದಕ್ಕುಫಲತ್ರಯದ ಕಷಾಯಂಗಳಿಂದಮುಳಿಗುಂ, ದರಿಮೇಘದ ತೊವಟ (ಗ) 2. ಮೋಣ್ತಾಂ (ಕ. ಖ.) 3. ಕುಸುಮಂಗಳಂ ಪಿಂದರೆದೀ (ಕ) ತಂದಿರದೀವುದು (ಖ). 4. ದುತತ್ ಕ್ಷಣಾರ್ಧದಿಂ. 5. ಚಾದಂ (ಕ) ಜಾಡುಂ (ಖ)....ಲೋಧ್ರಂ (ಗ) 6. ಮಲ್ಲಮಿದ....ಮಾಂದಂ (ಕ) (ಘ) ನಾಡಿತಾಂತಜೀ, (ಖ) ಕಾಂಕಜ ಮಂದಂ. 7. ಕೈತಕಮೆತಾಗ(ನ)ದು, ಕೈತಕಮೆಂತಾಗದು (ಕ. ಖ.) ಕೈತಕಮೆತಾನೆಯುಪವಿಷ (ಗ) 8. ....ರೋಚನ (ಕ) ಶ್ರೀಗಂಧಮೊಂದೆ ಕುಡೆಕಳೆಗುಂ ಮೋಣ್, ಕಳೆಗುಂ ಕರ್ಪೂರ ?....ಮಂತಿಳೆಯಲ್ ಥಾವಿಣಿ (ಖ) 9. ದಾರುಣ....ಭೃಂಗರಸಮೆಮೊಂದತಿ (ಗ) 10. ಮಿದೊಂದಚ್ಚರಿಯೇ (ಖ) 11. ಳಣಿಲೆಯಂ. 12. ಕೊಡು (ಗ) 13. ತದಾರ್ಯಮಂ ಮೋಣ್....ವಿಷಮುವಿಷಂಗಳನಶೇಷ (ಗ) 14. ಕುಡಿ, ಕುಡೆ. 15. ಗಳಂಪರಿಹರಿಕುಂ (ಘ)

* ಈ ಪ್ರಾಸಿನಲ್ಲಿ ಹೊಸಗನ್ನಡರೂಪಗಳಿವೆ ಜಾದುಂ ತ - (ನೆಯ್ದಿಲ್) ನೈದಿಲ್ - (ಕೆಯ್ದೆ) ಕೈದೆ - ಮಾದಂ, (ಕ. ಗ.)

ಕಂ|| [1]ಇದ್ದಿಲುಮಂ [2]ನೀರಿಂದಂ |
ಮರ್ದಿಸಿ ಕುಡಿಸಲ್ಕೆ ಕಪ್ಪುರಂ ತಿಲತೈಲಂ ||
ಪೊರ್ದಿದ ವಿಷಮಂ ಕಳೆಗುಂ |
ಸಿದ್ಧಾಂತಂ ಮಂಗರಾಜ [3]ಮತಮಿದು ವಿನುತಂ || ೬೨ ||

**ಕರ್ಪೂರ ಮಿಶ್ರಬೆಲ್ಲದ ವಿಷಕ್ಕೆ.**

ಕಂ|| [4]ಕರ್ಪೂರಂ ಗುಡವೆರಸಿದೊ |
ಡಪ್ಪುದು ವಿಷಮಾ[5]ವಿಷಕ್ಕೆ ವಮನಂ ಬಜೆ ನೀ ||
ರುಪ್ಪುಂ ಪ್ರತಿವಿಷಮಕ್ಕುಂ |
ತಪ್ಪುಗುಮೇ ಮಂಗ[6]ಭೂಪನಿಷ್ಟೋಕ್ತಿ ವಲಂ || ೬೩ ||

**ಕಪ್ಪುರ ಹುಳಿಯ ವಿಷಕ್ಕೆ.**

ಕಂ|| ಕಪ್ಪುರದೊಳ್ ಪುಳಿ[7]ವೆರಸಿದೊ |
ಡಪ್ಪುದು ವಿಷಮಂತದರ್ಕೆ ಪಾಲ್ಮರದ ರಸಂ ||
[8]ತಪ್ಪದುಪವಿಷಮದಕ್ಕುಂ |
[9]ತಪ್ಪದು ಮೇಣ್ ಭೃಂಗರಸ [10]ಮದತಿಹಿತವಚನಾ || ೬೪ ||

**ಪಾದರಸದ ವಿಷಕ್ಕೆ.**

ಕಂ|| ಕಿಱುನೆಲ್ಲಿಯಗಸೆ ಮಳಯಜ |
ಮಱಿ ಕುಂಕುಮಮಾ ತ್ರಿಶೂಲಿ ತಾಂಬೂಲದಲಂ ||
ನೆಱಿ[3] ಸಹದೇವಿಗಳೆಂಬಿವು |
[11]ಪಱಿಗುಮಿವೊ(ದೊ)ಂದೊಂದೆ ಬಗೆಯೆ ಸೂತದ ವಿಷಮಂ || ೬೫ ||

**ಗಂಧಕವಿಷಕ್ಕೆ - ಬಿಳಿಂಗಾರದ ವಿಷಕ್ಕೆ.**

ಕಂ|| ಶ್ರೀಗಂಧಂ [12]ಸಬ್ಬಸಿಗೆಯು|
ಮಾಗಂಧಕದುರ್ಕನಿಱಿಸುಗುಂ [13]ಟಂಕಣಕಂ ||
ದಾಗಳೆ ಸೈಂಧವಗುಡದೊಳ್ |
ಬೇಗಂ ರಾಮಠಮನಿಕ್ಕಿ [14]ಕುಡಲದನಿಱಿಗುಂ || ೬೬ ||

---

1. ಇದ್ದ(ದ್ದಿ)ಲುಮಂ (ಗ) 2. ನಿರವಿಂದಂ (ಕ. ಖ.) 3. ನನುಮತದಿಂದಂ, ಮತವಿದು ನಿರುತಂ. 4. ಕರ್ಪೂರಂ ಗುಡಜರ (ಕ. ಖ.) 5. ಮಂತದರ್ಕೆ. 6. ವಿಭುವಿನಿಷ್ಟೋಕ್ತಿವಲಂ, ರಾಜನಿಷ್ಟೋಕ್ತಿ ಗಳುಂ. 7. ಕೂಡಿದೊಡೆ (ಕ. ಖ.) 8. ತಪ್ಪದದುವಿಷಮದೇಳೆಯೊಳಪ್ಪುದು, ವಿಷಮೆಯ್ದು ಮದಿಳೆದದು ವಿಷವಿಧಿಯೊಳೆನಿಪ್ಪುದು. 9. ತಪ್ಪುಗು(ಗೆ)ಮೇಣ್ (ಕ. ಖ.) 10. ಮುಮತಿ. 11. ಪರಿಗುಮಿ....ಸೂತಜ. 12. ಸಬಸೀಗೆ. 13. ಟಂಕವಿಷಕ್ಕಾ, ಟಂಕಣವಿಷಕಾ (ಕ. ಖ.) ಟಂಕಣದವಿಷಕ್ಕಾ (ಗ) 14. ಕುಡು ಗದ



**ಕರ್ಪೂರ ಶಿಲಾಧಾ(ಜಿ)ತುವಿನ ವಿಷಕ್ಕೆ.**

ಕಂ|| [1]ಸ್ವಾಧೀನಮದೊಂದೆ ಶರೀ |
ರಾಧಿಷ್ಠಿತಮಪ್ಪ [2]ಸಮದಮಂ ಕರ್ಪೂರಶಿ ||
ಲಾಧಾತುವಿನ ವಿಷಕ್ಕಂ |
ಸಾಧಿತ [3]ಮಾಗಿರ್ದ [4]ನೀಲಿಯೊಂದೆ ಸಮರ್ಥಂ || ೬೭ ||

**ಕಂಕುಷ್ಠ ವಿಷಕ್ಕೆ - ಅಭ್ರಕ ವಿಷಕ್ಕೆ.**

ಕಂ|| ಸಾಲದೆ [5]ಕಂಕುಷ್ಠಕ್ಕಂ |
[6]ಬೇಲದ ಮೂಲಂ ತದಭ್ರಕ[7]*ಕ್ಕಾಸಡಿಯೊಳ್ ||
[8]ಮೂಲರಸಂ ಕುಸುಬೆಯರಸ |
[9]ಮಾಲೋಕಿಸಲುಪವಿಷಂ ಮನೋಹರಚರಿತಾ || ೬೮ ||

**(ಅಭ್ರಕ ವಿಷಕ್ಕೆ) - †ಸೂಜಿಕಲ್ಲ ವಿಷಕ್ಕೆ.**

ಕಂ|| ಬಿಸಿನೀ[10]ರೊಳ್ ಕಡೆದಳೆಯಿಂ |
ದೆ ಸಮನ್ವಿತ[11]ಮಾದ ನೆಲ್ಲಿಯುಪವಿಷಮಕ್ಕುಂ ||
[12]ಅಸಿತದಯಃಕಾನ್ತದ ಮದಮಂ |
ದೆಸೆಗಿಡಿಸುಗುಮೆಂದೊಡಿಲ್ಲಿ ಸಂದೆಯಮುಂಟೇ || ೬೯ ||

**ಬಜೆಯ ವಿಷಕ್ಕೆ.**

ಕಂ|| ಬಾಳಮದಕ್ಕುಂ ಬಜೆಗಂ |
[13]ತೇಳಿಸದಿರದರೆದು (ಕೂಡೆ) ತಂಡುಲಜಲದಿಂ ||
ದೇಲಕ್ಕಿಯನರೆದೀವು[14]ದು |
ಮೇಳಿಸದಂತದಱ ವಿಷ[15]ಮನಂತದೆ ಕಳೆಗುಂ || ೭೦ ||

---

1. ಸ್ವಾದಿನಮೊಂದೆಯೆ ಸರಿದಾದಿಷ್ಠಿತಪ್ಪ. 2. ಸಮೇದಮಂ. 3. ಧಿಷ್ಠಿತಮುಪ್ಪುದೆನಿಸುವಾಕ, ಮಾಗಿರಿದೊಂದೆ ತಿಳಿಯೆಸಮರ್ಥಂ. 4. ನೀಲಿಯಾಲುದೊಂದೆ; ನಿಲಿನೊಂದೆ (ಗ) 5. ಕಂಕೋಷ್ಠಂಕಂ (ಕ. ಖ.) 6. ಜಲದಮೂಲಮೆ, ಕುಚೇಲದ (ಖ) 7. ಕ್ಕಾಷಧಿಯೊಳ್ (ಕ. ಖ.) 8. ಕೂಲರಸಂ (ಕ. ಖ.) 9. ಮಾಲೊಕ್ಕಿಸಲು (ಖ) 10. ರಿಂಕುಡುಗಳೆಯಿಂ, ಕುಡಲಳೆಯಿಂ. 11. ಮಾತನೆಲ್ಲಿ, ಮಾತನಿಲ್ಲಿ. 12. ದಸಿತದಕಾದ ಮಧುಮಂ, ತಸಿತದಲಂತದವಿಷಮಂ, ದಸಿತದ ತೌಡಮುದಮಂ (ಘ), ಭಸಿತದಯಃಕಾಂತ (ಕ. ಖ.) (ಗ) ದಲ್ಲಿ ಈ ಕಂದ ಗಳಿತವಾಗಿದೆ. 13. ತೇಳಿಪದಿರದಂದು....ಜಲದಿಂದಮು || ಮೊಲಕ್ಷಿಯನರೆ, ಬಾಳ....ಬಜೆಗಂದಿರದಲ್ಲದಂ ತಂಡುಲ (ಗ) ದೇಳಿಸದಿರದಲ್ಲಿದಂದು 14. ದದೇಳಿಸದಂತದಱ ವಿಷಮನಾಕ್ಷಣಮಱಗುಂ (ಕ. ಖ.) 15. ವಿಷಮುದಾಕ್ಷಣಮಱಗುಂ.

* ಮಾಸಡಿಯೊ....ಲರಸಂ ಕುಸುಬೆಯುರಸಮಾಲೋಕಿಸಮೆಂದೊಡಿಲ್ಲ ಸಂದಯಮುಂಟೆ(ಗ) (ಈ ಪಾಠದಲ್ಲಿ ಗ್ರಂಥಪಾತವಾಗಿ ಎರಡುಕಂದಗಳು ಒಟ್ಟಿಗೆಸೇರಿದಂತೆ ತೋರುವುದು.) † ಕಾಂತವಿಷಕ್ಕೆ (ತ,)

**ಮೆಣಸು, ಇಂಗು, ತ್ರಿಕಟುಕಗಳ ವಿಷಂಗಳ್ಗೆ.**

ಕಂ|| ಮೆಣಸಿಂದುದಯಿಸಿದ ಮದಂ |
ಮಣಿಗುಂ ನೆಲ್ಲಿಯನೆ ಮೆ(ಲ್ಲೆ)ಲುಗೆ ಶಾಲ್ಮಲಿಯುದಕಂ ||
ಪ್ರಣಿಸೆಯ [1]ರಸಮಿಂಗಿಂಗಂ |
ಭಣಿತಸುಗಂಧಿಯೆ [2]ಕಟುತ್ರಯಕ್ಕುಪಗರಳಂ || ೭೧ ||

**[3]ಸಬುಕಾರದ ವಿಷಕ್ಕೆ.**

ಕಂ|| ಕ್ಷಾರತ್ರಯ ಕಟುಕತ್ರಯ |
ಮಾರಯ್ಯಲ್ ಕಿಡಿಸುಗುಂ [4]ಮರುದ್ವಹ್ನಿಗಳಂ ||
ತೋರಂ[5]ತಿರುರಿಪುಗುಂ ಸಬು |
ಕಾರದ ಮದಮೆಂಬವನಮನಿದು ಕೇವಳಮೇ || ೭೨ ||

ಭಸಿತದೊಡನಾಲಿಕಲ್ಲೀ |
ಕ್ಷಿಸೆ ಗೋಕ್ಷೀರಪ್ರಯುಕ್ತವಹ ತೆಂಗಿನ ಸು[6] ||
ಪ್ರಸವಸಮೇತಂ ಶರ್ಕರೆ |
ವಸುಧೆಯ ಸಬುಕಾರದುದಿತಮದ [7]ಮುಪಶಮಿಕುಂ || ೭೩ ||

**ಸಾಸಿವೆ(ಗೆ)ಯ ವಿಷಕ್ಕೆ.**

ಕಂ|| [8]ತಿಲಮಾಷಟಂಕಣಾವನಿ |
ಫಲಮಿರದೊಂದೊಂದೆ ಕಿಡಿಸುಗುಂ ಸರ್ಷಪದೊಳ್ ||
ನೆಲಸಿದ ಮದಮಂ [9]ಮೇಣಂ |
ಬಿಲವೊಂದೇ ಕಿಡಿಸುಗುಂ ಜಗಜ್ಜನಮಹಿತಾ || ೭೪ ||

**ಸಾಸಿವೆ ಎಣ್ಣೆಗೆ - ಈರುಳ್ಳಿಬೆಳ್ಳುಳ್ಳಿ ವಿಷಂಗಳ್ಗೆ.**

ಕಂ|| ಅಂಬುವಿಮಿಶ್ರಪುನರ್ನವಿ |
ಯೆಂಬುದು ಸಾಸಿವೆಯ ತೈಲಮದ[10]ವದನಲಿಗುಂ ||
" ಕಿಂ ಬಹುನಾ " ಲಶುನಯುಗ |
ಕ್ಕಂಬುವಿನೊಳ್ ಬೆರಸಿದ [11]ವರೆಯುಪವಿಷಮಕ್ಕುಂ || ೭೫ ||

---

1. ರಸಮಿನ್ನನಿಗಂ (ಕ) ರಸಮಿಂಗಿಂದಂ (ಖ) ಮಿನ್ನಿಂಗಂ 2. ಕಟುಕತ್ರಯಲ್ಕಿಡಿಸುಗುಂ, ಗಂಧಿಯಮರಧ್ವಂಸಿಗಳಕ್ಕುಮುಪಗ (ರ)ಳಂ (ಖ) 3. ಕ್ಷಾರತ್ರಯ, ಕಟುಕತ್ರಯ, ಸಬುಕಾರವಿಷಕ್ಕೆ (ಖ) 4. ಮರುಧ್ವಂಸಿಗಳಂ; ಮಹದ್ವಹ್ನಿ. 5. ತಿರಿರಿಪುಗಳ್, ತೆಲುರಿಪುಗುಂ (ಖ) ರಂತೆ ತಿರುಗುಗುಂ (ಕ) 6. ಸಪ್ರಸವಸಹಿತಂ (ಖ) 7. ಮುಪಶಮಮಂ, ಮದದುಪಶಮನಂ (ಗ) 8. ತಿಲಮಾಸವುಂ ಕಣಾವನಿಗಳೊಳೆಂತೋರೊಂದೆ....ನಷಪದೊಳ್ ಕೆಲಸಿದ ಮದಂಗಳುಮನಂ (ಖ) ತಿಲಮಾಷಟಂಕ ಧಾತ್ರೀಫಲ (ಕ) ವಣಿಗಳುಮಿತ್ತೊಪೊಂದೆ (ಘ) 9. ಮೇಲಂಬರಮದವೊಂದೆಕಿಡಿಸುಗುಂ (ಗ) 10. ಮದವಿದನಲಮಿಂ....ಕ್ಕಂಬಿನೊಳಂ (ಖ) ದಲನಮಿಂಕಿಂ,(ಘ) ಮದಮದಲಪತಿಂ. 11. ದವರೆಗುಪ.



**ಜೀರಗೆ, ಮೆಂಥೆಯ, ಓವದ ವಿಷಂಗಳ್ಗೆ.**

ಕಂ|| [1]ಬೇವಿನೆಲೆ ಬಿಳಿಯಗಣ[2]ಜಿಲು |
ಮಾವಿನ ಪಾಲಿಂದಪುರೆದು ಶರ್ಕರೆಸಹಿತಂ ||
ಸೇವಿಸೆ ಜೀರಗೆ ಮೆಂಥೆಯ |
ದೋವದ ವಿಷಹರಮದಕ್ಕುಮಹಿಮದಗರುಡಾ || ೭೬ ||

**ಸಬ್ಬಸೀಗೆ, ಏಲಕ್ಕಿ, ಕೊತ್ತುಂಬರಿ ವಿಷಕ್ಕೆ.**

ಕಂ|| ಗುಡ ರಾಮಠ ಘೃತಮಿನಿತಂ |
ಕೊಡುವುದು ಸವನಿಪ್ಪ ಸಬ್ಬಸೀಗೆಯ [3]ಮದಕಂ ||
ಕುಡುಗೇಲಕ್ಕಿಗೆ ಸಿ(ಶಿ)ತಮಂ |
ಕುಡು ಕೊತ್ತುಂಬರಿಗೆ ತ್ರಿಫಳೆಯಂ ಕ್ಷಾರಮುಮಂ || ೭೭ ||

***ಉಳ್ಳಿ, ಹಿಪ್ಪಲಿ ವಿಷಂಗಳ್ಗೆ.**

ಕಂ|| [4]ನಿತ್ತರಿಸಲೀಯ[5]ದುಳ್ಳಿಯ |
ಮತ್ತತೆಯಂ ರುಚಿ ಹರೀತಕಿಗಳಿಂ ಬಗೆಯಲ್ ||
ಪತ್ತಿಯ ರಸ ಸಕ್ಕರೆಗಳ್ |
ಮತ್ತಾ ಪಿಪ್ಪಲಿಗೆ ಮಧುಸಿತಂ ಪ್ರತಿಗರಳಂ || ೭೮ ||

**[6]ಉಪ್ಪಿನ ವಿಷಕ್ಕೆ.**

ಕಂ|| [7]ತುಳಸೀರಸ ಧಾತ್ರೀಫಳ |
ವಿಳಸತ್ಕೇತಕಿಯ [8]ಮೊಲ್ಲೆರಸವೋ[9]ರೊಂದೇ ||
ಕಳೆಗುಂ ಲವಣದ ವಿಷಮಾ |
ಗಳೆ ಖರ್ಜೂರಕ್ಕೆ ಪದ್ಮಕೇಸರ [10]ತತಿಯಿಂ || ೭೯ ||

**ಮಾವಿನಹಣ್ಣು ವಿಷಕ್ಕೆ.**

ಕಂ|| ಕ್ಷೀರಂ ಮೇಣ್ ವಾರಿ ಯವ |
ಕ್ಷಾರಂ ಮೇಣ್ [11]ನಾಳಿಕೇರರಸಮುಂ ತತ್ಸಹ ||
ಕಾರದ ಮದಮಂ ಕಳೆಗುಂ |
ಧಾರಿಣಿಯೊಳ್ ಕವಿಜನೈಕಮಿತ್ರನ ಮತದಿಂ || ೮೦ ||

---

1. ಜೀವಿನೆಲೆ (ಖ) 2. ಗಣಜಿಳಮಾವಿನ (ಖ) 3. ಮಧುಕಂ (ಕ) 4. ವಿಸ್ತರಿಸಲೀಯದು (ಗ) 5. ಯದುಳಿದೆಯ (ಘ). 6. ಉಪ್ಪು ಖರ್ಜೂರ ಪದ್ಮಕೇಸರಕ್ಕೆ (ಖ) 7. ತೊಳಸಿಪತ್ರಧಾತ್ರಿಫಳ ವಿಳಸತ್ಕೇತಕಿಯ ರಸಮೊಂದರ್ಕೆ....ಖರ್ಜೂರಕ್ಕೆ ಪದ್ಮಕೇಸರತತಿಯುಂ, (ಕ. ಖ.) ತುಳಸಿರಸಧಾತ್ರಿಫಳಫಳತ್ಕೇತಕಿ. 8. ಮೊಲ್ಲೆಯರಸ ವೋರೊಂದಕ್ಕೆ (ಗ) 9. ಮೋರೊಂದಕ್ಕಲಿಗುಂ. 10. ತತಿಗಂ. 11. ನಾರಿಕೇಸರ (ಘ)

* ಟೀಕಾಪ್ರತಿಯಲ್ಲಿ ಉಳ್ಳಿಯ ಎಂಬ ಪಾಠವಿಲ್ಲ. ಅಲ್ಲಿಯ ಪಾಠದಲ್ಲಿ " ಅಣಿಲೆಕಾಯಿ, ಕೋಷ್ಠ ಹಿಪ್ಪಲಿ ಇವುಗಳ ವಿಷಕ್ಕೆ " ಎಂದಿರಬೇಕು.

## ನೇಱಿಲೊಡಗೂಡಿದ ಹಾಲವಿಷಕ್ಕೆ.

ಕಂ|| ಪಾಲುಂ ನೇಱಿಲ ಪಣ್ಗಳ |
ನಾಲೋಚಿಸದಧಿಕಮಾಗಿ ಕೊಂಡತಿವಿಷಮಂ ||
[1]ಚಾೞಿಸುಗುಂ ನೆಲ್ಲಿಯ ಕಾಯ್ |
ಕಾಲೋಚಿತಮಲ್ಲದಿರೆ ಪೆಸರ್ಗಳ ಕಟ್ಟುಂ || ೮೧ ||

ಮಧುಕದ ಕಷಾಯ[2]ತೋಯಂ |
ಸುಧಾಸಮಂ ಜಂಬುಪಾಲ್ಗಳೊಂದಿದ ಮದಮಂ ||
ವಿಧಿಯಿಂ ಕೊಂಡೊ[3]ಡದಕ್ಕುಂ |
ವಿಧುಂತುದಂ ವಿಧುಗೆ ಶತ್ರು[4]ವೆಂತಂತೆ ವಲಂ || ೮೨ ||

## ನೇಱಿಲಹಣ್ಣಿನ ವಿಷಕ್ಕೆ.

ಕಂ|| ಟಂಕಣಸೈಂಧವ ತಕ್ರದೊ |
ಳಂ ಕಿಡುಗುಂ *ಜಂಬುವಿಂದೆ ಜನಿಸಿದ [5]ಮದಮುಂ ||
ಸಂಕಿಸದಿರಣಿಲೆ ಮರಿಚಮು |
ಮಂ ಕೂಡಿ[6]ಕೊಳಲ್ಕೆ ತದ್ವಿಷಾಪಹಮಕ್ಕುಂ || ೮೩ ||

## ಹಲಸಿನಹಣ್ಣಿನ ವಿಷಕ್ಕೆ.

ಹಲಸಿನಹಣ್ಣಿನ ವಿಷಮಂ |
ತಿಲಜಂ ಮೇಣುಪ್ಪಿ[7]ನೆಸಱ ಮಾವಿನಕಾಯುಂ ||
ಘಲಿಱಲನೆ ಸುಂಠಿಯೊಳಳೆಯುಂ |
ವಿಳಸಜ್ಜಾಯಿಫಳ ಹಿಂಗು ತಕ್ರಂ ಕಳೆಗುಂ || ೮೪ ||

## ಬಾೞೆಯ ಹಣ್ಣಿನ ವಿಷಕ್ಕೆ.

ಕಡಸಿಗೆ [8]ಯೆಸಱಿಂ ಮೆಣಸಂ |
ಕುಡುವುದು ಮೇಣ್ ತಕ್ರನಾಗರಂಗಳನೊಲವಿಂ ||
ಕುಡುವುದು ಬಾೞೆಯ ಹಣ್ಣಿಂ |
ತೊಡರ್ದ ವಿಷಂ ಕಿಡುಗುಮಲ್ತೆ ಮರಿಚ[9]ದೊಳೆ ವಲಂ || ೮೫ ||

## [10]ತೆಂಗಿನಕಾಯ ವಿಷಕ್ಕೆ.

ನೆಲ್ಲಕ್ಕಿಯುಮಂ [11]ಮೆಲುವುದು |
ಪು(ಲ್ಲುಂ)ಳ್ಳುಂಬುಣಿಸೆಯ ಸುಬೀಜಮಂ ಮೇಣ್ ಮತ್ತಂ ||
ತಲ್ಲದೆ [12]ಕಳವಲಬಿತ್ತಂ |
ನಿಲ್ಲವು ತಾ[ವಿಳಿಯ] ನಾಳಿಕೇರವಿಷಂಗಳ್ || ೮೬ ||

1. ಚಾಲಿಸುಗುಂ, ಥಾಳಿಸುಗುಂ (ಖ. ಗ.) 2. ಮಧುಕಕಷಾಯದ (ಕ), ತೋಯದೆನುದಾನಮಂ 3. ಡವಕ್ಕಂ. 4. ವೆಂತಂತೆವೊಲಂ (ಗ) 5. ವಿಷಮುಂ (ಗ) 6. ಕೊಡಲ್ಕೆ (ಗ) 7. ನೊಸಗ (ಕ) 8. ಯರಸಂ (ಕ) 9. ದೊಳೆಲ್ಲಂ (ಗ) 10. ನಾರಿಕೇಳಕ್ಕೆ (ಕ) 11. ಮೇಲುದು (ಕ) ಮೆಲ್ವುದು, 12. ಕಶವಲಬತ್ತಂ (ಕ. ಗ.) * ಜಂಬುವಿಂದಂ ನೇರಿಲ ಪಣ್ಣಿನ ವಿಷಹರಂ. (ತ)



ಕಂ|| ಪಿಂಗದೆ ಕಡಲೆಯ ಹುಳಿ (ಮ)ಧು |
ರಂಗಿಯ[1]ಬಿತ್ತಕ್ಕಿಗರ್ಚಿನೀವುದು ಸಿತದಿಂ ||
[2]ತೆಂಗಿಂಗಾ ಕ್ಷೀರವಿಷ |
ಕ್ಕಂ ಗಣಜಿಲೆ ವಜ್ರಿಯೆಸೆವ ಪಾಲಂ ಸಿತದಿಂ || ೮೭ ||

## [3]ಕಬ್ಬಿನ ರಸದ ವಿಷಕ್ಕೆ.

ಕಂ|| ಕಡಸಿಗೆಯ ಬೇರನೊಂದಂ |
ಕುಡಿಸುವು*ದಂ ತಲ್ಲ[4]ದಂದು ತಾಂ ವಾರಿಯನೇ ||
ಕುಡಿಸಲ್ ಕರ್ವಿನ ಗರಳಂ |
ಕಿಡುಗುಂ ಸಾಹಿತ್ಯವೈದ್ಯವಿದ್ಯಾಂಬುನಿಧೀ || ೮೮ ||

## ನಾರಂಗ, ಹೇರಿೞೆ ಕಿತ್ತೀೞೆಗಳ ವಿಷಕ್ಕೆ.

ಕಂ|| ನಾರಂಗಕ್ಕೊಪ್ಪುವ ಬೆಳು |
ಗಾರಂ [5]ಹೇರಿೞೆಗಮಣಿಲೆಯುಂ ಮೇಣ್ ಸದ್ಯಃ ||
ಕ್ಷಾರಂ ಕಿತ್ತೀೞೆಗೆ ತಾ |
ನೋರಂ[6]ತುಪವಿಷಮದಾ ತವಕ್ಷೀರಾಖ್ಯಂ || ೮೯ ||

## [7]ದಾಳಿಂಬದ ವಿಷಕ್ಕೆ.

ಕಂ|| [8]ನಾಗರಮಂ ದಧಿಯೊಳ್ವೆರ |
ಸಾಗಳೆ ಕುಡಲದು ಗುಣಪ್ರದಂ ದಾಡಿಮಸಂ ||
ಯೋಗದ [9]ಮದಮಂ ಕಳೆಗುಂ |
ಸಾಗರಗಂಭೀರ [10]ನೆನಿಪ ಮಂಗನ ಮತದಿಂ || ೯೦ ||

## ನಿಂಬೆ ಮಾದಲಂಗಳ ವಿಷಕ್ಕೆ.

ಕಂ|| ನಿಂಬೆಗೆ ಮತ್ತಿಯ ತಿಗುಡಂ |
ತಿಂಬುದು ಮೇಣ್ ಮಧುವನಾದೊಡಂ ಪ್ರತಿವಿಷಮ ||
ಕ್ಕಿಂಬಿನ ಪುಣಿಸೆಯ ತ್ವಕ್ಕದೊ |
[11]ಡಂಬಡದೊಡೆ ಮಾದಲಕ್ಕೆ ಮಗ್ಗಾರೆ ದಿಟಂ || ೯೧ ||

1. ಬಿತ್ತಕ್ಕೆಗಚ್ಚಿ (ಗ) 2. ತೆಂಗಿನಫಲ ದುಗ್ಧಕ್ಷೀರವಿಷಕ್ಕಂ (ಗ) ತೆಂಗಿನಫಲ ದುಗ್ಧವಿಷಕ್ಕಂ (ಫ) 3. ಕಬ್ಬಿನವಿಷಕ್ಕೆ, ಕಬ್ಬಿಂಗೆ. 4. ದಂದುವಾರಿಯನೆವಲಂ (ಕ) ವಾರ್ಯನೆಮುಂ (ಗ, ತ) 5. ಹೇರೀೞಿ ಗಮಣಿಲೆಯೆಮೇಣ್ (ಕ) 6. ತಂದಾತವಕ್ಷೀರಾಜ್ಯಂ ವಿಷಮಂ (ಗ) 7. ನಿಂಬೆಮಾದಲಕ್ಕೆ? 8. ನಾಗರಮಂಬೆರಸಾ ದಧಿಯೊಳಾಗಳೆಕೊಡಲದು (ಗ) 9. ವಿಷಮಂ (ತ) 10. ನಪ್ಪ (ಕ) 11. ಬಡವದನೊಡಲವಕ್ಕೆ (ಕ) ಬಡದೊಡದಕ್ಕಂ ಮಗ್ಗಾರೆಯಿಂದೆದಿಟಂ (ಗ, ತ)

* ಸಲಿಯ....ಎಂಬ ೪೨-ನೆಯ ಪದ್ಯದಿಂದ ಇಲ್ಲಿಯವರೆಗೆ ಮೂಡಬಿದ್ರೆ (ತ) ಪ್ರತಿಯಲ್ಲಿ ಓಲೆಗಳು (19-25) ಗಳಿತವಾಗಿವೆ.

### ಮಾದಲ, ಬಾಱೆಹಣ್ಣಿನ ವಿಷಕ್ಕೆ.

ಕಂ|| ವಿಲಸಿತಸೈಂಧವಮದು ಮಾ |
ದಲದ [1]ವಿಷಾಪಹಮೆನಿಕ್ಕುಮಿಳಿಯೊಳ್ ರಂಭಾ ||
ಫಲದ ಮದಂ[2]ತಾನಭಯದೊ |
ಳಱಿಗುಂ [3]ಮುಂಜಿಂಗೆ ನಳಿನ ಮುಱಿವಂತೆ ವಲಂ || ೯೨ ||

### ಬೇವಿ(ನ ವಿಷಕ್ಕೆ)ಗೆ.

ಕಂ|| ಅರವಿಂದದಳಂ ಸಿತಮಾ |
[4]ವರಿಕೆಯ ಪೊಸಸೊಪ್ಪು ಸಮ(ನ)ಮದಾಗಲ್ಕಂತಾ ||
ನರೆದುಂ ಪಾಲಿಂ ಸೇವಿಸೆ |
ಪರೆಗುಂ ಬೇವಿನವಿಷಂ [5]ವಿದಗ್ಧಾಭರಣಾ || ೯೩ ||

### ಸುಣ್ಣ, ನೆಲ್ಲಿ, *ಚಿತ್ರಮೂಲ ವಿಷಕ್ಕೆ.

ಕಂ|| [6]ನೀರಸ ಸುಣ್ಣಕೆ ಕೆಮ್ಮ |
ಣ್ಣೋರಂತಿರೆ ನೆಲ್ಲಿಗಂತೆ ತಾಱೆಯ ಕಾಯಂ ||
ಧಾರಿಣಿಯೊ[7]ಳೇಲೆ ಶಿಖಿಮುಖ |
ಕಾರಯ್ಯಲ್ [8]ತಕ್ರಯುತಮದುಪವಿಷಮಕ್ಕುಂ || ೯೪ ||

### [9]ಅಣಿಲೆಯ ವಿಷಕ್ಕೆ.

ಕಂ|| ಏಲಕ್ಕಿ ಕಟ್ಟುವೊಸರೊಳ್ |
ಸಾಲದೆ [10]ಕಳಲಾಗಿ ಕುಡಿಸಲಣಿಲೆಯ ವಿಷಮಂ ||
ಸೋಲಿಸುಗುಂ ಕಣ[11]ಕಾಂಜಿತ |
[12]ಮೇಲಪಿತಮುದರ್ಕೆ ಬೇಱೆ ಮದ್ದುಗಳೊಳವೇ || ೯೫ ||

### [13]ಬಾಗೆ, ಹೊನ್ನೆನೀಲಿ(ಗಳ ವಿಷಕ್ಕೆ)ಗೆ.

ಕಂ|| ಅಣಿಲೆ ಬೆಳುವಾಲ [14]ಕುಪವಿಷ |
ಮೆಣಿಸಲದೇಂ ಹೊನ್ನೆಗಭ್ರನಾದಿಯೆ ಮತ್ತೇಂ ||
ಭಣಿತಂ ನೀಲಿಗೆ ಕುಡುಗಾ |
ಕ್ಷಣದಿಂದಮೃತೋಪಮಾನಮೆಂಬುದು [15]ಪುಸಿಯೇ || ೯೬ ||

---

1. ವಿಷಾಪಹಮಕ್ಕುಂ. 2. ತಾನಭಯವೊಳಳಿಗುಂ (ಕ) 3. ಮಜ್ಜಿಗೆಯೊಳಿವಳಿಮಂತೆವಲಂ (ತ) 4. ವರೆಯೊಳೆಯ ಸೊಪ್ಪುಪಮನಾಗಲ್ಕರದುಂ (ಕ) ಮಾವರೆ ಎಡೆಳೆಯುಸೊಪ್ಪುಂ (ಘ) 5. ವಿದ.... ಭರಣಾ. 6. ನೀರಸವೀಸುಂಣ (ಕ) ನೀರಶಕೆಂಸುಣ್ಣ (ಖ) ನೀರುಸವಿಸುಣ್ಣ (ಗ) ನೀರಸವಿಸುಣ್ಣ (ಘ; ತ) 7. ಳಿಲ್ಲ (ಖ) 8. ತಕ್ರಮಂತಮುದು(ಘು)ಪವಿಷ (ಗ, ತ) 9. ಅಗಳಿಕಾಯಿಗೆ (ಕ), ಅಣಿಲೆಗೆ (ತ) 10. ಕಳಲುನಿ (ಕ) 11. ಕಾಂಜೀರಕ (ಗ) 12. ಮೇಲಾಪಿತಮದಕೆಲೆ (ಘ) 13. ಬಿಳಿಯಾಲ. ಹೊನ್ನೆ ನೀಲಿ ಯಿವಱಿಂದುಂಟಾದ ವಿಷಕ್ಕೆ (ಖ) 14. ವಾಲಮುಪವಿಷ (ಕ) 15. ಪುಸಿವೇ (ಗ)

* ಒಂದು ಟೀಕೆಯಲ್ಲಿ ಚಿತ್ರಮೂಲದವಿಷಕ್ಕೆ ಎನ್ನುವುದಕ್ಕೆ ಪ್ರತಿಯಾಗಿ ಗೇರವಿಷಕ್ಕೆ ಎಂದಿದೆ. ಇದೇ ಯುಕ್ತವೆಂದು ತೋರುವುದು.



### ಕಡಸಿಗೆ, ಬೇಳ(ಲ ವಿಷಕ್ಕೆ)ಲಿಗೆ.

ಕಂ|| ಕುಡುವುದು ಶುಂಠಿಯುಮಂ ಮೇಣ್ |
[1]ತಡೆಯದೆ [2]ಶಿವೆಯೊಂದನೀವುದುಷ್ಣೋದಕದಿಂ ||
ಕಡಸಿಗೆಯ ಸೊಕ್ಕನಱಿಗುಂ |
ಪೊಡವಿಯ ಬೆಳಲಿಂಗೆ ತೊಳಸಿ ಗುಗ್ಗುಳುಮರಿ(ಚ)ಗಳ್ || ೯೭ ||

### ನಸುಗುನ್ನಿಯ ವಿಷಕ್ಕೆ.

ಕಂ|| ನಸುಗುನ್ನಿಯ [3]ಸೊಕ್ಕಿಂಗಂ |
ಪಸುವಿನ [4]ಘೃತಮಲ್ಲದಂದು ಭಸಿತಂ ಮೇಣ್ ನೀ[5] ||
ಲಿಸಮೇತ ಹಂಸ[6] ಪಾದಿಯು |
ಮೆಸೆವ ಸುಗಂಧಿಗಳೆ ಬಗೆಯಲುಪವಿಷಮುಕ್ಕುಂ || ೯೮ ||

[7]ನಱುವಂಜಿ ನೆಲಾವರೆಗಳ್ |
[8]ತುಱುಚೆಯ ಕರಿಯಂ ಜಲಾನ್ವಿತಂ [9]ಪೂಸುಗೆ ಮೇಣ್ ||
ಪಱಿಗುಂ [10]ಪಂಕದ ಲೇಪದಿ |
ನಱಿ ನಸುಗುನ್ನಿಯ ವಿಷಂ [11]ಭಿಷಗ್ವರಮತದಿಂ || ೯೯ ||

### [12]ತುಱುಚೆಯ ವಿಷಕ್ಕೆ.

ಕಂ|| ತೊಳಸಿಯ ಕರಿ ಸಬುಕಾರಂ |
ಗಳುಮಂ ಕಳಿಯುಕ್ತಮಾಗಿ ಪೂಸುಗೆ ಮೇಣಾ ||
ಗಳೆ ಕರ್ದಮ (ಮಂ)ದಿಂ [13]ಪೂಸಲ್ |
ಕಳೆಗುಂ ಸಂದೇಹಮೇಕೆ ತುಱುಚೆಯ ತಿನಿಸಂ || ೧೦೦ ||

### ಗೇರಹುಣ್ಣು ವಿಷಕ್ಕೆ.

ಕಂ|| ಪರ್ಪಾಟಕದ ಕಷಾಯಮ |
ದೊಪ್ಪುವರುಷ್ಕರದೊ[14]ಳಾದ ಶೋಫೆಯಮಂತಾ ||
ದರ್ಪಮನಾಗಳೆ ತೊಲಗಿಪು |
ದೊಪ್ಪುವ [15]ಮುತ್ತದ ಕಷಾಯಮುಂ ಮೇಣ್ ಕಳೆಗುಂ || ೧೦೧ ||

---

1. ತೊಡೆಯದೆ (ಗ) 2. ಸಿತವೊಂದೆ. 3. ತಿನಿಸಿಂಗಂ (ಕ) ಕಡುರೇನಿಗೆ (ಖ) 4. ಮತಮಲ್ಲ (ಖ) 5. ಕೀಲಿಸ. 6. ಪಾದಿಯು (ಗ) 7. ನಱುವಲ್ಗೆಲಾವರೆಗಳಂ; ರಿಕೆಯಂ (ಗ) 8. ಯಱಂತು ರುಚೆಯಂ ಕರಿಯಂಜಲಾ (ಗ) 9. ಪೂಸುಗುಮೇಣ್ (ಕ) ಪೂಸಲೊಡಂ (ಖ) 10. ಪಂಕವಿಲೇಪದಿ. ವಿಲೇಪನದ (ಕ) 11. ಭಿಷಗ್ಜನತಿಲಕಾ (ಖ. ಗ.) 12. ತುಱುಚೆಯತೀಟೆಗೆ. 13. ಪೂಸಲ್ಕಱಿಗುಂ ? (....ದೊಳಾವ) 14. ಳಾಡಸೊಪ್ಪೆಯುಮಂ(ತಾ)ತದ್ದರ್ಪಮ. 15. ಮುತ್ತಕದ ಕಾಯಮುಣ್ಮಳಿಗುಂ.

ಕಂ|| ಸುಪವಿತ್ರ ಫಲ[1]ತ್ರಯಮುಂ |
ವಿಪಾಕಮೆನಿಸಿರ್ದ [2]ವಾರಿಯುಂ ಮೇಣ್ ಪಾಲ್ಮರ ||
[3]ದಪರಿಸುಪಾಕದ ಜಲದಿಂ |
ವ್ಯಪಗತಮಾಗಿರ್ಪುದಲ್ತೆ [4]ಕೇರಮದಾರ್ಪುಂ || ೧೦೨ ||

[5]ವರಸೊಗದೆ ಸಿತಂ ಮೇಣ್ ತುಂ |
ಬುರಮೂಲದ ಪಾನ ನೀಲಿಕಕರ್ಕೋಟಕಿಯುಂ ||
ಬುರುಹದ [6]ಕೇಸರಮಿವು ತಾ |
ನ[7]ರುಷ್ಕರದ ಪುಣ್ಗೆ ಬೇಱೆವೇಱೆ ರಹಸ್ಯಂ || ೧೦೩ ||

ಕರದಿಂ ಮುಟ್ಟದೆ ತೊಳೆ ನೀಂ |
ನರಮೂತ್ರದೊಳಲ್ಲದಂದು ಬಿಸಿಯಂಬಿಲದಿಂ ||
ಪಿರಿದೆನಿಪ ಗೇರ[8]ಪುಣ್ಗಳ |
ನಿರದಿಕ್ಕು ಬಱಿಕ್ಕದರ್ಕೆ ದಿವ್ಯೌಷಥಮಂ || ೧೦೪ ||

ಮ|| ಸತಿಲಕ್ಷೀರಮುಮಂತು ಮಲ್ಲದೊಡೆ [9]ಸಾಜ್ಯಂ ಮೇಘನಾದ್ಯಾಖ್ಯಮ ||
ಪ್ರತಿಮಂ ತುಂಬುರ [10]ಸೊಪ್ಪೆ ಯಲ್ಲದೊಡಮಾ ತಾಂಬೂಲವಲ್ಲೀದಲಂ ||
ಕ್ಷಿತಿಯೊಳ್ ಪರ್ಪಟಕಂ [11]ಸಹಾಂಬುವನಿಶಂ [12]ಗೇರ್ತಿಂದು ಪುಣ್ಣಾಗೆ ಲೇ |
ಪಿತಮಾಗಲ್ಕಿರದೆಯ್ದಿ[13] ಮಾಣ್ಗುತನು ಶೋಭಾಕ್ರಾಂತ ನಪ್ಪಂ ನರಂ || ೧೦೫ ||

ಕಂ|| ಮನುಜರ್ಗೆ ಗೇರ[14]ಪುಣ್ಗಳ್ |
ಘನಮಾಗಿರೆ ಕುಟಜಪುಷ್ಪಮಂ ಪೂಸುಗೆ ಮೇಣ್ ||
ಘನನಾದಿಯೊಳಾಜ್ಯಮುಮಂ |
ತನುಲೇಪಂಗೆಯ್ಯೆ[15]ಮೆಯ್ಯ ಪುಣ್ಗಳ್ಮಾಣ್ಗುಂ || ೧೦೬ ||

ತಿಲದೂರ್ವೆ ಸೊಗದೆಯೆಂಬಿವ |
ನಲಸದೆ ಪೂಸ[16]ಲ್ಕರುಷ್ಕರಾಖ್ಯದ ಪುಣ್ಗಳ್ ||
ನೆಲಸದೆ ಪೋಕುಂ ಮೆಯ್ಯೊಳ್ |
ಸುಲಲಿತ ಕವಿಪಿಕವಸಂತ [17]ನಿಷ್ಠೋಕ್ತಿಯೊಳಂ || ೧೦೭ ||

1. ತ್ರಯದಿಂ (ಕ) 2. ವಾರ್ಯಮೇಣ್ (ಗ) 3. ದಪರಿಪಾಕಾಂಬುವಿಂದಂ (ಕ) 4. ಕೇರಮದಾ(ಹ)ಪ್ಪಂ. 5. ವರಸೊದೆದ, ಸದಗ. 6. ಕೇಶದ (ಕ) 7. ರುಷ್ಕರದುರುಪುಣ್ಗೆ ಬೇಱೆವೇಱಹನಸ್ಯಂ (ಕ) ನಿತುತಾನರುಷ್ಕರಪುಣ್ಗೆ ಬೇಱೆನೆರಹವನಸ್ಯಂ, ನೆರಹವವಶ್ಯಂ ಎಂದಿರಬಹುದು (ಗ) 8. ಪಣ್ಗಳ ನಿರದಿಕ್ಕು ಬಲಿರ್ಕದರ್ಕೆ. ದಿಕ್ಕುಂ ಬಱಿಕದರ್ಕೆ (ಕ) 9. ಸಾಧ್ಯಾಜ್ಯಂ. 10. ತೊಪ್ಪೆ (ಕ) 11. ಮಹಾಂಬು. 12. ಗೇರಿಂದೆ, ಪೇರಿಂದಪುಣ್ಣೆ (ಘ) ಗೇರಿಂದೆಪುಣ್ಣಾಗೆ (ಗ) 13. ಮಾಣ್ದಾತನಾ ಶೋಭಾಕ್ರಾಂತ ನಪ್ಪಂ ನರಂ (ಗ) ಸೋಪಾಕ್ರಾಂತ, 14. ಪಣ್ಗಳ್ (ಗ) 15. ಮೆಯ್ಯ ಬಣ್ಣಮದಕ್ಕುಂ (ಕೆ) ಬಣ್ಣದದೆಸೆಗುಂ ಪೊಯ್ದುಬಣ್ಣ (ಖ) 16. ಷ್ಕರದ ಪುಣ್ಗಳಾ (ಕ) ರಾಖ್ಯತಪುಣ್ಣುಂ ನೆಲಸದುಸೊಕ್ಕುಂ (ಖ), ರಾಜ್ಯದ.... ಕವಿತವಸಂತ (ಗ) 17. ನಿಷ್ಠೋಕ್ತಿವಲಂ, ಕ್ತಿಗಳಿಂ.



ಕಂ|| ನೆ(ಎ)ಲ್ಲಕ್ಕಿ ಕಿಱುಕುಸಾಲೆಯ |
ನಲ್ಲದೊಡೆಳ್ಳೆಣ್ಣೆ ಮಯಣಯುತ [1]ಮಾದುದಱಿಂ ||
ದಲ್ಲದೊಡೆ ಮಧುಕಘೃತದಿಂ |
ನಿಲ್ಲವು ಭಲ್ಲಾತಕಾಖ್ಯ[2]ವೊಂದಿದ ಪುಣ್ಗಳ್ || ೧೦೮ ||

[3]ನೀರಂ ನೆಯ್ಯಂ [4]ಪೊಯ್ದುಂ |
ಚಾರಿಸಿ [5]ವಳಿಗೆಯೊಳೆ ಬಿಡದೆ ನೂಱ್ಸೊಲ್ವಿರೆಗಂ ||
ನೀಲಿಂದೆ ತೊಳೆದು ಪೂಸೆ ನಿ |
ವಾರಿಸುಗುಂ ಗೇರ ಪುಣ್ಣನಂತಾಕ್ಷಣದಿಂ || ೧೦೯ ||

[6]ಕಱುಕೆಯ ರಸಭಾಗಂ ನಾ |
ಲ್ಕಱೊಳಂ ಪೊಯ್ ಘೃತಮನೊಂದುಮಂ [7]ರಸಮಱೆಯಲ್ ||
ನೆಱೆಯಟ್ಟ ಘೃತದ ಲೇಪದೆ |
ಪಱಿಗುಮರುಷ್ಕರದ [8]ಪುಣ್ಗಳಂತಾಕ್ಷಣದೊಳ್ || ೧೧೦ ||

ಕರಿಯೆ[9]ಳ್ಳೆಮ್ಮೆಯ ಬೆಣ್ಣೆಯೊ |
ಳರಿಸಿನಮನದಲ್ಲದಂದು ತಿಲಪಿಚುದಳಮಂ ||
ಬೆರಸರಿಸಿನಮಂ ಪೂಸು |
ತ್ತಿರೆ ಕೇರಿಂದಾದ ಪುಣ್ಗಳಂ ಪರಿಹರಿಕುಂ || ೧೧೧ ||

ಕರಿಯೆಳ್ಳಂ ಗೋಕ್ಷೀರದೊ |
ಳರೆದೆಮ್ಮೆಯ ಬೆಣ್ಣೆವೆರಸು ಮೇಣ್ [10]ಬೆಂಕೆಯೊಳಂ ||
ದರಿಸಿನಮನಭ್ರನಾದಿಯೊ |
ಳರೆದಿಕ್ಕಲ್ ಕೇರಪುಣ್ಗ [11]ಳಿರವವಮೋಘಂ || ೧೧೨ ||

ತುಂಬುರ [12]ಬಿತ್ತುಂ ಸಿತಮುಂ |
ತಾಂಬೂಲದಲಂಗಳಿನಿತನೆಳ್ಳೆಣ್ಣೆಯೊಳಂ ||
ಕೊಂಬುದು ಕೇರಿನ [13]ಪುಣ್ಗಳ |
ಳುಂಬಂ ಕೊಂಡಾದ ವಿಷಮನಱಿಗುಮವಶ್ಯಂ || ೧೧೩ ||

1. ಯುತಕಾದುದಱಿಂ. 2. ಮೋದಿದ. 3. ನೀರೊ(ಳ್)ಳೆ ನೆಯ್ಯಂ. ನಯಿಯಂ, ನಯಿದುಂ (ಕ.ಖ.) 4. ಪೊಯ್ದುಂ ಬಾರಿಸಿ, ಪೊಯ್ದುಂರಿಸಿತಳಿಗೆ (ಗ) 5. ತಳಿಗೆ (ಕ;) ತ 6. ಕರಿಕೆಯ. 7. ರಸಮಾಱಲ್), 8. ಪುಣ್ಣದಂ (ಗ). ಳ್ಳೆಣ್ಣೆಯೆ (ಗ) ಯೆಳ್ಳೆಂ (ಗ) 9. ಕರಿಯ ರಸದೊಳಂ ಪೊಯ್ವಂತಮದೊಂದು ಮಂಸಮಾಟಲ್ಕೆರೆಯ ಘೃತಲೇಪದೆ ಪರಿಗುಮರುಷ್ಕರದ ಪುಂಗಳಂ ತಾಂಕ್ಷಣದೊಳೌ, ಕರಿಯೆಳ್ಳಂ ಗೋಕ್ಷೀರದೊಳರೆದುಂ ಕರಿಯೊಳೆಮ್ಮೆಯಬೆಣ್ಣೆಯೊಳರಿಸಿನಮುಮ ನಲ್ಲದಂದು ತಿಲಪಿಬುದಲ್ಲಮಂ........(ಗ್ರಂಥಪಾತ) ಬೆರಸರಿಸಿನಮಂ ಸೂಸುತ್ತಿರೆ ಕೇರಿಂಗಾದ ಪುಣ್ಗಳಂ ಪರಿಹರಿಕುಂ || (ಕ. ಖ.) 10. ಬೆಣ್ಣೆಯೊಳಂ (ಕ. ಖ.) ಬೊಂಕೆ (ಘ) 11. ಳಿರವಿದಮೋಘಂ (ಖ.ಗ.) ಪುಣ್ಣಳಿದವಿದಮೋಘಂ (ಕ) 12. ಬಿತ್ತಂಸಿತಮಂ (ಕ. ಖ.) 13. ಪುಣ್ಣನಳುಂಬ ಕೊಂಡಾಡ (ಗ)

### ಲೊಕ್ಕಿಕಕ್ಕೆಗಳ ವಿಷಕ್ಕೆ.

ಕಂ|| ಲೊಕ್ಕಿಗೆ ತಕ್ರಂ ವಿಶ್ವಂ |
[1]ಕಕ್ಕೆಗೆ ತಾಂ ಪೆಸಱಕಟ್ಟು ಮೇಣ್ ಗಣಜಿಲೆಯುಂ ||
[2]ನಿಕ್ಕುವ ಮಧುಕಂ [3]ತಕ್ರಮಿ |
ವಕ್ಕುಂ ಪ್ರತಿಗರಳಮಿಂತು ಪರಹಿತಚರಿತಾ || ೧೧೪ ||

### ದಂತಿ(ಗೆ), ಕುರುಟಿಗೆ(ಯ ವಿಷಕ್ಕೆ)(ಗೆ).

ಕಂ|| ದಂತಿ[4]ಗದಕ್ಕುಂ ಪ್ರತಿಗರ |
ಳಂ[5]ತಿಳಿ ನೀಂ ಬಳ್ಳಿಸೊಂಡೆಯುಂ [6]ಬೆಲ್ಲಂ ಮ ||
ತ್ತಂತು ಕುರುಟಿಗೆಗಮಿದು ಸಿ |
ದ್ಧಾಂತಮೆನಲ್ [7]ಕೊಗ್ಗಿ ನೆಲ್ಲಿಯುಂ ಪ್ರತಿಗರಳಂ || ೧೧೫ ||

### ಚಿತ್ರಮೂಲ(ಗುರು)ಗುಂಜಿಯ ವಿಷಕ್ಕೆ.

ಕಂ|| [8]ಹಿಂಗುಂ ವಿಶ್ವಂಬೆರಸಿರ |
[9]ಲೇಂ ಗಳ ಚಿತ್ರಕದ [10]ವಿಷಮ [11]ವಿಷದ ವಿರೋಧಂ ||
ಸಂಗಳಿಸಿದ ಗುಂಜಾಮದ |
[12]ಮಂ ಗೆಲಲೇನಭ್ರನಾದಿ(ಯೆಂಬು) ಯೊಂದದಮೋಘಂ || ೧೧೬ ||

### ಅಂಕೋಲೆ ವಿಷಕ್ಕೆ.

ಕಂ|| ಕುಸುಬೆಯ ರಸವಜದುಗ್ಧಂ |
ಯೆಸೆವ ಹರೀತಕಿಯು [13]ಮಾದೊಡಂತೊಂದೆ ವಲಂ ||
ದೆಸೆಗಿಡಿಕುಮಂಕೊ(ಕು)ಲೆಯ ಮದ |
[14]ಮೆಸೆಗುಮೆ [15]ಪೇಱ್ ಕುಡಿಯೆ [16]ವಾರಿಯಿಂ ಬುಧಬಂಧೂ || ೧೧೭ ||

---

1. ತಕ್ಕೆಗೆ (ಕ) 2. ನಿಕ್ಕುವ, ಮೇಣ್ ಮಧುತಕ್ರಮಿ (ಕ. ಖ.) ನಿಕ್ಕುವಮೇಂ ಮಿಧುಕಮೆಂ (ಘ) ಮಿಕ್ಕುವವೆಂ (ತ) 3. ತಕ್ಕಂ ಮಿಕ್ಕುಪ್ರತಿ (ಗ) 4. ಗದಕ್ಕಂ (ಕ), ದಂತಿಗತಗರಕ್ಕುಂ ಪ್ರತಿಗರಳಂ ತೆಳ್ಳಂ ಬಳಸೊಂಗೆಯುಂ ಬೆಲ್ಲಂಕುರುಟಿ (ಖ), ದಂತಿಗನಕ್ಕುಂ (ಗ) 5. ತೆಳ್ಳಿನೀಂ (ಕ) ತಿಳಿನೀರಿಂ (ಖ) 6. ಬೇಲಂ ಚೆಲ್ಲಂ (ಗ, ತ) 7. ನುಗ್ಗಿಯುಂ, ನುಗ್ಗಿನೆಲ್ಲಿಯುಂ ಮೆನಲ್ಮಗೆನೆಲ್ಲಿಯುಂ (ಗ) ಮೆಲಲ್ (ಘ) (ಕ. ಖ.) 8. ಇ(ಯಿ)ಂಗುಂ (ಗ) 9. ಲೀಂಗಡ. 10. ವಿಸಮ. 11. ವಿಷಸಂಹರಣಂ (ಖ), ವಿಭಾಸು ರೋದಂ ಸಂಣರಿಸದು (ಘ) 12. ಮಂಗಂಳಿಲೆನಲಭ್ರನಾದಿಯೆಂಬುದಮೋಘಂ (ಕ) ನಭ್ರನಾದಿಯೊಂದೆ ಸಮರ್ಥಂ (ಕ) ಗಣಿಲಿನೆಲ (ಗ,ತ) 13. ಮಾದೊಡೊಂದೊಂದೆ. 14. ಮಂಕುಲಿಯುಮದ ದೆಸಕಮುಮುಂ ವಾರಿಯಿಂದೆಕುಡೆ ಬುಧಬಂಧೂ (ಕ) 15. ಪಿಳ್ಳುಡೆಯೊಳಾತಿಯಿಂ, ವಾರಿಯಂ (ಕ. ಖ.) 16. ವಾರಿಯುಂ (ಗ)



### ಅಂಕೋಲೆ ಅರುಟಾಳ ವಿಷಕ್ಕೆ.[1]

* ಕಂ|| [2]ಬೆರಸಿದೊಡೆ ನುಗ್ಗಿ ಗೋರಟೆ |
ಯೆಲೆಯಂಕೋಲೆಯ ಮದಕ್ಕೆ ಪದ್ಮಾಕ್ಷಿಯದೊಂ ||
ದರು(ಟಾ)ತಾಳದ[3]ಮದಶಮನಂ |
ಬೆರಸಿರೆ ಮಧುವಿಂದೆ ಮಂಗರಾಜನಮತದಿಂ || ೧೧೮ ||

### [4]ಹಾವುಮೆಕ್ಕೆ ಮುಂಗುರಿ(ಯಣಬೆ) ಚಗಚೆಗಳ ವಿಷಕ್ಕೆ.

ಕಂ|| ವಿಷಮೆಕ್ಕೆಗೆ ಗಿಣಿಮೂಗಂ |
ವಿಷ[5]ಮುಂಗುರಿಗಂತೆ [6]ಪಾಲು ಜಂಬೂತ್ವಚಮಾ ||
ವಿಷದಣಬೆಗೆ ಮೊಸರಿಳಿಯೊಳ್ |
[7]ಭಿಷಗ್ವರರ್ [8]ಹಿಂಗು ತಗಚೆಗುಪವಿಷಮಕ್ಕುಂ || ೧೧೯ ||

### ಸೂರಣ (ವಿಷ)ಕ್ಕೆ, ಎಣ್ಣೆಯವಿಷಕ್ಕೆ.

ಕಂ|| ಸೂರಣಕೆ ನೆಲ್ಲಿ ಮತ್ತಂ |
ತೋರಂತಿರೆ ಪುಣಿಸೆಯೆಸೆವ ಪಣ್ ತಿಲಜ[9]ಮದ ||
ಕ್ಕಾರಯ್ಯೆ ತಕ್ರಗಣ[10]ಜಿಲು |
ಬಾರಿಸುಗು(ಗ)ಂತದಱ [11]ಗರಳಮಂ ಗುಣನಿಲಯಾ || ೧೨೦ ||

### [12]ಕೆಸವಸೂರಣಗಳ ವಿಷಕ್ಕೆ.

ಕಂ|| [13]ಕೆಸವಿನ ಸೂರಣದೆಸಕಮ |
ನೆಸೆವಾ [14]ವಾಸ್ತುಕದ ರಸಮದಲ್ಲದೊಡಂ ಮೇಣ್ ||
ವಸುಧೆ[15]ಯೊಳಂತೆಳನೀರುಂ |
ಮಸುಳಿಸುಗುಂ ಸಕಲಸುಜನಸೇವ್ಯನ ಮತದಿಂ || ೧೨೧ ||

### [16]ಬಳ್ಳಿರಕ್ಕಸಿ, ನೆಲಗುಳ್ಳಗಳ ವಿಷಕ್ಕೆ.

ಕಂ|| ಇಲೆಯೊಳಗೆ [17]ಹಸ್ತಿಕರ್ಣಿಗೆ |
ಸಲೆ[18]ಪುಳ್ಳುಂಬುಣಿಸೆ ಯುಪವಿಷಂ ಮೇಣ್ ತೈಲಂ ||
ನೆಲಗುಳ್ಳದ ಮದಮಂ ತಾಂ |
ತೊಲಗಿಸುಗುಂ ನೆಲ್ಲಿಯೊಂದೆ ಪರಹಿತಚರಿತಾ || ೧೨೨ ||

---

1. ಅರುಡಾಳದಹಣ್ಣಂಗೆ. 2. ಬೆರಸರೆದನುಗ್ಗಿ ಗೋರಟೆಯ ಯಂಕೊಲೆ (ಗ) (ಕ) 3. ಳದುದಶ ಮನಂ (ಗ) 4. ಹಾವುಮೆಕ್ಕೆವಿಷಮುಂಗುರಿನಂಜಣಕ್ಕಿಚಗಚೆಗೆ, ವಿಷಮೆಕ್ಕೆಗು ವಿಷಮುಂಗುರಿಗು, ವಿಷ ದಣಬೆಗೂ ಚಗಚೆಗೂ (ಕ) 5. ಮುಂಗುಲಿ (ಖ) 6. ಸಾಲುಪಾಲಿ (ಗ) 7. ವಿಷಗ್ವರರ್ (ಗ) 8. ತಿಳಿಯಲುಂಗು (ಗ) ತಿಳಿಯಲಿಂಗು ತಗಚೆಗವಿತ್ರಂ (ಕ. ತ. ಘ.) 9. ಮುಮಂದಾರ (ಕ. ಖ.) 10. ಜಿಲ್ಪಾರಿಸುಗುಂ (ಕ) ಜಾರಿಸುಗುಂ (ಖ) ಜಿಲುಜಾರಿಸುಗುಂ ಸಕಲಸುಜನಸೇವ್ಯನಮತದಿಂ (ಖ) 11. ಗರಳಮಂ ಗುಣಗಣನಿಲಯಾ (ಗ) 12. ಕೆಸವಿಗೆ, ಸೂರಣಕ್ಕೆ, ಸೂರಣಕ್ಕೆ ಎಣ್ಣೆಗೆ? (ಕ. ಖ.) 13. ಕೆಶವಿನ (ಕ) 14. ವಸ್ತುಕದ (ಗ) 15. ಯೊಳಂ(ಳು) ತಿಳಿನೀರಿಂ (ಕ) ಯೊಳಂಕಳೆನೀರಿಂ (ಖ) ತೆಳೆನೀರಿಂ (ಗ) 16. ಮರಸಣಿಗೆಗೆಡ್ಡೆಗೆ, ನೆಲಗುಳ್ಳಕ್ಕೆ (ಖ) ಬಳರಕ್ಷೆಗೆ (ಘ) 17. ಕರ್ಣಿಕೆ. 18. ಪುಲ್ಲುಂಬುಣಿಸೆ.

* ಈ ಪದ್ಯವು (ಕ. ಖ.) ಗಳಲ್ಲಿಲ್ಲ.

### [1]ಮಂಗುಱುವಳ್ಳಿಗೆ, ಹಾಗಲ (ವಿಷ)ಕ್ಕೆ-

ಕಂ|| ಮಂಗುಱುವಳ್ಳಿಯ ವಿಷಮಂ |
[2]ಸಂಗಳಿಸಿದ ಸಿತದೊಳಂ [3]ಶತಾವರಿಯಱಿಗುಂ ||
ಪಿಂಗಿಸುಗುಂ ಪಾಗಲ ವಿಷ |
ಸಂಗತಿಯಂ ನೆಲ್ಲಿಯೊಂದೆ ಗುಣಗಣನಿಲಯಾ || ೧೨೩ ||

### ದೀಪ(ದೇವ)ದ್ರಾಕ್ಷೆ ವಿಷಕ್ಕೆ.

ಕಂ|| [4]ದೇವದ್ರಾಕ್ಷೆಯ ಮದಮು |
ದ್ಭಾವಿಸೆ ನಿರ್ಗುಂಡಿ ಮರಿಚದೊಳ್ ಸಮನಾ[5]ಗ ||
ಲ್ಕಾವಿನ [6]ಪಾಲಿಂದೀಂಟೆ ಶು |
[7]ಭಾವಹಮಕ್ಕುಂ ವಿದಗ್ಧ ಚೂಡಾರತ್ನಾ || ೧೨೪ ||

### [8]ಎಲ್ಲಾ ಪಣ್ಗಳ ವಿಷಕ್ಕೆ.

ಕಂ|| ಅವಾವ ಪಣ್ಗಳಂ ಮೆಲ |
ಲಾವಂ ತತ್ಫಲದ ಬೀಜಮಂ ತ್ರಿಕಟುಕದಿಂ ||
ಸೇವಿಸಲುಪವಿಷಮಕ್ಕುಂ |
[9]ಭೂವಿಶ್ರುತ ಮಂಗರಾಜನನುಮತದಿಂದಂ || ೧೨೫ ||

### [10]ತುಂಬೆಯ ವಿಷಕ್ಕೆ.

*ಚಂ|| ಬೆರಸುಗೆ ಪುತ್ರಜೀವಿಯೊ[11]ಳೆ ಕಂಬುವನಾ ನವಕೃಷ್ಣ ಜೀರಕಂ |
[12]ಬೆರಸರೆದೀಯೆ [13]ತುಂಬೆಯ ಮದಾಪಹ ಮಲ್ಲದೊಡೇವುದಾವುದಂ ||
ಬೆರಸದೆ ಪಿಂ(ಡು)ಡಿ ನೀಂ ತುರುವೆಯಂ ರಸಮುದ್ಭವಮಾಗಲಂತದುಂ |
ಪರಿಹರಿಕುಂ ತದೀಯಮದಮಂ ವಿಭುವಂಶಲಲಾಮನುಕ್ತಿಯಿಂ || ೧೨೬ ||

### ತುಂಬುರು, ನೊಸರೋಗರದವಿಷಕ್ಕೆ.

†ಕಂ|| ಮರಿಚಸುತಕ್ರಂಗಳ್ ತುಂ |
ಬುರವಿಷಮಂ ಕಿಡಿಸುಗುಂ ಭಿಷಗ್ವರಮತದಿಂ ||
ಮೊಸರ್ವೆರಸುಂಬೋಗರಕಂ |
ಪೆಸಱಿನ [14]ಕಟ್ಟೇಂಟಲದಕೆ ಹಿತಮಂ ಮಾಱ್ಕುಂ || ೧೨೭ ||

---

1. ಮಂಗುರವಳ್ಳಿಗೆರ್ಪಾಲಿಗೆ. 2. ಸಂಗೊಳಿಸಿದ (ಖ) 3. ತಕಾವರಿ (ಕ) ಸತಾವರೆ (ಗ) 4. ದೀಪದ್ರಾಕ್ಷೆ (ಕ. ಖ.) 5. ನಾಗಲ್ಪಾಡಿನ, ನಾಗಲ್ಪಾವಿನ. 6. ಪಾರಿಂದೆಡೆ (ಖ) ಪಾಲಂದೀಂದು (ಗ) 7. ಭಾವಹಮುದಕ್ಕುಂ. 8. ಸರ್ವಪಣ್ಣಿಂಗೆ. 9. ಭೂವಿನುತಂ. 10. ತುಂಬುರವಿಷಕ್ಕೆ, ಮೊಸರೋಗರಕ್ಕೆ (ಕ) 11. ಳೆಕಾಬುಗಳಂ (ಗ) 12. ಬೆರಸಿರಲೀಯೆ (ಗ,ತ). 13. ತುಂಬಿಯ (ತ) 14. ಕಟ್ಟನೀಂಟಲದಕತಾಣೆ.

* ಇದು (ಕ. ಖ.) ಗಳಲ್ಲಿಲ್ಲ. † ಇದು (ಕ. ಖ. ಗ. ತ) ಪ್ರತಿಗಳಲ್ಲಿಲ್ಲ.



ಕಂ|| *ಸುತಜೀವಿ ಕೃಷ್ಣ ಜೀರಕ |
ಯುತಮಾಗಲ್ಕಾಯಿವೆರಸು ಮೇಱ್ತುಱುವೆಯನು ||
ದ್ಧತಮಾದ ರಸಮುಮಿಕ್ಷಿಸೆ |
ಕ್ಷಿತಿಯೊಳ್ ತುಂಬೆಯ ಮದಾಪಹಂ ಗುಣನಿಲಯಾ || ೧೨೮ ||

### [1]ನೊಸರೋಗದ ವಿಷಕ್ಕೆ.

ಕಂ|| ಮೊಸರ್ವೆರ[2]ಸುಂಡೋಗರದಾ |
ಮಿಸುಪ ಮದಂ [3]ತೊಲಗುಗುಂ ನವೀನಮೆನಿಪ್ಪಾ ||
ಪೆಸಱಿನ ಕಟ್ಟಂ[4] ಕುಡಿಸಲ್ |
ವಸುಧಾತಲಮಾನ್ಯ [5]ಮಂಗರಾಜನ ಮತದಿಂ || ೧೨೯ ||

### ಎರ್ಯ್ಯೆಮುಳ್ಳ ವಿಷಕ್ಕೆ.[6]

ಕಂ|| [7]ಉಳ್ಳಿ ಸಿತಂ ವ್ಯೋಷಂ ಪಯ |
ವೊಳ್ಳಿದುದೆನಿಸಿರ್ದ ಬಂಜೆ ಮಡುವಾಗಲಿವಂ ||
[8]ಕೊಳ್ಳು ತಿಲ[9]ತೈಲ ಗೂಡೆ |
ಯ್ಮುಳ್ಳುಗಳಾ ಗರಳಮಂ ಕರಂ ಪರಿಹರಿಕುಂ || ೧೩೦ ||

ಹೂರಂ ತ್ರಿಕಟುಕಮಂ ಕಾ |
ಱ್ಪೇರೆ [10]ಸುತಕ್ಕೋಲಘಟ್ಟ ಸಿತಜಲಧರಮುಂ ||
[11]ವಾರಿಯೊಳರೆದೀಂಟದುವೆ ನಿ |
[12]ವಾರಿಕು ಪಯಗೂಡಿದೆಯ್ಯ ಮುಳ್ಳಿನ ವಿಷಮಂ || ೧೩೧ ||

---

1. ಮೊಸರೋಗರಕ್ಕೆ (ಕ) 2. ಸುಂಟೋಗರದಾಮಿಸುಪಮದಡಗುಪುನರ್ನವಿಸಮನಿಪ್ಪಾ (ಖ) ಸುಂಬೋಗರದಾ (ಗ,ತ) ಸುಂದೊಗರವಾಮಿಸುನಮದಂಡಲವಗುಂ ಪುನರ್ನವಿಸಮನಿಪ್ಪಾ(ಘ) 3. ಪಿಂಗುಗುಂ. 4. ಕುದಿಸಲೆ, ಕುಡಿಸುಗೆ (ಗ, ತ) 5. ಮಂಗನನುಮತದಿಂದಂ (ಖ) 6. ಎಯ್ಮೆಗೆ. 7. ಉಳ್ಳಿಯಸೊಕ್ಕಂ ವ್ಯಾಧಿಪಯಂ (ಘ) 8. ಕೊಳ್ಳಿರದೆ ಮಾಯ್ದುಮೆಯ್ಗಳ.

ಕಂ|| ಲಶುನಂ ವಂಧ್ಯಾ ಕರ್ಕೋ |
ಟಶರ್ಕರವ್ಯೋಷಯುಕ್ತ ದುಗ್ಧಸಮಂ ಸೇ ||
ವಿಸಲೆಯ್ಯ ಮುಳ್ಳು ತಿಲತೈ |
ಲಸಮನ್ವಿತಮಾದ ಗರಳಮಂ ಪರಿಹರಿಕುಂ || ೧೨೮ ||

ಈ ಪದ್ಯವು (ಗ,ತ) ಪ್ರತಿಯಲ್ಲಿದೆ—

9. ತೈಲಂ ಕೂಡಿರ್ದೆಯ್ಯಮುಳ್ಗರಳಮಂ ಪರಿಹರಿಕುಂ (ಖ) ಕೊಳ್ತೀರದೆಮಾಣೆಯಿಗಳ (ಘ) ಮುಳ್ಳುಂ ತೈಲದೊಳೆ ಬೆರಸಿ ದತಿವಿಷಮಱಿಗುಂ|| (ಕ. ಖ). ಮಾಣ್ಗುಮೆಯ್ಯಗಳಮುಳ್ಳುಂ (ಗ) 10. ಸಲಘಟ್ಟ (ಕ) ಸುದಲಘಟ್ಟ (ತ) 11. ವಾರಿಯೊಳಿರದರೆದೀಂಟೆನಿ (ಘ) 12. ವಾರಿಸುಗುಂ ಯೆಯ್ಯಮುಳ್ ಪಯೋಮಿಶ್ರಿತಮಂ (ಖ)

* ಇದು (ಕ, ಖ, ತ.) ಪ್ರತಿಗಳಲ್ಲಿಲ್ಲ.

### ಹಿಟ್ಟಿನ ವಿಷಕ್ಕೆ.[1]

ಕಂ|| ಬಾದೇಂ [2]ಪಿಟ್ಟಂಗೆ[3]ಕದು |
ಷ್ಣೋದಕಮಂ ಕುಡಿಯೆ ಲವಣ[4]ಮಿಶ್ರದ ತಕ್ರ[5]ಮ ||
ದೋದನಕುಪವಿಷಮಕ್ಕುಂ |
ಮೇದಿನಿಯೊಳ್ [6]ಮಂಗರಾಜನನುಮತದಿಂದಂ || ೧೩೨ ||

### ಅನ್ನ(ಅಶನ)ದ ವಿಷಕ್ಕೆ.

ಕಂ|| ಮರಿಚ ಶಿಖಿ[7]ಶುಂಠಿ ಬೇವಿನ |
ಸುರಸಂ ಗಣಿಜಿಲಯಮೂಲ ಸೈಂಧವಸಹಿತಂ ||
ಪರಿ[8]ಮರ್ದಿಸಿ ಕುಡು ವಾರಿಯೊ |
ಳಿರದಶನದ ಸೊಕ್ಕುಮಳಿ[9]ವುದೊಂದಚ್ಚರಿಯೇ || ೧೩೩ ||

### ನಾನಾಶಾಕಾನ್ನ(ದ ವಿಷ)ಕ್ಕೆ.

ಕಂ|| ವರ್ಣಾನ್ನ ಮಿಶ್ರಿತಂ ಪರಿ |
ಪೂರ್ಣಂ ಕೊಂಡಖಿಳಶಾಕಪಾಕಾದಿ[10]ಗಳಂ ||
[11]ಪರ್ಣಫಲಭೇದಮಂ [12]ಸಂ |
ಕೀರ್ಣಂಗೊಂಡಂಗೆ [13]ಲವಣತಕ್ರಂ ಶುಭದಂ || ೧೩೪ ||

### [14]ವಿದಳಾ(ನ್ನ ವಿಷ)ಕ್ಕೆ.

ಕಂ|| ವಿದಳಾನ್ನ ಸರ್ವಶಾಕಂ |
ಕದಶನಮಿವನುಂಡವರ್ಗೆ ಶುಂಠಿಗಳುಂ ತ ||
ಕ್ರದೊಳೊಂದಿದಭಯಮುಂ [15]ಮೇಣ್ |
ವಿದಳಿಸುಗುಂ ತದ್ವಿಷಂಗಳಂ ಬುಧಮಿತ್ರಾ || ೧೩೫ ||

ಕಂ|| *ಅಪರಿಮಿತಮಪ್ಪ [16]ವಿದಳಾ |
ನ್ನ ಪತ್ರಫಲಶಾಕ ಭೋಜನಂಗಳ ವಿಷಮುಂ ||
[17]ವ್ಯಪಗತಮಂ[18] ಬಿಲದಧಿಯಿಂ |
ಗುಪಶಮಮಕ್ಕುಂ ವಿವೇಕಚೂಡಾರತ್ನಾ || ೧೩೬ ||

1. ಹಿಟ್ಟ (ಕ), 2. ಪಿಂಟುಗೆ (ಗ) 3. ತದುಷ್ಣೋದಕಮಂ ಕುಡುಗೆ. 4. ಮಿಶ್ರಿತತಕ್ರ(ದಿ)ಂ 5. ಮನೋದನಕುಪವಿಷ (ಘ) 6. ಮಂಗರಾಜನಮತದಿಂ:(ಗ) ಕುಡುಗೆ; ರಾಜಿತಮತದಿಂ (ಕ) 7. ತುಂಡಿ (ಗ) 8. ಮರ್ದಿಸಿಕುಡೆ (ಕ) ಮರ್ದಿಸಿಕೊಡು (ಗ) 9. ವುದೇನಚ್ಚರಿಯೇ. 10. ಪಾಕಶಾಕಾದಿಯುಮಂ. 11. ಪರ್ಣ್ಪಲಭೇದ (ಗ) ವರ್ಣಫಲ (ತ) 12. ಪರಿಪೂರ್ಣಂ ಕೊಂಡಂಗೆ (ಕ) 13. ತಕ್ರಲವಣಂ. 14. ವಿದಳಾನ್ನಮೇಲೊಗರಗಳವಿಷಕ್ಕೆ, ಷಡ್ರಸಾನ್ನಕ್ಕೆ ನಾನಾಪೋಲಿಶ ಮೇಲೊಗರ ವಿಷಕ್ಕೆ (ಕ. ಖ. ಘ.) 15. ಮೇಣ್ವಿದಾರಿಕುಂ ಮಂಗರಾಜನನುಮತದಿಂದಂ (ಕ), ವಿದಾರಿಕುಂ ತದ್ವಿಷಂ ಬುಧಮಿತ್ರಾ (ಗ). 16. ವಿದಲಾಂಗ. 17. ವ್ಯಪಗತ ತುಂಬಿಲದಡ್ಡಿಗದುಪಶಮುಮಕ್ಕುಂ ವಿವೇಕ (ಗ,ದ) 18. ಕ್ಕುಂಬಿಲದಉಪ.

* (ಕ) ದಲ್ಲಿ ಈ ಮೂಲವಿಲ್ಲ. ಅಸಂಪೂರ್ಣಾರ್ಥವು ಇದೆ.



### ಅಧಿಕಾನ್ನ ವಿಷಕ್ಕೆ.[1]

ಕಂ|| [2]ಕರಿಯೆಲೆಯ ರಸದೊಳಂ ಸಿಂ |
ಧುರುಹಂ ಮಗಧರುಹ ವಿಶ್ವಮಂ ಮೆಲ್ವುದು ಮೇಣ್ ||
[3]ವರಕಟುಕರೋಹಿಣಿಯುಮಂ |
[4]ಚರಿಸುಗೆ ಟಂಕಣಮನಧಿಕಭೋಜನವಿಷಹಂ || ೧೩೭ ||

### [5]ಕ್ಷೀರ ವಿಷಕ್ಕೆ.

ಕಂ|| ನೀರಿಂ ಶುಂಠಿಯುಮಂ ಬೆ |
ನ್ನೀರಿಂ[6]ದಣಿಲೆಯುಮ [7]ನೀಂಟಿ ಕಡಸಿಗೆಯ[8]ರಸಂ ||
ಕ್ಷೀರಕ್ಕುಪವಾಸಂ ಮೇಣ್ |
ಧಾರಾಧರನಾದಿ ಮತ್ತಮುಪವಿಷಮಕ್ಕುಂ || ೧೩೮ ||

### [9]ಮೊಸರ ವಿಷಕ್ಕೆ.

ಕಂ|| ಪೊಸಪೆಸಱ ಕಟ್ಟುಮಂ ಕುಡಿ |
ವಸುಧಾಪಲಭೋಜನಂಗಳಂ ಮಾಱ್ಪುದು ಶುಂ ||
ಠಿಸಮೇತಮ(ಮು)ಭಯಮಂ ಮಱು |
ಗಿಸಿಕೊಂಬುದು ಮೊಸರ ವಿಷಮನಂ[10]ತದು ಕಳೆಗುಂ || ೧೩೯ ||

### ಮೊಸರು ಮಜ್ಜಿಗೆವಿಷಕ್ಕೆ.

ಕಂ|| ಕು(ಡೆ)ಡು ಶರ್ಕರೆಯಂ ಮೊಸರಿಂ |
[11]ತೊಡರ್ದ ವಿಷಂಗಳುಮನ[12]ಳಱಿಕುಂ ತಕ್ರದ ಸೊ ||
[13]ಕ್ಕ್ರಡಸುಗುಮದಱಿಂ ಮರಿಚಂ |
ಕೆಡಿಸುಗುಮ(ದು)ಘುತಕ್ರಮರಿಚಮೆಂಬುದು ಧರೆಯೊಳ್ || ೧೪೦ ||

ತಡೆಯದೆ ತಕ್ರದ ವಿಷಮಂ |
ತೊಡೆಗುಂ ತಲೆದೋಱದಂತದಾಕ್ಷಣ[14]ದೊಳೆ ತಾಂ ||
ಕಡಸಿಗೆ [15]ಯೆಸರ್ನಾಗರಮಂ |
ಕುಡುವುದು ಮರ್ದುಗಳಿ[16]ದರ್ಕೆ ದೊರೆ ಪೇಱತುಂಟೇ || ೧೪೧ ||

1. ಷಡ್ರಸಾನ್ನವಿಷಕ್ಕೆ. 2. ಕೆರ್ಯೆಸ್ಲೆ—ಮೇಲೀವುದು—ಸುಗೆಂ—ಮಣಿಕಭೋಜನ (ಗ) 3. ವರತ್ರಯ ಕುರೋಹಿಣಿಯೊಳಂ ಬೆರಸುಗೆ ಟಂಕಣಮನಧಿಕ ಭೋಜಮಧಿಕಂ (ಖ) ಭೋಜನಮುಹಯಂ (ಘ) ಭೋಗದಮದಮಂ (ಕ) 4. ಚರಿಸುಗುಯೆಂಕರ್ಣನು (ಘ) ಯೊಳಂಬೆರಸು.... ಮನಧಿಕಭೋಜನಮದಕಂ|| (ತ) ಭೋಜನಮದಹಂ (ದ) 5. ಹಾಲಿಗೆ. 6. ದಭಯುಮುಮನೀಂಟು ಕಡಸಿಗೆಯ ಮತ್ತದುಪವಿಷಮಕ್ಕುಂ (ಖ) 7. ನಟ್ಟು (ಘ) 8. ಯೆಸೆವಾಕ್ಷೀರಕುಪವಾಸಂ ಮೇಣುದಾವವರನಾದಿ (ಗ) 9. ಮೊಸರಿ(ಂ)ಗೆ. ತಕ್ರದವಿಷಕ್ಕೆ (ತ) 10. ನಂತದೆ (ಗ) 11. ದಡರ್ದ· 12. ನರಿಕುಂ (ಗ) ಸೊಕ್ಕಡಗು ರಿಂಮಂಡಂ ಕೆಡಿಪುಗು ಮಧುತಕ್ರ ಮಂಡವೆಂಬುದು ಧರೆಯೊಳ್ (ಗ) 13. ಕ್ಕಡಗುಮದರಿ ಮರಿಚಂ ಕಡಿಸುಗುಮಧು (ಖ) 14. ದೊಳ್ತಾಂ. 15. ಯೆಸನ್ನಾ. ಸನ್ನಾಗರ (ಖ) 16. ವರ್ಕೆಸರಿ (ಖ)

### ತುಪ್ಪದ ವಿಷಕ್ಕೆ.

ಕಂ|| ಮರಿಚಂ ಮಾಕ್ಷಿಕಕೂಶ್ಮಾಂ |
ಡರಸಂ [1]ತಾಂಬೂಲದಳರಸಂಗಳನೀಂಟಲ್ ||
[2]ಪೆಱಗುಂ ಮೇಣ್ ಬಿಸುನೀರ್ ಗಡ |
ತರಣಿಗೆ ತಮವೋಡುವಂತೆ ತುಪ್ಪದ ಗರಳಂ || ೧೪೨ ||

### ಜೇನತುಪ್ಪ ವಿಷಕ್ಕೆ.

ಕಂ|| ಕುಂಬಳದ [3]ಫಲರಸಂ ಮೇ |
ಣಿಂಬಿನ ಲೊಕ್ಕಿಯ ಕಷಾಯಮುಂ ಕೆ(ಕು)ಡಿಸುಗುಮು ||
ಷ್ಣಾಂಬುವೆ [4]ಮೇಣಾ ಮಧುವಿಂ |
ತಿಂಬಿದ ವಿಷಮಂ ವಿವೇಕಚೂಡಾರತ್ನಾ || ೧೪೩ ||

### ತುಪ್ಪಜೇನುತುಪ್ಪಗೂಡಿದ ವಿಷಕ್ಕೆ.

ಕಂ|| [5]ಮಧುವುಂ ಗೋಘೃತಮುಂ ಕೂ |
ಡೆ ಧಾತ್ರಿಯೊಳ್ [6]ಕೊಂಡೊಡದು ವಿಷಂ ಭಾವಿಪೊಡಂ ||
ಸುಧೆಗೆಣೆಯೆನಿಪಂಗು[7]ರಮಂ |
ಬುಧರೀವುದದರ್ಕದುಪವಿಷಂ ಗುಣನಿಳಯಾ || ೧೪೪ ||

### ಕಂಗುಂಗೆ ಎಣ್ಣೆ, ಎಳ್ಳೆಣ್ಣೆ ವಿಷಕ್ಕೆ.

ಕಂ|| ಕಂಗುಂಗೆಯೆಣ್ಣೆಗಿಕ್ಷುರ |
ಸಂಗಳೆ ಭಾವಿಸೆ[8]ತಿಲಕ್ಕಮರ್ಕನ ಮೂಲಂ ||
ಸಂಗಳಿಸಿದ ತಿಲ(ಜ)ಕ್ಕೆ ಮ |
ನಂಗೊಳಿಸುವ ಕೋಕಿಲಾಕ್ಷ ಬೀಜಮಿ[9]ವರಿಗಳ್ || ೧೪೫ ||

### [10]ಎಣ್ಣೆಯ ವಿಷಕ್ಕೆ.

ಕಂ|| ಸಿತಯುತದ[11]ಪಯಃಪಾನಮ |
ದತಿಶಯದಿಂ ಕಳೆಗುಮೆಸೆವ ತೈಲದ [12]ವಿಷಮಂ ||
ಘೃತಸಿತ[13]ಮಧುವುಂ ಮೇಣೀ |
ಕ್ಷಿತಿಯೊಳ್ ತದ್ಗರಳನಾಶನಂ ಬುಧಬಂಧೂ || ೧೪೬ ||

---

1. ತಾಂಬೂಲ ದರಸಗಳನೀಂಟಲದರಿಂದೆ 2. ಪೆರಗುಂಮೇಣ್ ಬಿಸಿನೀರ್ಗಳಂ. ಪರೆಗುಂಮೇಣ್ ಬಿಸಿನೀರ್ಗಂ (ಖ) 3. ಫಲದರಸಮಂ ಮೇಣಿಂಬಿನ——ಮಧುವಿಸಿತೆಂಬದವಿಷಮನಂ (ಗ) 4. ಮೇಣ ದು (ಖ) 5. ಮಧುವಿಂ (ಗ) 6. ಕೊಂಡಾಡದು (ಖ) ಕೊಂಡೊಡುಪವಿಷಂ (ಖ) 7. ಗುರು ಮೆಸಿನಿಗ್ಗಂದತರಾಂಬುದರೀವುದತನಕ್ಕೆ (ಘ) 8. ತಿಲಕಮಮರ್ಕನಮೂನಂ (ಘ) 9. ಮಿಾವೈರಿಗಳ್. 10. ಎಳ್ಳಗಸಿ ಎಣ್ಣೆಗೆ (ಘ) ಇಲ್ಲಿ—ಕಳೆಗುವುಗಸೆತೈಲದೆ - ಎಂದಿರಬಹುದು. 11. ಪಯಃಪ್ಪಾನಂ (ಖ) 12. ಮದಮಂ. 13. ಮಧುಮಿವು (ಖ)



### ಸಬ್ಬಸಿಗಗೆ;* ಎಳ್ಳೆಣ್ಣೆಗೆ.

ಕಂ|| ಮಳಯರುಹ ನಾಗಕೇಸರ |
ಮಿಳಿಯೊಳ್ ಸಬ್ಬಸಿಗೆಯುಪ[1]ವಿಷಂಗಳೆನಿಕ್ಕುಂ ||
[2]ಹುಳಿಸೆಯ ಹುಳಿಯುಂ ಗುಡಮುಂ |
ತಿಳಸಂಭವಮೆನಿಸಿದೆಣ್ಣೆಗಮುಳಚರಿತ್ರಾ || ೧೪೭ ||

### ಎಳ್ಳಗಸೆತೈಲ ವಿಷಕ್ಕೆ.

ಕಂ|| ಎಳ್ಳಗಸೆಯ ತೈಲಕ್ಕಂ |
ಬೆಲ್ಲಂ ಪುಣಿಸೆಯ [3]ಫಲೋದ್ಗತಂ ಪುಳಿವೆರಸಲ್ ||
ನಿಲ್ಲದೆ ಕುಡಿಸಲ್ಕುಪವಿಷ |
ಮಲ್ಲದೆ ಪೇಱದಕೆ ಬೇಱೆ ದೊರೆ[4]ಪೆಱತುಂಟೇ || ೧೪೮ ||

### ಬೇವಿನೆಣ್ಣೆ; ಔಡಲದೆಣ್ಣೆ ವಿಷಕ್ಕೆ.

ಕಂ|| ಕ್ಷೋಣಿ[5]ಯೊಳೆ ಬೇವಿನೆಣ್ಣೆಗೆ |
ರೇಣುಕಕುಟಜಂಗಳರಿಗಳಕ್ಕುಂ ಧರೆಯೊಳ್ ||
ಮೇಣೌಡಲದೆಣ್ಣೆಗೆ [6]ಸ |
ಪ್ರಾಣಿ(ಸಿ)ಸದೊಡೆ ತುಳಸಿಗುಡಸಿತಂ ಹಿತಮಕ್ಕುಂ || ೧೪೯ ||

### [7]ಬಿದಿರ ಕಱಿಲೆಹಾಲ ವಿಷಕ್ಕೆ.

ಕಂ|| ಎಳನೀರುಂ [8]ಸಕ್ಕರೆ ಸೊರೆ |
ಯೆಲೆಯುಂ ಪ್ರತಿಪಕ್ಷಮಿಳಿಯೊಳಕ್ಕುಂ [9]ಪಾಲೊಳ್ ||
[10]ಕೆಳೆಗೊಂಡ ಕಱಿಲೆಯಿಂದ(ಹ)ಂ |
ಖಳತರಮೆನಿಸಿದ ಮದಕ್ಕೆ ಬುಧಜನ[11]ಮಿತ್ರಾ || ೧೫೦ ||

### ಬಿದಿರಕಱಿಲೆವಿಷಕ್ಕೆ.

ಕಂ|| †ಸೊಗಯಿಪ ಹಿತಕರಮಪ್ಪಾ |
ತಗಚೆ[12]ಗಡಂ ತಾಂ ವಿಪಕ್ಷಮಕ್ಕುಂ ಬಿದಿರಿಂ ||
ದೊಗೆದಿರ್ದ ಕಱಿಲೆಗಂ ತಾ |
ನಗಣಿತಗುಣನಿಲಯ [13]ಮಂಗರಾಜನ ಮತದಿಂ || ೧೫೧ ||

---

1. ವಿಷಂಗಳುಮಕ್ಕುಂ. 2. ಹುಣಿಸೆಯ (ಕ.ಗ.) 3. ಪಲೊಂದತಂ. 4. ಪೆಱವುಂಟೇ. 5. ....ಯೊಳು ಬೇವಿನೆಣ್ಣೆಗೆರೆ ಕುಣಕಕುಟಜ (ಗ,ತ); ಳೆಡೆವಿಡಿವಿವಿನೆಣ್ಣೆಗೆ—ಕೇಣಕ್ಕಾಡಲದೆಣ್ಣೆಗೆ (ಕ. ಖ.) 6. ಸತಾಣಿಸ (ಖ) 7. ಕಣಲೆಹಾಲಿಂಗೆ (ಘ), ಬಿದಿರಕಱಿಲೆಗೆ (ಖ). 8. ಸಕ್ಕರೆಯೆಲೆಯುಂ ಪ್ರತಿಪಕ್ಷ (ಖ) ಸೊಲೆಯೆಲೆ (ಘ) 9. ಪಾಳ್ಪಳೆಲೆಗೊಂಡ ಕಳಿಲಿಯಿಂದಹಬಳತರಮೆನಿಸಿದ್ದ (ಗ) 10. ಗೆಳೆಗೊಂಡ (ಕ) 11. ವಿನುತಾ (ಖ) 12. ಗದಂತಾಂ. 13. ನೆನಿಪಮಂಗನಮತದಿಂ (ಖ) (ತ)

* ಟೀಕಾಪ್ರತಿಯಲ್ಲಿ ಎಣ್ಣೆಯೊಂದನ್ನೇ ಇಟ್ಟುಕೊಂಡು ಸಬ್ಬಸೀಗೆಯೂ ಎಣ್ಣೆಗೆ ಉಪವಿಷ ಎಂದು ಅರ್ಥ ಬರೆದಿದೆ. ಸಬ್ಬಸೀಗೆಗೆ ಎಂದಿಲ್ಲ ಹಾಗೆ ಒಂದನ್ನೇ ಗ್ರಹಿಸಿದರೆ ಇಲ್ಲ. ಈ ಶಿರೋಲೇಖನವು ಇರ ಬೇಕಾದುದಿಲ್ಲ. ಇದು (ತ) ಪ್ರತಿಯಲ್ಲಿಮಾತ್ರವಿದೆ.

† ಇದು (ಗ) ಪ್ರತಿಯಲ್ಲಿಲ್ಲ.

## ಜೋಳದ ವಿಷಕ್ಕೆ.[1]

ಕಂ|| ಸಲೆಮರಿಚ ನಾಗರಂಗಳ |
[2]ನಳೆಯಿಂ ಕೊಳಲಧಿಕಮಪ್ಪ ಜೋಳದ [3]ಸೊಕ್ಕಂ ||
[4]ತೊಲಗಿಸುಗುಮಖಿಳವಿದ್ಯಾ |
ಜಲನಿಧಿಯೆಂದೆನಿಪ ಮಂಗರಾಜನ ಮತದಿಂ || ೧೫೨ ||

ವರಮೇಘ ಶುಂಠಿ ಸೈಂಧವ |
ಮರಿಚಂ ಮಾಗಧಮಿವೆಲ್ಲಮಂ ತಕ್ರದೊಳಂ ||
ಬೆರಸರೆದು [5]ಕುಡಿಸೆ ಜೋಳದ |
ಕರಮರಿದೆನಿಸಿದ ವಿಷಂಗಳಂ [6]ಸಂಹರಿಕುಂ || ೧೫೩ ||

## ಸಾವೆಯ ವಿಷಕ್ಕೆ[7]

ಕಂ|| ಅಲಸದೆ [8]ಯಗಸೆ ಕಷಾಯದ |
ಜಲಮಂ ತ್ರಿಕಟುಕದ ಸಿಂಧುವಾರದ ಯುತದಿಂ ||
ಘಳಿಲನೆ ಕುಡುವುದು ನರರೊಳ್ |
ನೆಲಸಿದ ಸಾವೆಯ ಮದಂಗಳಂ ಸಂಹರಿಕುಂ || ೧೫೪ ||

## ರಾಗಿಯ ವಿಷಕ್ಕೆ.[9]

ಮ|| ಲಶುನಂ ನಾಗ[10]ರ ಹಿಂಗರಿಷ್ಟಮಿನಿತಂ ಕೂಡಿಟ್ಟು ಮತ್ತಂ ಕ್ರಿಯಾ |
ಕುಶಲಂ ಭಾವಿಸೆ ದುಗ್ಧದಿಂ[11]ದತಿವಚಾಸಂಯೋಗದಿಂದೀಗೆ ವೈ ||
ದ್ಯಶತಂಗಳ್ ಪೆಱವೇಕೆ [12]ರಾಗಿಯ ವಿಷಂ ಕೆಯ್ಕೊಂಡು ಬಿಡ್ದಂಗೆ ತ |
ತ್ಪ್ರಶಮಂ ತಾನಿದು ಸಾಲ್ಗುಮೊಂದೆ ಬಗೆಯಲ್ ಶ್ರೀಮಂಗ [13]ರಾಜೋಕ್ತಿಯಿಂ|| ೧೫೫||

ಕಂ|| ವರಕೋಷ್ಠರಾಮಠಂಗಳ |
ನರೆದೊಂದಾಗಿರಲು ಪಾಲೊಳೀವುದು ಮತ್ತಂ ||
ಪರಿಹರಿಪುದಾಕ್ಷಣಂ ತಾಂ |
ಧರೆಯೊಳ್ ರಾಗಿಯ ವಿಷಂಗಳಂ ಗುಣನಿಲಯಾ || ೧೫೬ ||

1. ಜೋಳದಸೊಕ್ಕಿಂಗೆ (ಖ) 2. ನನೆಯಿಂ (ಖ) 3. ಸೊಕ್ಕಿಂ, ಜೋಳದಮದಮಂ (ಘ) 4. ತೊಳಗಿಸುಗುಂ (ಗ) 5. ಕುಡಿಯೆ (ಖ), ಕರದುರಿದೆನಿಸಿದ (ಕ) 6. ಪರಿಹರಿಕುಂ (ಖ) 7, ಸಾವೆಯಸೊರ್ಕಿಂಗೆ. 8. ಮಸಗೆಯ ಕಷಾಯಜಲ (ಖ), ಅಲಸಗಸೆಕಷಾಯದ (ಘ), ಲಲಸದೆಮಲಸಂದಿಯ ಕಷಾಯಂ ರಜನಿಮ ತ್ರಿಕಟುಕದ ಸಿಂಧುವಾರದ ಯುತದಿಂ (ಘ), ಅಲಸದೆಮುಗಸಗೆಯ ಕಷಾಯಂ ಜಲಮಂ(ತ)—ಸಾಸವೆಯ. 9. ರಾಗಿಯಸೊಕ್ಕಿಂಗೆ, ರಾಗಿಯಮದಕ್ಕೆ. 10. ರಮಿಂಗರಿಷ್ಟ (ಗ) 11. ದಲೆವಭಾಗಂಸಂ (ಕ), ದತಿದಭಾಸಂ (ಖ), ದರೆವಚಾ (ಗ) ದರಿವಜಾ (ಖ) 12. ದಾನಿಯ (ಖ) 13. ಮಂಗನಿಷ್ಠೋಕ್ತಿಯಂ.



## ನವಣೆಯ ವಿಷಕ್ಕೆ.[1]

ಕಂ|| [2]ಇರದಟ್ಟಹತ್ತುವಂ ನಾ |
ಗರಮುಂ ಹೆದ್ದುಂಬೆಯೆಂಬಿವಂ ತಕ್ರದೊ[3]ಳಿಂ ||
ತರೆ(ರ)ದೀಗೆ ನವಣೆಯಿಂದಂ |
ಪೊರೆದ ವಿಷಂ ತೀರ್ಗುಮೆಂದನಮಲಚರಿತ್ರಂ || ೧೫೭ ||

## ಬರಗಿನ ; ಹಾಕರದ ವಿಷಕ್ಕೆ.

ಕಂ|| ಬರಗಿನ ವಿಷಕ್ಕೆ ಕುಂಬಳ |
ದ ರಸಂ [4]ತಾನಕ್ಕುಮುಪ[5]ವಿಷಂ ಕೋದ್ರವದಿಂ ||
ಪೊರೆದ ವಿಷಂ ಪರಿಹರಿಪುದು |
ಮರಿದೇ ಕೂಶ್ಮಾಂಡರಸ [6]ಗುಡಾನ್ವಿತಪಾನಂ || ೧೫೮ ||

ಮರಿಚಂ [7]ಕುಂಬಳದೆಲೆಯುಮ |
ನರೆದ ರಸಂ ಸಿಂಧುಜಾತಮಂ ಕೂಡಿ ಬಱಿ ||
ಕ್ಕಿರದೀಂಟಲ್ ಹಾರಕ್ಕಿನ |
ಪಿರಿದೆನಿಪ ವಿಷಾಪಹರಣಮಕ್ಕು ಮಮೋಘಂ || ೧೫೯ ||

## ಕಂಬುವಿನ ವಿಷಕ್ಕೆ.

ಕಂ|| ಕೊಂಬುದು ಕಟುಕತ್ರಯಮುಂ |
ಜಂಭೀರದ ರಸಸಿತ [8]ಪ್ರಯುಕ್ತ [9]ಮದೇಂ ಮೇಣ್ ||
ನಿಂಬೆಯ ರಸದೊಡ [10]ನಿಂಗುಂ |
ಕಂಬುವಿನ ವಿಷಾಪಹರಣಮಕ್ಕುಮಮೋಘಂ || ೧೬೦ ||

## ಗೋಧಿಯ ವಿಷಕ್ಕೆ.[11]

ಕಂ|| ಇರೆ[12]ಮುಳ್ಳುಸೌತೆ ನುಗ್ಗಿಯ |
ವರಬೀಜಂ ಸೈಂಧವಾನ್ವಿತಂ ಮೇಣ್ ಕೊತ್ತುಂ ||
ಬರಿ ತಕ್ರಂ ಕುಡೆ[13]ಗೋಧಿಯ |
ಗರಳಕ್ಕುಪವಿಷಮಿದಲ್ತೆ ಸುಜನ[14]ವರೇಣ್ಯಾ || ೧೬೧ ||

1. ನವಣೆಯಸೊರ್ಕಿಂಗೆ (ಖ). ನವಣೆಗೆ (ಕ) 2. ಕಿ(ತಿ)ರಿದೊಟ್ಟೆ (ಕ) ಯಿರದಟ್ಟೆಹತ್ತು (ಗ), 3. ಳಂಕರದೀಗೆ (ಖ), ತರದೀಗೆ (ಗ) 4. ತಾನದುಹಾಂಪೊರಕ್ಕುರೆದವಿಷಂ (ಖ), ತಾನಕ್ಕುಮುಪವಿಷಂ ಹಾರಕಿನೊಳ್ (ಕ),. ಹರಿಪುದಿದರಿದೇ (ಕ) 5. ವಿಷಂ ಹಾರಕ್ಕುಂ (ಗ) ....ಪುದು ಅರೆದು ಕೂಷ್ಮಾಂಡ (ಗ) 6. ಗುಣಾನ್ವಿತ, ಗುಣಾನ್ವಿತದಾನಂ (ಖ) 7. ಕುಂಬಳದೇಳೆಯುಮ ನರೆದಂಸಸಿಂದಂಜಾತ (ಖ). ಕುಂಬಳದೆಲೆಯೊಳ್ ಪೊರೆದರಸಂ (ಘ) ಮುರಿದರಸಂಸಿಂಧು (ಕ), ದೆಲೆಯಂದರಸಂ—ಹಾರಮು(ದ)ಕ್ಕು ಮಮೋಘಂ (ಗ) 8. ಪ್ರಯುಕ್ತದೊಳಂ ಮೇಣ್ಣಿಂಬೆಯರಸದೊಡನಿಂಗಂ (ಖ) 9. ಮದಿಂ ಮೇಣ್ಣಿಂಬೆಯರಸದೊಡನಿಂಗುಂ (ಗ), 10. ನೀಗುಂ (ಕ) 11. ಗೋದೊಯ (ಖ) ಕುಡಿಗೋಧಿಯ 12. ಮುಳ್ಸಾತೆಯ. 13. ಕಡಲೆಯ ಗೋಧಿಯವಿಷಕ್ಕೆ (ಖ) 14. ಸುಜನೋತ್ತಂಸಾ (ಗ) ಸುಜನ ಶರಣ್ಯಾ.

*ಕಂ|| ಸಾರತರಂ ಗೋಧಿಯ ಮದ |
ವಾರಣಮಿದೆ ಸಾಲ್ವ ಮಿಂತಿದಂ ಕುಡು ನಯದಿಂ ||
ಜೀರಕಮಂ ತಕ್ರದೊಳಂ |
[1]ಭೋರುಹದಳನಯನನಮಂಗರಾಜನ ಮತದಿಂ || ೧೬೨ ||

## ಕಡಲೆಯ ವಿಷಕ್ಕೆ.

*ಕಂ|| ನಾಗರ ಹಿಂಗುಮನರೆದೊಂ |
ದಾಗಿರೆ ಕಾಸಿದ ಕಷಾಯದೊಳ್ [2]ಬೆರಸೀಯಲ್ ||
ಬೇಗಂ ತ್ರಿಕಟುಕಮನದುಂ |
ನೀಗುಗುಮರಿದೆನಿಪ ಚಣಕಮದಮನಮೋಘಂ || ೧೬೩ ||

## ಹೆಸಱು, ಉದ್ದು, ಅವರೆಯ ವಿಷಕ್ಕೆ.

ಕಂ|| [3]ಹೆಸಱಿಂ(ಗಂ) ಗಾಧಾತ್ರೀಫಲ |
ಮೆಸೆವಾ ವೃದ್ಧಿಂಗೆ ಮುಳ್ಳ[4]ಸೌತೆಯ ಮತ್ತಂ ||
ಪೊಸ[5]ಮಜ್ಜಿಗೆಯವರೆಗೆ ಹಿತ |
ಮುಸಮಾನ[6]ಗುಣಕ್ಕಿವರ್ಕೆ ಸರಿಮದ್ದೊಳವೇ || ೧೬೪ ||

ಪೊಸಶುಂಠಿ ಸೈಂಧವಂ ಮರಿ |
[7]ಚಸಮೇತಮಿವಕ್ಕುಮುಪವಿಷಂಗಳ್ ಧರೆಯೊಳ್ ||
[8]ಮಿಸುಪವರೆಯ ಮದಮಂ ಮಾ |
ಣಿಸುಗುಂ ಮನುಕುಲಲಲಾಮ[9]ಮಂಗನ ಮತದಿಂ || ೧೬೫ ||

ಸಿಂಧುಜರಾಮಠಮುಂ ಮೇಣ್ |
ಸೈಂಧವಮುಂ ಮರಿಚ[10]ಯುಕ್ತ ಮವರೆಯ[11]ಮದದಾ ||
ಬಂಧಮನ[12]ೞಿಗುಮವಶ್ಯಂ |
ಬಂಧುಜನಾನಂದನೆನಿಪ ಮಂಗನ ಮತದಿಂ || ೧೬೬ ||

## ಸೋಡವರೆಯ ವಿಷಕ್ಕೆ.

ಕಂ|| [13]ಸೋಡವರೆಯ ಸೊರ್ಕಿಂಗಂ |
ದಾಡುಳಿ(ಕ)ಚಂ ಮಧುಕ ಚಿತ್ರಮೂಲಮನಿಂಬಿಂ ||
[14]ದಾಡಿನ ಪಾಲೊಳ್ ಸೇವಿಸ |
ಲೋಡಿಸುಗುಂ ತದ್ವಿಷೋಗ್ರಮಂ[15]ಗುಣನಿಳಯಾ || ೧೬೭ ||

1. ವಾರಿಜದಳನಯನ (ಗ, ತ) ವಾರೆರುಜನವನ. 2. ಬೆರಸಿಯದಂ (ಕ) ಬೆರಸಿಂಗಂ (ಖ) 3. ಪೆಸಱಿಂಗೆ. ಧಾತ್ರಿಯಫಲಂ, ಪೆಸಱಿಂಗಂ (ಗ) 4. ಸವಿತೆಯಬೀರಂ (ಕ), ಸೌತೆಯಬಿತ್ತಂ (ಗ, ತ) 5. ಪಜ್ಜಿಗೆ. 6. ಗುಣಕ್ಕೆ ದೊರೆಸರಿ. 7. ಚಸಮವಕ್ಕುಪ (ಖ), ಚಸಹಿತಮಿವಕ್ಕುಂ (ಕ), ಮಿವಕ್ಕುಪ ವಿಷಂಗಳ್. 8. ಕಿಸುಪವರೆ. 9. ನನುಮತದಿಂದಂ. ಪುರುಜಿನಮತದಿಂ (ಘ) 10. ಯುಕ್ತಮಂ ವರೆಯುದಾದಾ (ಖ) 11. ಮದಮಂ (ಗ) 12. ನೞಿಗುಂ ಬುಧಜನ ಬಂಧುಜನ (ಗ) 13. ಸೋದಿಗೆ ಅವರೆಯುಸೊರ್ಕಿಂ | ಗಾಡುಳಿಕಂ (ಖ), ಸೋಡಿಗೆಯ (ಗ) 14. ದಾಡಿದ (ಗ) 15. ಗುಣಗಣ ನಿಳಯಾ (ಗ) * ಇವು " ಖ " ಪ್ರತಿಯಲ್ಲಿಲ್ಲ.



## ಅಲಸಂದೆಯ ವಿಷಕ್ಕೆ.

ಕಂ|| ತಿಲತೈಲ ಸೈಂಧವಂ ಪಿ |
ಪ್ಪಲಿ ಮರಿಚಂ ವಿಶ್ವ[1]ಮೆಂಬಿವಂ ಸಮನಾಗ ||
[2]ಲ್ಕುಳಿದು ಮೆಲುತ್ತಿರೆ ತೊಲಗುಗು |
ಮಲಸಂದೆಯ ಸೊರ್ಕು ಬುಧಲಲಾಮನ ಮತದಿಂ || ೧೬೮ ||

## ತೊಗರಿಯ ವಿಷಕ್ಕೆ.[3]

ಕಂ|| [4]ಎಳ್ಳೆಣ್ಣೆ ಮೆಣಸುಮಂ ಕುಡಿ |
[5]ಸಲ್ಲದೊಡಂ ತಕ್ರಲವಣಧಾತ್ರೀ[6]ರಸಮಂ ||
ಅಲ್ಲದೊಡೆ ವಿಶ್ವತಕ್ರಮ |
ನೊಳ್ಳಿದುದಂ [7]ಕುಡಲು ತೊಗರಿಯುದಿತಮದಣ್ಗಂ || ೧೬೯ ||

## ಹುರುಳಿಯ ವಿಷಕ್ಕೆ.[8]

ಕಂ|| [9]ಹುರುವಳ್ಳಿಯ ಸೊರ್ಕಿಂಗಂ |
ಹರೀತಕೀಯುಕ್ತಮೇಘನಾದಿಯುಮಂ ಮೇಣ್ ||
[10]ವರಹಿಂಗು ವಿಳಂ[11]ಗಮನಿರ |
ದರೆದೀಂಟಲ್ ಪಾಲೊಳುಪವಿಷಂ ತಾಂ ಧರೆಯೊಳ್ || ೧೭೦ ||

## ಬೆಲ್ಲದ ವಿಷಕ್ಕೆ.[12]

ಕಂ|| ಕುರುವಿಂದಂ ಕಟುಕತ್ರಯ |
ಮುರುಕಡಸಿಗೆಯೆಂಬಿವಂ ಸುನಿಂಬೆಯ ರಸದಿಂ ||
ದರೆದು ಕುಡಿಸಲ್ಕದಾಗಳೆ |
[13]ಪಱಿಗುಂ ಬೆಲ್ಲದ ವಿಷಂ ವಿದಗ್ಧಾಭರಣಾ || ೧೭೧ ||

## ವಿಷೂಚಿಗೆ ಅಂಜನ.

ಕಂ|| ಗಿರಿಕರ್ಣಿಕೆ ಕಟುಕತ್ರಯ |
ಮರಿಸಿನಮುತ್ತರಣೆ[14]ಯಕ್ಕಿ ಮಧುವೆಂಬಿವಱಿಂ ||
ವಿರಚಿಸಿದ ಗುಳಿಗೆಯಂ ತೇ |
ದಿರದೆಚ್ಚಲ್ ನಯನದೊಳ್ [15]ವಿಷೂಚಿಕೆ ಕಿಡುಗುಂ || ೧೭೨ ||

1. ಮಂಬಿಲಂ (ಖ) 2. ಲ್ತುಳಿದು. 3. ತೊಗರಿಯಸೊಕ್ಕಿಂಗೆ, 4. ಎಣ್ಣೆಯು ಮೆಣಸುಮು, ಮಂ (ಗ) 5. ಸಲ್ಲದೊಳಂ—ತ್ರಿಯರಸಮಂ—ತೊಗರಿಯತಿವಿಷಮಱಿಗುಂ (ಖ) 6. ರಸದಿಂದಲ್ಲ ದೊಡೆ (ಗ) 7. ಕುಡಿಯೆ (ಘ) 8. ಹುರುಳಿಯಸೊರ್ಕಿಂಗೆ. 9. ಹುರುಳಿಯಸೊರ್ಕಿಂಗಂ (ಕ) ಹುರಿವಳಿಯ (ಖ) 10. ವರಮಿಂಗು (ಗ) 11. ಗಮುಮಂ | ಭರದಿಂದಂ ಪಾಲೊಳೀಂಟಲುಪವಿಷ ಮಕ್ಕುಂ (ಖ) 12. ಬೆಲ್ಲದಸೊರ್ಕಿಂಗೆ (ಖ) 13. ಪರಿಹರಿಕುಂ ಬೆಲ್ಲದ (ಗ) 14. ತ್ತರಣೆ ಎಕ್ಕೆ (ಗ) 15. ವಿಷೋಚಿಕೆ (ಗ) ವಿಷು ಚಿಕೆಯಱಿಗುಂ (ಖ) ವಿಷೂಚಿಯಕೆಡಿಕುಂ (ತ)

**ಅಜೀರ್ಣಕ್ಕೆ.**

ಕಂ|| ಬಿಳಿಯ ಪುನರ್ನವಿ ಮೆಣಸಿಂ |
ಗುಳದ ಗು(ಳ)ಣಂ ಸೈಂಧವಂಗಳೆಂಬಿವ[1]ನಿಂಬಿಂ ||
ಪುಳಿನಿಂಬೆಯ ರಸ[2]ಮರ್ದಿತ |
ಗುಳಿಗೆಯನಿಸಲಮರಿಯಿಂದಜೀರ್ಣಂ ಕಿಡುಗುಂ || ೧೭೩ ||

**[3]ತಾಂಬೂಲ[4]ದ ವಿಷಕ್ಕೆ.**

ಕಂ|| [5]ಅರಿಸಿನಮುಮನಂಬಿಲದೊಳ್ |
ಬೆರಸೀವುದದಲ್ಲದಂದು ಮಳಯಜಮಂ ತಾಂ ||
ಬೆರಸಿದ ನೀರಂ ಕುಡುವುದು |
ಪಿರಿದೇಂ ತಂಬುಲದ [6]ಸೊರ್ಕದಾಗಳೆ ಕಿಡುಗುಂ || ೧೭೪ ||

**(ಅಡಕೆಯ ವಿಷಕ್ಕೆ.)**

ಕಂ|| ಘಟಿಲನೆ ಕೊಡುವುದು ನಿರ್ಮಳ |
ಜಳಮಂ ತಾಂಬೂಲದಳ [7]ಮದಂಗಳ್ ಕಿಡುಗುಂ ||
ಬೆಳುಗಾರಮಜ್ಜಿಗೆಗಳಂ |
ಬಿಳಿಯೆಲೆಯಂ ಕುಡುವುದಡಕೆಯೊಗರ[8]ವಿಷಕ್ಕಂ || ೧೭೫ ||

**ತಾಂಬೂಲದೆಲೆಯ [9]ವಿಷಕ್ಕೆ.**

ಕಂ|| ಬೆರಸಿ ಬೆಳುಗಾರಬೆಣ್ಣೆಯೊ |
[10]ಳರೆದೇಲಕ್ಕಿಯುಮನಿತ್ತೊಡೇಂ ನಿಲ್ಗುಮೆ ಪೇಟಿಲ್ ||
ಪರಿಕಿಸಲೆ ನಾಗವಳ್ಳಿ(ಲ್ಲಿ)ಯ |
ಗರಳಂ ಕವಿಕುಲಸರೋಜಭಾಸ್ಕರಮತದಿಂ || ೧೭೬ ||

**ಸುಣ್ಣದವಿಷಕ್ಕೆ.[11]**

ಕಂ|| *[12]ತಂಬುಲದ ಚೂರ್ಣದಧಿಕತೆ |
ಯಿಂ ಬಾಯ್ ನೆಱೆ ಬೆಂದು ಪುಗುಲ್ಗಳಾದೊಡ[13]ದುಂ ತಾಂ ||
[14]ಪಂಬಲಿಸದೆ ಪಲವಂ ತಾಂ |
ನಂಬು ದಿಟಂ ತೈಲವೊಂದ[15]ಱಿಂದಂ ಕಿಡುಗುಂ || ೧೭೭ ||

---

1. ನಿಂಬಿಂಫಳಿನಿಂನಿರ್ಮಲಜಲಮಂ ತಾಂಬೂಲದ ಮದಮದಾಗಳೆಕಿಡುಗುಂ (ಖ) (ಈ ಪಾಠದಲ್ಲಿ ಗ್ರಂಥಪಾತವಿದೆ) 2. ಮುರ್ದಿರಗುಳುನೆಯನೆ (ಘ) ರಸಮರ್ದಿಡುತಳಿಗೆ (ಖ) 3. ತಂಬುಲದಸೊರ್ಕಿಂಗೆ. 4. ಲದೆಲೆಯ. 5. ಅರಿಸಿನಮಂಕಳಿಯಿಂತಾನರೆ (ಖ,ತ) ಅರಿಸಿನಮಂಬಿಲದೊಳಂ (ಘ) 6. ಸೊರ್ಕನಾಗಳೆ (ಖ) 7. ಮದಮದಾಗಳೆ. 8. ಯೋಗರವಿಷಕಂ (ಖ) ದಡಕೆಯೋಗರವಿಷಮಂ (ಗ) 9. ಸೊರ್ಕಿಂಗೆ. 10. ಳರೆದಿಕ್ಕಿಯುಮನಿತ್ತೊಡಂ (ಖ) ನಿತ್ತೊಡಂ ನಿಲ್ಗುಂಕೇಳ್, ನಿತ್ತೊಡಂ ನಿಲ್ಗುಂ ಮೇಲ್ಪರಿಕಿಸಲು (ಗ) 11. ಸುಣ್ಣದಖಾರಕ್ಕೆ (ಖ) 12. ತಂಬುಲದಸುರ್ಣತೆಯಿಂ ನೆರೆಬಾಯಿಬೆಂದು. ಬಾಯ್ ಬೆಂದಲ್ಲಿ, ಬಾಯೊಳ್ ಪುಗುಲ್ಗಳಾದೊಡಂತಾಂಮತ್ತಂ|| ಅಂಬಿಲದೊಳೆಣ್ಣೆವೆರಸಂ (ಖ) 13. ಡಮುಂತಾಂ (ಖ) ಡಮುಂ ತಾನಂಬಿಲದೊಳೆಣ್ಣೆಬೆರಸಿರದಿಂಬಿಂ ಮುಕ್ಕುಳಿಸಿವುಗುಳಲಂತದು ಕಿಡುಗುಂ (ಗ) 14. ಪಂಬಲಿಸಲೇಕೆ ಪಲವಂ(ಖ) 15. ಱಿಂದವೆ (ಖ)

* ಅಂಬಿಲದೊಳೆಣ್ಣೆ ಬೆರಸಿರ |
ದಿಂಬಿಂ ಮುಕ್ಕುಳಿಸೆ ಪುಗುಱವಂತದು ಕಿಡುಗುಂ ||
ತಂಬುಲದ ಸುಣ್ಣದಧಿಕತೆ |
ಯಿಂ ಬಾಯಿಂ ಬೆಂದಲ್ಲಿ ಪುಗುಲ್ಗಳಾದೊಡವುಂ ತಾಂ || (ಎಂಬ ಪದ್ಯವಿದೆ) (ಖ)



**ಭಂಗಿ, ಸುರೆ, ಮಾಂಸದವಿಷಕ್ಕೆ.**

ಕಂ|| ಪಸುವಿನ ಪಾಲೊಳ್ ನೆಲ್ಲಿಯ |
ರಸಮಂ ರುದ್ರಾಕ್ಷೆಯಂ ಸಿತಂಬೆರ[1]ಸೀಂಟೆ ||
ಲ್ಕಸುವಳಿವ ಭಂಗಿಮಾಂಸ |
ಪ್ರಸರದ ಕಳ್ಳುಗಳ [2]ವಿಷಮನಲಿಗುಮವಶ್ಯಂ || ೧೭೮ ||

**[3]ಮದ್ಯದವಿಷಕ್ಕೆ.**

ಕಂ|| *ಆದರದಿಂದಣಿಲೆಯನು |
ಷ್ಣೋದಕದಿಂ [4]ಕಡೆದ ತಕ್ರದೊಳ್ ಬೆರಸಿಯದಂ ||
ಬಾದೇಂ [5]ಕುಡಿಸುಗೆ ಮದ್ಯದೊ |
ಳಾದ ವಿಷಂ ಕಿಡುಗುಮೆಂಬಿದೇಂ ಕೇವಳಮೇ || ೧೭೯ ||

ಸಿತಮಂ ಬೆರಸುಗೆ ಗೋವಿನ |
[6]ಘೃತದೊಳದಂ[7] ಮದ್ಯಪಂಗೆ ಕುಡೆ ತನ್ಮದಮಂ ||
ಕ್ಷಿತಿಯೊಳ್ ಶೀಘ್ರದೊಳಲಿಗುಂ |
[8]ಪ್ರತೀತಗುಣನಿಲಯರಾದ್ಯರನುಮತದಿಂದಂ || ೧೮೦ ||

**ಮದ್ಯಮಾಂಸನಾಯಹಾಲಿನ ವಿಷಕ್ಕೆ.[9]**

ಕಂ|| ಅರಿಸಿನಮಂ ಮೆಣಸಂ ಬೆರ |
[10]ಸರೆದೀವುದು ಮದ್ಯಮಾಂಸ [11]ದುರ್ಕ್ಕಲಿಗುಂ ಮ ||
ತ್ತರಿಸಿನವೊಂದಂ ಸೇವಿಸೆ |
[12]ಪಱಿಗುಂ ಶುನಿಯೆಸೆವ ದುಗ್ಧದಿಂದಹ ಗರಳಂ || ೧೮೧ ||

**[13]ಉರಿಸೆಕೆಯಲ್ಲಿ ಬೆಂಡಾದರೆ.**

ಕಂ|| ಅರಗು ನವನೀತಸಿತಮಳ |
ಯರುಹಂ ರುದ್ರಾಕ್ಷಿ[14]ಬಾಳಸೇವ್ಯ(ವೆ)ಗಳಂ ತಂ ||
ದರೆದೀಂಟಲುರಿಯ[15]ಸೆಕೆಯಿಂ |
ಪಿರಿದು ಬಲಿಲ್ದಂಗೆ ಬಾಧೆ ಪಿಂಗುಗುಮ[16]ಚಿರಂ || ೧೮೨ ||

---

1. ಸೀಯಲ್ | ಮಸುವಱವ(ಖ) 2. ಸೊರ್ಕನಲಿಗುಮವಶ್ಯಂ (ಕ) 3. ಸುರೆಯಸೊರ್ಕಿಂಗೆ (ಖ) 4. ತಡೆದ ತಕ್ರಮನಂತಂದೆಯ್ದೆ ಕುಡಿಯಿಸುಗೆ (ಗ) 5. ಕುಡಿಸಲ್ ಮದ್ಯದೊಳಾದಮದಂ—ಮಂಬುದಿದು (ಘ) 6. ಘೃತದಿಂದ ಮದಂವದನೆ ಮದ್ಯಮಂನೀವುದು—ಸದಮಳಗುಣನಿಳಯ (ಗ) 7. ಮಂತದನೆ ಮದ್ಯಪಗಮೀವುದು ತನ್ಮದಮಂ ಶೀಘ್ರದೊ (ಘ). ಮಂತದನೆ ಮದ್ಯಪಂಗೀವುದು ತದ್ವ್ಯಥೆಯಂ ಶೀಘ್ರ (ಖ) 8. ಸತತಂ ಗುಣನಿಲಯ ಮಂಗರಾಜನಮತದಿಂ (ಖ) 9. ನಾಯಣಲಿಂಗೆ. 10. ಸಿರದೀ (ಗ) ಸುನಿಯೆಸೆವದುದ್ಧದಿಂ (ಗ) 11. ದುಕ್ಕಳೆಗುಂ (ಖ) 12. ಪರೆಗುಂ (ಗ), ಪರಿಗುಂ ಮಾಂಸದಮದಂ ಭಿಷಗ್ವರಮತದಿಂ (ಖ) 13. ಉರಿತಾಕಿದವರಿಗೆ, ಬೆಂಕಿಯಸೆಕೆತಾಕಿದವರಿಗೆ. 14. ಬಾಳೆಸೇವಂತಿಗೆಯಂ (ಕ). ಸೇವ್ಯಗಳಂ (ಕ) 15. ದಿರದೀಂಟಲುರಿಯಸೇಖೆಯಿಂ (ಗ) 16. ಮುಚಿತಂ (ತ)

* ಇದು ಖ ಪ್ರತಿಯಲ್ಲಿಲ್ಲ.

ಕಂ|| ಜೀರಗೆ ಸೇವಂತಿಗೆ ಕ |
ರ್ಪೂರಂ [1]ಪಾಲಾಲಿಕಲ್ಲು ಭಸಿತಯುತಂ ಕ ||
ರ್ಪೂರ[2]ಶಿಲಾಧಾತುವಿವಂ |
ನೀರೊಳ್ ಕುಡೆ ಕಿಚ್ಚುನುರಿಯ ಬಱಲಿಕೆಯೞಿಗುಂ || ೮೩ ||

**ಹೊಗೆಯ ಬಾಧೆಗೆ.[3]**

ಕಂ|| ಉಪಯುಕ್ತಮಪ್ಪ ತಕ್ಕವ |
[4]ಲ ಪುಟ್ಟಯೇಲಕ್ಕಿ ತಗರ ಮಲಯಜಮಿನಿತಂ ||
ಸುಪರಿಮಿತದಕ್ಕಿಗರ್ಚಿನೊ |
ಳುಪಸೇವಿಸೆ ಪೊಗೆಯಿನೊಗೆದ ಬಱಲಿಕೆಯೞಿಗುಂ || ೮೪ ||

*ಮಲಯರುಹಂ ನಿಂಬದಳಂ |
ಜಲಧರನಿನದಂ ಸಮುದ್ರಫಲಮಿನಿತಂ[5] ತಂ ||
ಡುಲಜಲದಿಂದೀಂಟಿಸೆ ಪೊಗೆ |
ಬಳಸಿ ಬಱಲ್ದಂಗೆ ಹಿತಮದಕ್ಕುಮವೋಘಂ || ೮೫ ||

ಮೊಸರ ರಸ[6]ದಿಂದೆ ಮೇಣ್ ಕಿಱು |
ಕುಸಾಲೆಯಂ ಸಿಂಧುಜಾತದಿಂದೊಂದಿಸಿ ಕ ||
ಣ್ಗೆಸೆಯೆ ಪೊಗೆ ನಟ್ಟ[7]ಕಣ್ಗಳ್ |
ಮಸುಳಿಸಿದೊಡೆ ವಿಮಲತರಮು[8]ಮಕ್ಕುಮವೋಘಂ || ೮೬ ||

ತುಪ್ಪಮನೀಂಟುವು [9]ದಿನಿದಿಂ |
ದೊಪ್ಪುವುದಂ ತೊಡೆದು ನಾಸಿಕಾಂತರದೊಳಮಂ ||
ತಪ್ಪದುಮಂ ಕಣ್ಗೆಚ್ಚುವು |
ದೊಪ್ಪ[10]ದೊಳಡುವುದು ಬಱಿಕ್ಕೆ ಪೊಗೆಯಡುಗೆಗಳಂ || ೮೭ ||

**[11]ಬಿಸಿಲ ಬಾಧೆಗೆ.**

ಕಂ|| [12]ಪೊಸವೆಸರ್ಗಟ್ಟಿಳನೀರ್ ಪಾಲ್ |
ವಸುಧಾ[13]ಫಲಪಾನಮಾದೊಡಂ [14]ಪ್ರತ್ಯೇಕಂ ||
ಪಸಿಯೆಳ್ಳುಂ ಶರ್ಕರೆಯುಂ |
[15]ಬಿಸಿಲಿಂ ಬೆಂಡಾದವಂಗೆ ಹಿತಕರಮಕ್ಕುಂ || ೮೮ ||

---

1. ಪಾಲಾಡಿಕಲ್ಲು (ಖ) ಪಲಾಲಿ ಕಟ್ಟು (ಗ) 2. ಶಿಲಾಜಿತ್ತುವಿವಂ (ಖ) ವಿನಂ ನೀರೊಳ್ ಕುಡೆ ಕಿಚ್ಚುನುರಿಗಳಾಗಳಿಕಿಡುಗುಂ (ಗ) 3. ಹೊಗೆನಟ್ಟವರಿಗೆ (ಖ) ಹೊಗೆಯಿಂದ ನೇತ್ರೋಪದ್ರವವಾದರೆ (ಘ) 4. ಘಟ್ಟ (ಖ) ತಕ್ಕಪ್ಪವಲಘಟ್ಟ—ಮಿತಗಚ್ಚಿನೊ (ಗ) 5. ತಂದೊಳುಜಲದಿಂದೀಂಟಿಸೆ (ಘ) 6. ದಿಂದಮರೆ, ದಿಂದಮೆಕಿಱು (ಗ) (ಖ) 7. ಕಣ್ಗಳಸುಳಿಸಿದೊಡೆ ಕಣಿಸೆಯೆ ಪೊಗೆವೆಟ್ಟ (ಗ) (ಖ) 8. ಮದಕ್ಕು. 9. ದಿನಿತಂದೊ (ಗ) 10. ದೊಳಲ್ವಡು (ಗ) 11. ಬಿಸಿಲಿಂಬೆಂಡಾದವಂಗೆ 12. ಪೊಸವೆಸರ್ಗಯ್ದುಳನಿಪ್ಪಾಲ್ (ಖ) ರ್ಗಟ್ಟೆಳೆಗಪಾರ್ಲ್ವ (ಗ) 13. ವಸುಧಾತಳ (ಗ) 14. ಪ್ರತ್ಯಯಿಕಂ(ಗ) 15. ಬಿಸಿಸಿರೊಬೆಂಡಾ (ಖ)

* (ಖ) ಪ್ರತಿಯಲ್ಲಿ, ಈ ಪದ್ಯವೂ ಇದರ ಮುಂದಣಪದ್ಯವೂ ಹಿಂದು ಮುಂದಾಗಿದೆ.



ಕಂ|| [1]ನೀರುಮನಾ ಕಂಠಾಂತಂ ||
ಪೂರಿಸಿದ ನರಂಗಮಮರ್ದುವಳ್ಳಿಯ ಬೇರಂ ||
[2]ಚಾರಿಸಿ ಕಱಿಯಿಂ ಕುಡಿಸಲ್ |
[3]ವಾರಿ ಮರಱಿಳ್ದೊಡಲಾ ನರಂ ಜೀವಿಸುಗುಂ || ೮೯ ||

ಕುಂಬಾಱರ ತಿಗುರಿಯೊಳಿ |
ಟ್ಟಂಬಿಂನೊಳಂ ತಿರಿಪೆ ನೀರೊ[4]ಳಱ್ದುದರದೊಳಂ ||
ತುಂಬಿದ ನೀರಂ ಕಳೆ ಬಱಿ |
ಯಂ ಬಿಡದಗ್ನಿಯೊಳೆ ಕಾಸಿ ಮಾಱ್ಪುದು ಮರ್ದಂ || ೯೦ ||

ನಾಗರ[5]ಶಿವೆಯುಪ್ಪೆಂಬಿವ |
ನಾಗಳೆ ತಾಂ ಕೂಡಿ [6]ಕುಡಿಸುಗಂತಲ್ಲದೊಡಂ ||
ಬೇಗದೊಳಭಯಂ[7] ಮಥಿತದ |
ಯೋಗದೊಳಂ [8]ಹಿತಮದರ್ಕೆ ಕುಡುವುದು[9]ಮರ್ದಂ || ೯೧ ||

ಪೂಸುವುದು ಭಸಿತಮಂ |
ಕಾಸುವುದು ಶರೀರಮಂ ಬೆಮರ್ವನ್ನೆಗಮುಪ ||
ವಾಸಮಿರಿಸುವುದು ಹಿತಮು |
[10]ತ್ರಾಸಂ ನೀರ್ಗುಡಿದು ಬಸಿಱು ಬಾತನ ತನುವಂ || ೯೨ ||

**ಚರಾಚರಂಗಳ ವಿಷಕ್ಕೆ.**

ಕಂ|| ಕ್ಷೀರಾನ್ನ ಹೆಸರು[11]ಕಟ್ಟಿಳ |
ನೀರುಂ ಮೇಣ್ ಪಱ್ತಿಯೆಸಱು ಮೇಣ್ ಪುಣಿಸೆಯ ಪಣ್ ||
ಸಾರತರಸಿತಮಿವೆಯ್ದೆ ವಿ |
ಚಾರಿಸೆ ಕಳೆಗುಂ ಚರಾಚರಂಗಳ ವಿಷಮಂ || ೯೩ ||

*ಸಗಣದ ರಸಮಂ ಪುಣಿಸೆಯೊ |
ಳೊಗೆದಾ[12]ಪುಳಿಕ್ಕೈಪೆಸೊರೆ ಸುರಾಮಠಕುಟಜಂ ||
[13]ಬಗೆಗೊಳ್ವ ಕೈಪೆತರಂಗಳ್ |
ಜಗದೊಳ್ ಸ್ಥಾವರವಿಷಂಗಳಂ ಪರಿಹರಿಕುಂ || ೯೪ ||

---

1. ನಿರುಪಮನಾಕಂಕೊಷ್ಟಂ (ಕ) ನಿರುಪಮನಾಗಂ ಕೋಷ್ಠಂ (ಖ) ನೀರುಮನಾಕಂಕೋಷ್ಠಂ (ಘ) 2. ಬಾರಿಸಿ ಕಳೆಯಂಕುಡಿಸಲ್ (ಖ) 3. ವಾರಿಮರುಳ್ದೊ ನೀರೊಳುಬಿರ್ದವರಿಡಲಾ (ಖ) ವಾರಿಮರದೊಲೊದವಾನರಂ (ಘ) ವಾರ್ಯಮರಳ್ದೊಡಲಾನರಂ (ಗ) ಮರಿಯೆಮರುಳ್ದೊಡಲಾ (ಕ) ಮರಱಿಳ್ದೊಡಲಿನಾನರಂ 4. ಳದ್ದುದರ—ಮದ್ದಂ (ಗ) 5. ಸೇವೆಯಪೆಂಬಿವ. 6. ಕುಡಿಪುದಂ (ಘ) 7. ಮದನದ (ಗ) ಮದಿತದ (ಖ) 8. ಕುಡಲವಂಗೆ (ಕ) 9. ವಿನಯದಿಂ (ಕ) 10. ತ್ರಾಸಮಂ (ಗ) 11. ಕಟ್ಟೆಳನೀರುಂ (ಗ) 12. ಳೊಗೆಯಾ (ಗ) 13. ಬಗೆಗೊಳ್ಪಕವಿಕರಂಗಳಳಗದೊಳ್ (ಘ)

* ಇದೂ ಮುಂದಣಪದ್ಯವೂ ತ ಪ್ರತಿಯಲ್ಲಿಲ್ಲ,

ಕಂ|| ಧರೆಯೊಳ್ ಸಕಳಚರಾಚರ |
[1]ಗರಳಕ್ಕಂ ದಿವ್ಯಯೋಗಮೊಂದನೆ ಪೇೞ್ವೆಂ ||
ವರನೀಲಿಲೋಧ್ರಮಂ ಕುಡೆ |
ಹರನ ಗಳಂ [2]ಪೊರೆದ ಗರಳಮಾದೊಡಮುಱಿಗುಂ || ೧೯೫ ||

*[3]ಏಕೆ ಬಸವೞಿದು ಬಿರ್ದಿರ |
ಲೇಕಾಂತ [4]ವಿಷಪ್ರಹಾರಮೊಂದನೆ ಪೇೞ್ವೆಂ ||
[5]ಸೂಕರವಿಷ್ಠೆಯನೀಂಟಿಪು |
ದಾಕಲ್ಕಮನೆಸೆದು ನಸ್ಯಮಂ ಮಾೞ್ಕೆ[6]ಬುಧಂ || ೧೯೬ ||

ಉಬ್ಬಿರ್ದ ವಿಷಮರಳ್ವೊಂ |
ದುಬ್ಬೇಗದೊಳಂ ಬೞಲ್ದು ಬಿರ್ದ[7]ನರಂಗಂ ||
ಕಬ್ಬುಗಳಂ ಮೆಲಿಸುವುದೞಿ ||
[8]ನೆಬ್ಬಿಸುವುದದೊಂದೆ ರಾತ್ರಿಯೊಳ್ ಬುಧಬಂಧೂ || ೧೯೭ ||

ಮದನಫಲ ಲೋಧ್ರಮೆಂಬಿವ |
ನುದಕದೊಳಂ ಕುಡಿಯೆ ಕುಡುವುದಂತಲ್ಲದೊಡಂ ||
ಸದಮಳ ಬಜೆಯಂ ಕುಡಿಸ |
ಲ್ಕದು ತಾಂ ವಿಷ[9]ಮೋಗ್ರತರವಿಷಾಪಹಮಕ್ಕುಂ || ೧೯೮ ||

ವಿಷಮವಿಷಂಗಳ್ಗಂ ಪ್ರತಿ |
ವಿಷತಂತ್ರಮನಿಂತುಪೇೞ್ದೆನೆನ್ನ ಱಿವನಿತಂ ||
[10]ಸುಶಮಂ ತಾನೆನೆ ಕಂಟಕ |
ವಿಷಘ್ನಮೆಂ[11]ದೆನಿಪ ಮಂತ್ರತಂತ್ರಮನುಸಿರ್ವೆಂ || ೧೯೯ ||

**ಕಲ್ಲೊತ್ತಿಂಗೆ.**

ಉ|| ಕಲ್ಲುಗಳೊತ್ತಿ [12]ಕಾಲ್ಗಳುೞಿನೊಂದೊಡೆ ಬಾತು ಸಿಗುರ್ಗಳಿಂದೆ ನೋ |
ವುಳ್ಳೊಡೆ ಭಾನುದುಗ್ಧಮನೆ ಪೊಯ್ದು ಕರಂ ಸೊಗಸಪ್ಪ ಮಾೞ್ಕೆಯಿಂ ||
ಮೆಲ್ಲನೆ ಮೆಟ್ಟಿ ಕಾಯ್ದೊಲೆಯನಾಗಳೆ ಮಾಣ್ಗುಮದರ್ಕೆ ಬಾತುದುಂ |
ಮುಳ್ಳುಸಿಗುರ್ಗಳುಂ ಪೊಱಗಮುಚ್ಚಳಿಕುಂ ವಿಭುಮಂಗನುಕ್ತಿಯಿಂ || ೨೦೦ ||†

1. ಗರಕ್ಕಂ (ಖ) 2. ಪೊರೆದಗರಳಮಾದೊಡೆ ಮಾಣ್ಗುಂ (ಗ) 3. ಯಾಕೆಚ್ಚರೞಿದು ಬಿೞ್ದತ (ಖ) 4. ವಿಷಾಪಹಾರ (ಗ) 5. ಸೊಕವಿಷಿಯನೀಂಟಿ (ಘ) 6. ಬುಧಾ (ಗ) 7. ನರರ್ಗಂ. 8. ದೆಬ್ಬಿಪುದು, ದಂದೆಬ್ಬಿ (ಗ) ದದೊಂದು (ಕ) 9. ಮೋಗ್ರ ವಿಷಮನದು ಪರಿಹರಿಕುಂ (ಖ) 10. ಸುಷಮಂ (ಕ). ಚುಷಮಂ (ಘ) ತುಷಮಂ (ಗ) 11. ದೆನಿಪವರಂತಂತ್ರಮ (ಖ) ದೆನಿಪಮಂತತಂಮನು (ಗ) 12. ಕಾಲರುಳಿಗೊಂಡೊಡೆಜಾತು (ಗ) ಕಾಲಳುರೆನೊಂದೊಡೆ

* ವಿಷವಮನವಾಗಿ ಬೞಲಿದವಗೆ (ಖ) ಎಂಬ ಶಿರೋಲೇಖವಿದೆ (ತ)

† ಅದರ್ಕೆ ಮಂತ್ರಂ, ತದನಂತರಂ ಔಷಧಿಯಂ ಪೇೞ್ವೆಂ (ಗ).



**ವಿಷಮುಳ್ಳಿಗೆಮಂತ್ರ.**

(೧) ಓಂನ್ನಮೋಭಗವತೇ ಹರನಮುಳ್ಳಾದೊಡೇನು, ಹರಿಯಮುಳ್ಳಾದೊಡೇನು, ಇಂದ್ರ(ನ)ಮುಳ್ಳಾದೊಡೇನು, ಚಂದ್ರನಮುಳ್ಳಾದಡೇನು, [1]ರಾಹುಮುಳ್ಳಾದೊಡೇನು, *[ವಿಷನಾಗನ ಬೆನ್ನಮುಳ್ಳಾದೊಡೇನು] ಕೀತಡೆ ಬಾತಡೆ [2]ವಜ್ರದಕೊಡ(ಲಿ)ತಿಯಲು ಒಂಬತ್ತುವಡೆಯ [3]ಹೊಯ್ವೆ ಓಂ [4]ಜುಂಬಾಳು ಗುರುಪ್ರಸಾದ.

(೨) ಓಂ ನಮೋಭಗವತೇ [5]ಅಸಿಯಾಯುಷಂ ನಮಃ, ಪಾಂಡವರಯ್ವರುಂ ಸಂಧಿ(ಸೆ)ಸಿ ಬಂಧಿ(ಸೆ)ಸಿ [6]ಬಟ್ಟೆಯಲು ವೀಬಡಗ(ಲು)ಮುಂತಾಗಿ ಪೋಗುತ್ತೆ. [7]ಇಂದುವಿ(ಗೆ)ಂಬ ಹಂದಿಯಂಕೊಂದು, ಮುಱಿದ ಬಿಲ್ಲಂ ಸಂಧಿಸಿ ಮುಳ್ಳ(ಳ್ಳಿನ)ಮಂತ್ರವನಾರು ಬಲ್ಲರು ಯೆಂದರೆ ಯೆ(ರ)ಕಾ(ಟ)ತೆವೀರನೆಂಬ [8]ಕೂಸಂಬಲ್ಲ, [9]ಪಂಚಧಾರೆಯಮುಳ್ಳು, [10]ಪೊಸಧಾರೆಯಮುಳ್ಳು, ಕಾ(ಕೋ)ರೆಯಮುಳ್ಳುತಿ(ಕಿ)ವುರುಮುಳ್ಳು ನಾಲ್ಕು[11]ಧಾರೆಯಮುಳ್ಳು ವಿಷ(ಪರಿಹರಿಸಿ)ಶರೀರ ಶೂಲೆಯ ಕೆಡುಗು(ಗುಂ)ಗುರುಪ್ರಸಾದ.

ಕಂ|| ಈಮಂತ್ರಯುಗದೊಳೊಂದಂ |
ಪ್ರೇಮದೊಳೊಂಬತ್ತುಸೂೞ್ವರಂ ಮಂತ್ರಿಸಿ ನಿ ||
ಸ್ಸೀಮಂ [12]ಪುಣ್ಗಿಡೆ ಮರ್ದಂ |
[13]ಭೂಮಿಯೊಳಂ ಮುಳ್ಗಳುರ್ಚಿ ಬೀೞ್ಗುಮವಶ್ಯಂ || ೨೦೧ ||

**ವಿಷದಮುಳ್ಳುಸರಲ್ಗಳ್ಗೆ.**

ಕಂ|| †ಕುರುಟಗೆಯ ಬೇರ್ಗಳಂ ಪು |
ಣ್ಗರೆದಿಕ್ಕಲ್ [14]ಮೆಯ್ಯೊಳುಡಿದ [15]ಮುಳ್ಳುಂ ಸರಲುಂ ||
ತ್ವರಿತದೊಳೆ ಬೀೞ್ಗುಮೆಂದಂ |
ಪರಮಶ್ರೀಪಂಚಗುರು ಪದಾಂಬುಜ [16]ಮಧುಪಂ || ೨೦೨ ||

ಸುರಪತಿ[17]ಯಾಸೆಗೆ ಮುಖಮಾ |
ಗಿರುತುಂ [18]ಮೆಲ್ಕಿಱಿವ ಕೋಣನೊಪ್ಪುವ ಕಿವಿಯೊಳ್ ||
ಪೊರೆದಿರ್ಪ [19]ಕೊಗ್ಗಿಯಂ ತಂ |
ದಿರ[20]ದಿಕ್ಕುಗೆ ಪುಣ್ಗೆ ಮುಳ್ಳು [21]ಬೀೞ್ಗುಮವಶ್ಯಂ || ೨೦೩ ||

1. ರಾಹುವಿನನಾಗನ ಚೆನ್ನುಮುಳ್ಳಾದೊಡೇನು ರಾಹಿನನಾಗನಬೆನ್ನ (ಗ) (ಘ) 2. ಜನಕೊಡತಿ(ಖ) ಪೊಜನಕೊ (ಗ) 3. ಹುಯೇಹೊವ್ವೆ (ಘ) ಕೋಟಿಯ ಹುಯಿವೆಬಜುಂ (ಖ) 4. ಜುಂಬಾಳಿಂಗೆ (ಘ) ವೊಜುಂಬಾಳಿ (ಗ) 5. ಅಸಿಲಿರಸಾನಮಃ (ಖ) ಅಸಿ ಆಉಸಾನಮಃ (ಘ) ಅಸಿ ಆವುಷಂ (ಗ) 6. ಬಟ್ಟೆಯಲುರಿಯೆ. 7. ಇಂತೆಂದುವಿನೆಂಬ (ಘ) ಇಂದುಂಬಹ (ಖ) 8. ಕಂಸಬಲ್ಲ (ಖ) ಕೂಸು ಬಲ್ಲ (ಘ) ಎರಕಾಟಿಯ ವೀರನೆಂಬ ಕೂಸ (ಗ) 9. ಪಂಚಮ (ಘ) 10. ಕೊರೆಯಮುಳ್ಳು ತಿವುರು ಮುಳ್ಳುನಾಲ್ಕು (ಘ) 11. ಧಾರೆವಿಷಸರಿನಿ ಸೂಲೆಕಿಡುಗು ಗುರುಪ್ರಸಾದ (ಘ) ಸರಿನಿಶೂಲೆ (ಗ) 12. ಪುಣ್ಗೆ ಮರ್ದಂ ನೋವಿಲ್ಲಂ (ಗ) 13. ನೋವಿಲ್ಲಂ (ಕ) 14, ಕ್ಕಲ್ಕೆಯೊಳೂಡಿದ ಮುಳ್ಳುಂಶರಳುತ್ವರಿ (ಗ) 15. ಮುಳ್ಗಳ್ ಸರಲ್ಗಳ್ (ಖ) 16, ಭೃಂಗಂ (ಖ) 17. ಯಾಶಾಮುಖ. 18. ಮೆಲಕಿಱುವ (ಖ) ಮೆಲ್ಕಱುದ (ಕ) ಮೆಲುತಿರುವ (ಗ) 19. ಕುಗ್ಗಿಯಂ (ಗ) ಕೊಳ್ಳಿಯಂ (ಖ) 20. ದಿಕ್ಕಲ್ಕೆಳೆ ಮುಳ್ಳು (ಘ) 21. ಬೀೞ್ಗೆ ವಶ್ಯಂ (ಗ)

* (ಖ) ಪ್ರತಿಯಲ್ಲಿಮಾತ್ರವಿದೆ ರಹಿನನಾಗನ (ಖ)

† ಮುಳ್ಳುಘಾಯಕ್ಕೆ (ಘ)

ಕಂ|| ಇಂದನ ಕಂದಮು [1]ನಾಜ್ಯದೊ |
ಳೊಂದಿಸಿ ಕಟ್ಟುವುದು [2]ಪುಣ್ಣೊಳಲ್ಲದೊಡಂ ತಾ ||
ನಂದಿಂದ್ರವಾರುಣಿಯುಮಂ |
ತಂದಿ[3]ಕ್ಕಲ್ ಮುಳ್ಳು[4]ಸರಲ್ಗಳುಂ ಪೊಱಮಡುಗುಂ || ೨೦೪ ||

ಮರಿಚಂ [5]ಸುಣ್ಣಮಿವೆರಡುಮ |
ನರೆದರ್ಕಕ್ಷೀರಸಂಯುತಂ [6]ಪುಣ್ಣೊಳಿಡಲ್ ||
ಸರಳುಂ ಮುಳ್ಳುಂ [7]ಪೊಱಮಡು |
ಗಿರದೆ * ಶರೀರಂಗಳಿಂದಮಿದು ಕೇವಳಮೇ || ೨೦೫ ||

ಲೊಕ್ಕಿಯ ಬಂದಣಿಗೆಯುಮಂ |
ಚಕ್ಕನೆ [8]ಪೂಸಲ್ಲದಿರ್ದೊಡೆಕ್ಕೆಯ ಪಾಲಂ ||
[9]ಪೊಕ್ಕಿರಲೆರೆ ನಿಬಿಡಮೆನಲ್ |
ಸಿಕ್ಕಿದ ಮುಳ್ಳಲಗು ಪಾದದಿಂ ಪೊಱಮಡುಗುಂ || ೨೦೬ ||

ನವಣೆಯ ಪಿಟ್ಟನೊಳಂ ಕೊಂ |
ಡವಯವದಿಂ [10]ನೆಗ್ಗಲೆಸೆವ ಕೊನರಂ ಬೆರಸಂ ||
ತವನೆ[11]ತೊಳಸಡುವುದುಣ್ಬುದು |
ಜವದಿಂ ಪೊಱ[12]ಮಡುವುದಲಗು ಮುಳ್ಳುಂ ತನುವಿಂ || ೨೦೭ ||

ಶರಪುಂಖಿಯ ಬೇರಂ ತಂ |
ದರೆದೆಣ್ಣೆ[13]ಯೊಳಯ್ದು ಕೂಡಿ ಕುಡಿಸುಗೆ ಮತ್ತಂ ||
ತಿರದೆ ಪೊಱಮಡುಗುಮಂಬುಗ |
[14]ಳರಿದೆನಿಸಿದ ಮುಳ್ಗಳುಂ ಬುಧಾಂಬುಜಮಿತ್ರಾ || ೨೦೮ ||

ನೆಗಱ್ದ [15]ವಿಷಕಂಟಕಮುಮಂ |
ತೆಗೆದು ಪುಣ್ಗಳ್ಗೆ ನೀಲಿ ಪಱಿತ್ತಿಯ[16]ಕೊನರಂ ||
ತೊಗರಿಯ [17]ಕೊನರಂ ಮಗುೞ್ದಿ |
ಕ್ಕುಗೆ ಮಾಣ್ಗುಂ ಮಂಗವಿಭುವಿನನುಮತದಿಂದಂ || ೨೦೯ ||

1. ನಾಸ್ಯದೊ (ಘ) 2. ಪುಣ್ಗಮಲ್ಲಂ (ಖ) 3. ತಂದಿಕ್ಕಲ್ಕಲ್ಪರಳ್ಗಳುಂ (ಘ) 4. ಶರಳುವೋಪು ದವಶ್ಯಂ (ಗ) 5. ಪುಣಮಿವೆ (ಖ) ಸುಣ್ಣಮುಮೆರಡ (ಗ) 6. ಪುಣ್ಣೊಳಿದ್ದ ಶರಳುಂ (ಗ) 7. ಶೀಘ್ರಂ ಪೊಱಮಡುಗುಂ ಮಂಗರಾಜ ನನುಮತದಿಂದಂ (ಘ) 8. ಪುಲ್ಲದಿದೊಡೆಕ್ಕೆಯಪಾಲಂ ಪೊಕ್ಕಿರಲೆರೆನಿಬಿಡ ವೊಲು ಸಿಕ್ಕಿದ (ಗ) 9. ಪೊಕ್ಕಿರದೆರೆ ಘಾಯದೊಳಂ। ಪೊಕ್ಕಿರ್ದಾಸರಲುಮುಳ್ಗಳುಂ (ಘ) 10. ನೆಲೆಸಿವ (ಗ) 11. ತೊಳಸುವುದು ಮೆಲ್ವುದು ಜನದಿಂದಂ ಮುಳ್ಳುಸರಲ್ಗಳುಂ ಪೊಱಮಡುಗುಂ (ಘ) 12. ಮಡುಗುಡಲಗು (ಗ) 13. ಯೊಳಿಕೂಡಿ (ಗ) ದರೆದಿಕ್ಕೆಣ್ಣೆಯೊಳೆ ಕುಡಿಕೊಂಡದ(ಘ) 14. ಳರದೆನಿಸಿದ (ಗ) 15. ಉಪಕಂಟಕ ನೆಗಱ್ದಮುಳ್ಗಳ್ಗೆ (ತ) (ಗ) 16. ಕೊನರಂ ಮಗುೞ್ದಿಕ್ಕುಗೆಮಾಣ್ಗುಂ ತಾನಗಣಿತತಗುಣ ಮಂಗವಿಭುವಿನಮತದಿಂದಂ (ಘ) 17. ದಳಮಂ ಮಳ್ದಿಕ್ಕುಗೆ (ಗ) ಮೇಣಿಕ್ಕುಗೆ (ಖ)

* ಶರೀರದೆಸು ಮಂಗರಾಜನಮತದಿಂ



## ನಂಜುಮುಳ್ಳ ವಿಷಕ್ಕೆ.[1]

ಕಂ|| ಗರಳಂ ಬೆರಸಿದ[2]ಮುಳ್ ನಡೆ |
ಸಿರೀಸಮಂಕೋಲೆ ನಿಂಬಮಿಾಶ್ವರಿ ಪುಲಿಗಿಲ್ ||
ಸುರವಾರುಣಿ[3]ಗಳ ಸೊಪ್ಪಂ |
ನಿರಂತರಂ[4]ಬೇದುಕಟ್ಟುಗಂತಲ್ಲದೊಡಂ || ೨೧೦ ||

[5]ನೆಲಗೋಣಿ ಪು(ಹು)ಣಿಸೆ[6]ಪಾಪಟೆ |
ಹುಲಿಗಿಲ್ [7]ದೊಗ್ಗಳೆಯಹಱುಹೆ ಯೆಂಬಿವಱೆಲೆಯಂ ||
ಕಱಿಯೊಳುಱೆ ಕಾಸಿ ಕಟ್ಟಲ್ |
ತೊಲಗುಗು [8]ವೊದಱಿಸುವ ಮುಳ್ಳ ವಿಷಮೆನಿತನಿತುಂ || ೨೧೧ ||

ಇಂಬಿ[9]ನೊಳೀವುದು ತದ್ಭೂ |
ನಿಂಬಮುಮಂ [10]ಕೂಡಿ ತುಳಿದು ಪುಳಿಯೆನಿಸಿ[11]ಪ್ಪೊರ್ ||
ಳ್ವಂಬಿಲದೊಳ್ ಬೆರಸೀವುದ |
ದುಂ ಬಿಡದೊಳಱಿಸುವ [12]ನೋವನಾಗಳೆ ಕಿಡಿಕುಂ || ೨೧೨ ||

ಸುರದಾಳಿ ನೀಲಿ ಯಿಾಶ್ವರಿ |
ಸುರವಾರುಣಿ ಮೇಣ್ ಸುಗಂಧಿ [13]ವಿಷಮುಂಗುರಿಯಂ ||
ಗುರು ನಾಂಗುರಿಕಂ ಬಜೆ ಯಿವ |
ನರೆ[14]ದಿಂಬಿಂ ಪೂಸೆ ಕಂಟಕೋಗ್ರವಿಷಘ್ನಂ || ೨೧೩ ||

ಆವಾವ ಮುಳ್ಳು ನಟ್ಟೊಡೆ |
ತಾವುಂ ಮಾಡುವುದದರ್ಕೆ [15]ಯವಱವಱೆಲೆಯಂ ||
ಭಾವಿಸಿ ತಂಡುಲಜಲದಿಂ |
ದೀವುದು [16]ಮಿಕ್ಕುವುಮದೇಂ ವಿಚಾರಿಸಲಿವಱಿಂ || ೨೧೪ ||

1. ನಂಜುಮುಳ್ಳಿಂಗೆ. ವಿಷದಮುಳ್ಳಿಂಗೆ. 2. ಮುಳ್ಳಿರೆ (ಖ) ಪುಳ್ನಡೆ (ಗ) 3. ಯರಿಸಿನಗಳನಳಿಯಿಂದರೆದಿಕ್ಕಿಲ್, ಪರಿದಿಕ್ಕಲ್ ತದ್ವಿಷಂಗಳಂ ಪರಿ(ಸಂ)ಹರಿಕುಂ (ಖ) 4. ಬೆಂದು (ಗ) ಬೇದು (ಖ) 5. ನೆಲಗೊನ್ನಿಡುಣಿಸೆ—ದೊಗ್ಗಳೆಹರುಹೆ—ಯೊಳುಂಬೆಕಾಸಿ—ಮೆನಿತೆನಿತಂ(ಗ) ನೆಲಗೊಳ್ಳಿ (ಖ) 6. ಪಾಪಟ (ಖ) 7. ದೊ(ಡೊ)ಗ್ಗಗೆ (ಖ) 8. ವೊದ್ದಱಿಪ (ಖ) 9. ಳಿಲವದತ್ಸಗ್ಭೂನಿಂಬ (ಖ) (ಗ) 10. ಕೂಡಿತುಳಿದು ಪುಳಿಯೇಱಿದುರ್ಷಾಣ್ಣಂಬುವಿನೊಳರೆದುಕಟ್ಟಲ್ । "ಕಿಂಬಹುನಾ" ಕಂಟಕೋಗ್ರವಿಷಮಿರದೞಿಗುಂ (ಘ), ಕೂಡಿಳಿದು ಪುಳಿಯೆನಿಪಣಪ್ಪಳಂಬಿಲವೆ ಬೆಂದಲುದ ಬಿಡದೊಳಱುಸುವನೋವದಾಗಳೆಕಿಡುಗುಂ (ಖ) 11. ಸಿಪ್ಪೊರ್ಳಂಬಿಲದೊಳುಬೇದುಗಟ್ಟಲ್ ಬೆಂಬಿಡಿಸುಗುನೋವದ್ಯೆದದಾಗಳೆ ಕೆಡುಗುಂ (ಗ) ಪ್ಪೊರ್ಲಂಬಿಲದೆಬೆಮಂ ಕಟ್ಟುವುದುಂಬಿಡ (ಘ) 12. ನೋವದಾಗಳೆ ಕಿಡುಗುಂ (ಘ) 13. ನೆಲಗೋಧಿಸುನಾಂಗುಲಿಕಂಬಜೆಯಿವನರೆದಂಬಿಲದಿಂ ಪೂಸಲ್ಕೆ. 14. ದಿಂಬಿನೊಳಂಪೂಸೆ ಕಂಟಕೋಗ್ರವಿಷಘ್ನಂ (ಗ) ದಂಬಿಲದಿಂಪೂಸಲ್ಕೆ (ಘ) 15. ಯವರೆಲೆಯಂ ಸದ್ಭಾವಿಸಿ ತಂಡುಲಜಲದಿಂದೀವುದು ಮಿಕ್ಕೌಷಧಗಳೇ ದೊರೆಯಿದಱೊಳ್ (ಘ) ಮಿಕ್ಕೌಷಧಂ ವಿಚಾರಿಸಿತಿವಱಿಂ (ಗ) 16. ಮಿಕ್ಕುವುದದಂ (ಕ) ಮಿಕ್ಕಾದದಂ (ಖ)

### ಶಸ್ತ್ರಾದಿಗಳ (ಘಾ)ಗಾಯಂಕ್ಕೆ.

*ತರಳ|| [1]ವಿವಿಧಶಸ್ತ್ರದ ಘಾಯದೊಳ್[2] ಸಲಿಸಂತೆ ತುಪ್ಪ[3]ದಿನಟ್ಟು ಗೋ |
ದುವೆಯ ಪಿಟ್ಟನೆ ವಿಷ್ಣುವಲ್ಲಭೆ ಹೊನ್ನಗನ್ನೆಯ ನಕ್ಕೆ ಸಂ ||
ಭವಿಸೆ[4]ಲಜ್ಜರಿಕಾಖ್ಯಮುಂ ಶರಪುಂಖಿ ವಾಯಸಜಂಘೆ ಯಿಂ(ಯೆಂ) |
ತಿ(ಬಿ)ವಱಿಕೊಳಾವುದನಾದೊಡಂ [5]ತೊಡೆಗಲ್ಲಿ ತದ್ಘೃತಪಾನದಿಂ || ೨೧೫ ||

ಮಾಲಿನಿ|| [6]ಪುರುಜಿನವಚನಾಂಭೋರಾಶಿಯೊಳ್ ತಮ್ಮಧೀಮಂ |
ದರಸುಮಥನಜಾತಂ ವೈದ್ಯಶಾಸ್ತ್ರಾಮೃತಂ ತ ||
ದ್ವರಮುನಿಪತಿಯಪ್ಪೀ ಪೂಜ್ಯಪಾದೋಕ್ತಿಯೊಳ್ ಸ್ಥಾ |
[7]ವರವಿಷಹರಮಂ ಸಂಕ್ಷೇಪದಿಂದೊಪ್ಪೆ ಪೇೞ್ದೆಂ || ೨೧೬ ||

### — ಗದ್ಯ —

ಇದು
ಸಕಲವಿದಮಲ ಜಿನೇಂದ್ರೋಕ್ತಸಿದ್ಧಾಂತಪಯಃಪಯೋನಿಧಿಪಾರಗ
ಶ್ರೀಪೂಜ್ಯಪಾದಮುನೀಂದ್ರ ಚಾರುಚರಣಾರವಿಂದ
ಗಂಧಗುಣಾನಂದಿತಮಾನಸಂ
ಶ್ರೀಮದ[8]ಖಿಲಕಲಾಗಮೋತ್ತುಂಗ
[9]**ಮಂಗವಿಭು**
ವಿರಚಿತಮಪ್ಪ

## ಖಗೇಂದ್ರಮಣಿದರ್ಪಣದೊಳ್

[10]ಸಕಲಸ್ಥಾವರವಿಷವಿಶೇಷ ವಿಪಕ್ಷಾಭಿಧಾನಂ
ದ್ವಿತೀಯಾಧಿಕಾರಂ.

---

1. ತೀವಿದ (ಗ) 2. ಸಲೆಸಂದು (ಘ) ಸಲಿಪಂತೆ (ಗ) 3, ದೊಳಟ್ಟು (ಘ) 4. ಲಜ್ಜಲಿಕಾಖ್ಯ (ಘ) 5. ತೊಡೆಯಲ್ಲಿ ತದ್ಘೃತಪಾಕದಿಂ (ಘ) ಳಾವುದಾದೊಡಂತೊಡೆವಲ್ಲಿ ತದ್ಘೃತಪಾನದಿಂ(ಗ) 6. ಪಂಕಜಿನವಚನಾಂಭೋಜರಾಶಿಯೊಳ್ಸಂಮದಿಮುಂದರ ಸುಮದನಜಾತಂ — ತದ್ವಮರೀಪತಿಯುಪ್ಪ — ಸ್ಥಾವರಂಗಳ ಹರಣಮುಂ ಸಂಕ್ಷೇಪದಿಂದೊಪ್ಪಿಪೇೞ್ವೆಂ (ಗ) 7. ವರಗರಳಹರಂ (ಖ) ವರಗರಳಹಮಂ (ಘ) 8. ದಖಿಳಾಗಮೋತ್ತುಂಗ (ಖ) 9. ಮಂಗವಿರಚಿತ (ಖ) 10. ಸ್ಥಾವರವಿಷಚಿಕಿತ್ಸಾಪಕ್ಷಾಭಿಧಾನಂ (ಖ) ಸ್ಥಾವರವಿಷ ಪ್ರತೀಕಾರಂ ದ್ವಿತೀಯಾಧಿಕಾರಂ. (ಖ) ವಿಷಸಂಗ್ರಹಾಧಿಕಾರಂ ದ್ವಿತೀಯಾಶ್ವಾಸಂ(ಗ)

* ಮಾಲಿನೀವೃತ್ತ (ಗ, ಘ) (ಇದು ಲೇಖಕನ ಪ್ರಮಾದವಿರಬಹುದು)

ಶ್ರೀ ಪಂಚಗುರುಭ್ಯೋ ನಮಃ.*

# ತೃತೀಯಾಧಿಕಾರಂ

### †ಜಂಗಮವಿಷಂಗಳ್.

ಶಾ|| ಶ್ರೀಮನ್ನಾಗನರಾಮರೇಂದ್ರ [1]ನಮಿತಶ್ರೀಪಾದಪದ್ಮದ್ವಯಂ |
ಕಾಮೋಗ್ರಾಹಿವಿಷಾಪಹಾರವಿಲಸಧ್ಯಾನೈಕಗಮ್ಯಂ ಬುಧ ||
[2]ಕ್ಷೇಮಂ ಶಾಂತರಸಾಮೃತಾಬ್ಧಿ ಯನಘಂ ಸಂಸಾರದುಃಖಾಪಹಂ |
[3]ಸೋಮಾರ್ಕದ್ಯುತಿಕೋಟಿ ಪಾರ್ಶ್ವಜಿನಪಂ ರಕ್ಷಿಕ್ಕೆ ಭವ್ಯರ್ಕಳಂ || ೧ ||

ಕಂ|| ಪಿ(ಇ)ಂತುಸಿರ್ದೆಂ ಸ್ಥಾವರವಿಷ |
ಸಂತತಿಗುಪವಿಷಮ[4]ನಿಂತು ಜಂಗಮವಿಷದೊಳ್ ||
ಶಾಂತರಸಮಯಜಿನೇಂದ್ರಮ |
ತಾಂತರದೊಳ್ ತಿಳಿದು ಪೇೞ್ವೆನೆಂಟಂಗಮುಮಂ || ೨ ||

ವ|| [5]ಅಂತು ಗ(ಗಾ)ರುಡಮತದೊಳೆಂಟಂಗವಾ(ವಾ)ವುದೆಂದೊಡೆ.

ಶಾ|| ಈ ಭೂಲೋಕದೊಳೊಪ್ಪೆ ಸಂಗ್ರಹ[6]ಮುಮಂಗನ್ಯಾಸರಕ್ಷಾವಿಧಿ |
ಸ್ತೋಭಂ ಸ್ತಂಭವಿಷಪ್ರಹಾರಮಧಿಕಂ [7]ಚೋದ್ಯಾಖ್ಯಮುಂ ಮತ್ತೆ ಸ ||
ರ್ಪಾಭಂ[8]ತಾಂ ಖಟಿಕಾಫಣಿಪ್ರಥಿತದಂತೋ[9]ದ್ದಂಶಮೆಂಬಿಂತಿವಂ |
ತಾಭವ್ಯೋತ್ತಮನಪ್ಪ ಮಂಗವಿಭುವಿಂ [10]ದುಕ್ತಂಗಳೆಂಟಂಗಮುಂ || ೩ ||

ವ|| ಅದೆಂತೆಂದೊಡೆ—

### (೧) ಸಂಗ್ರಹಂ

ಕಂ|| ತನುವಿಂ ದಷ್ಟನ ಜೀವಂ |
[11]ವಿನಷ್ಟಮೆನಲೆಯ್ದಿ ಪೋದುದೊ ಮೇಣ್ [12]ಬಿಡದಾ ||
ತನುವಿನೊಳಿರ್ದಪುದೋ ಎಂ |
ದು ನಿರೀಕ್ಷಿಪ[13]ಭೇದಮಲ್ತೆ "ಸಂಗ್ರಹ"ಮಕ್ಕುಂ || ೪ ||

---

1. ಮಹಿತ (ಗ) 2. ಕ್ಷೌಮಂ (ಗ) 3. ಸೋಮಾರ್ಕಾಯುತಸನ್ನಿಭಾಂಗಜಿನಪಂ (ಖ) 4. ನಿನ್ನು (ಖ) 5. ಅದೆಂತೆಂದೊಡೆ (ಖ) ಗರುಡಮತ ಎಂಟಂಗಗಳುಂಟು ಅವಾವುವೆಂದೊಡೆ (ಗ) 6. ಸಮಂಗನ್ಯಾಸ (ಖ, ಗ) 7. ದೊದ್ಯಾಖ್ಯ (ಗ) 8. ತಾಂಫಣ(ಣಿ) ಪ್ರಥಿತ (ಘ) ಖಟಿಫಣಿಪ್ರಥಿತದಂತದಂಶ (ಘ) 9. ದ್ವಂಶಮೆಂಭೀತಿವೆಂತಾಭವ್ಯೋ (ಗ) 10. ದುತ್ತುಂಗಳೆಂಟಂ (ಗ) 11. ವಿನಾಶಮೆನಲೆಯ್ದಿ (ಖ) 12. ಪುದಿದಾ (ಗ) 13. ಭೇದಸಂಗ್ರಹಮೆನಿಕುಂ (ಗ) ತಾನೆಸಂಗ್ರಾಹಮೆನಿಕುಂ(ಖ) ಭೇದಮೆಯ್ದಿ.

* ಶ್ರೀ ಶಂಕರಾಯನಮಃ (ಘ) ಖಗೇಂದ್ರಾಯನಮಃ (ತ) † ಸರ್ಪಹಷ್ಟ (ಖ)

(೨) ಅಂಗನ್ಯಾಸಂ.

ಕಂ|| ಆಸರ್ಪದಷ್ಟನಂಗದೊ |
ಳೋಸರಿಸದೆ ಯಮೃತಬೀಜಮಂತ್ರಾ[1]ಕ್ಷರವಿ ||
ನ್ಯಾಸಂಮಾಱ್ಪುದೆ "ಅಂಗ |
ನ್ಯಾಸ"ಮೆನಿಕ್ಕುಂ ವಿವೇಕಕುವಲಯಚಂದ್ರಾ || ೫ ||

(೩) ರಕ್ಷಾವಿಧಿ. (೪) ಸ್ತೋಭಂ.

ಕಂ|| ದಷ್ಟಪುರುಷಂಗೆ ರಕ್ಷೆಯ |
ನಿಷ್ಟಮೆನಲ್ ಮಾಱ್ಪುದದುವೆ "ರಕ್ಷೆ"ಯೆನಿಕ್ಕುಂ ||
ದಷ್ಟಂಗಾವೇಶಮುಮಂ |
ಸ್ಪಷ್ಟಮೆನಲ್ ತಂದು[2]ನುಡಿಸುವುದೆ ತಾಂ "ಸ್ತೋಭಂ" || ೬ ||

(೫) ಸ್ತಂಭಂ. (೬) ನಿರ್ವಿಷಂ.

ಕಂ|| ವಸುಧೆಯೊಳಂ ವಿಷಮಂ ಸ್ತಂ |
ಭಿಸುವುದೆ ತಾಂ "ಸ್ತಂಭ"ಮೆಂಗೆ ಮತ್ತಾ ವಿಷಮಂ ||
ದೆಸೆಗಿಡಿಪುದದುವೆ "[3]ನಿರ್ವಿಷ" |
ಮೆ ಸೂನೃತಂ ಮಂಗ[4]ವಿಭುವಚೋವಿಲಸನದಿಂ || ೭ ||

(೭) ಚೋದ್ಯಂ. (೮) ಖಟಿಕಾಫಣೀಂದ್ರಂ.

ಕಂ|| [5]ಪತ್ರಾಚ್ಛಾದನದಿಂದಂ |
ಚಿತ್ರತೆಯಂ ಮಾಱ್ಪವದುವೆ "ಚೋದ್ಯ"ಮೆನಿಕ್ಕುಂ ||
[6]ಶತ್ರುಗೆ ಲಿಖಿತಫಣೀಂದ್ರನ |
[7]ಗಾತ್ರಂ "ಖಟಿಕಾಫಣೀಂದ್ರ" ನೆಂಬುದು ಧರೆಯೊಳ್ || ೮ ||

[8]ಇಂತೆಂಟಧಿಕಾರಂಗಳ |
ನೆಂತುಂ ಪೆಸರ್ಗೊಂಡೆನವಱ ವಿವರಣೆಯಂ ಪೇ ||
ಳ್ದಂತಿರಲಱಿವುದು ಚರವಿಷ |
ಸಂತತಿಯೊಳ್ ಫಣಿಯ [9]ಕುಲಬಲಂಗಳ ತೆಱದಿಂ || ೯ ||

ವ|| ಅದೆಂತೆಂದೊಡೆ.

*ಕಂ|| ಅಂಗಂಗಳೊಳಗೆ [10]"ಸಂಗ್ರಹ" |
ಮಿಂ ಗಣನೆಗೆ ಮುಖ್ಯಮದನೆ ಮೊದಲೊಳ್ ಪೇೞ್ವೆಂ ||
ತುಂಗಗುಣರಱಿಯೆ ಮುಗುಳಿಯ |
ಮಂಗವಿನಿರ್ಮಿತಖಗೇಂದ್ರ ಮಣಿದರ್ಪಣದೊಳ್ || ೧೦ ||

1. ಕ್ಷರದವಿನ್ಯಾಸ (ಖ) ಕ್ಷರದಿಂನ್ಯಾಸಂ (ಘ) 2. ಕುಡಿಸು (ಖ) 3. ನಿರ್ವಿಷತಮೆಸೂನೃತಂ (ಖ) 4. ರಾಜನನುಮತದಿಂದಂ. 5. ಪತ್ರಚ್ಛಾದನ (ಖ) 6. ವಿಭೀತ ಫಣೀಂದ್ರಗಾತ್ರಂ (ಖ) 7. ಗೋತಂ, ಘಾತಂ ಕಟಕಾ (ಘ) 8. ಇಂತುಟಧಿ (ಖ) 9. ಕುಲಬಲಂಗಳನುಸಿರ್ವೆಂ (ಘ) 10. ಸಂಗ್ರಹಮಿಂ ಗಱನೆಗೆಮುಖ್ಯ (ಗ) ಭಾವಿಸೆ ಸಂಗ್ರಹಣಮೇಮುಖ್ಯ (ಘ) * ಈ ಪದ್ಯವು ಕೆಲವುಪ್ರತಿಗಳಲ್ಲಿಲ್ಲ.



ಕಂ|| ಸಂಗಳಿಸಿದಹಿಗಳೆಸೆವ ಕು |
ಲಂಗಳುಮಂ ದೇಶಕಾಲಭೇದಂಗಳುಮಂ ||
ತುಂಗಗುಣನಿಳಯ ಮುಗುಳಿಯ |
ಮಂಗಬುಧೋತ್ತಮನೆ ಬಲ್ಲ [1]ನೀ ವಸುಮತಿಯೊಳ್ || ೧೧ ||

ಅನುಪಮನನಂತ ಕುಳಿಕಂ |
ಘನವಾಸುಕಿ ಶಂಖಪಾಳ ತಕ್ಷಕನಿಳೆಯೊಳ್ ||
ವಿನುತಮಹಾಪದ್ಮಕನೆಂ |
ದೆನಿಪಂ ಕರ್ಕೋಟಕಾಖ್ಯನುಂ ಪದ್ಮಕನುಂ || ೧೨ ||

ಇಂತಷ್ಟವಿಧದ [2]ಫಣಿಗ |
ಳ್ಗಿಂತುಂ ಕುಲಭೇದ[3]ವಿಷವಿಶೇಷಂಗಳುಮಂ ||
ಮುಂತೆನಿಸುವ ಭೂತಂಗಳ |
ದಂತಕ್ರಮ ಧಾತುಚೇಷ್ಟೆಯಂ [4]ವಿವರಿಸುವೆಂ || ೧೩ ||

ವ|| ಅಷ್ಟಕುಲಸರ್ಪಂಗಳ ಲಕ್ಷಣಮಂ ಪೇೞ್ವೆಂ[5].

ಚಂ|| ಸಿರದೊಳೆ [6]ನಾಸಿಕಂಬರಮೆನಲ್ ಕರಮೊಪ್ಪುವ ನಾಗಚಿಹ್ನ[7]ಮಂ |
ತರದೊಳೆ ಪೇೞ್ದಪೆಂ ಸಿತಸರೋಜಮನಂತನ ಚಿಹ್ನಮಕ್ಕುಮು ||
ಕ್ಷರಮೆನೆ ಶಂಖಮಿ(ದ)ಂತೆಸೆಗುವೊಪ್ಪುವ ಶೇಷಶಿರೋವಿಭಾಗದೊಳ್ |
ಪರಿಕಿಸಲು(ಷ್ಪ)ತ್ಪಲಂ ಮೆಱೆವ ವಾಸುಗಿಗೆಂದಱಿ ನೀಂ ಧರಿತ್ರಿಯೊಳ್ || ೧೪ ||

ಮ||ಸ್ರ|| ನಿರುತಂ ಕಾರ್ಕೋಟಗಂಗಂ ತ್ರಿಣಯನಮೆಸೆಗುಂ ಸ್ವಸ್ತಿಕಂ ತಕ್ಷಕಂಗೊ |
ಪ್ಪಿರೆ ಚಂದ್ರಾರ್ಧತ್ರಿಶೂಲಂ ಸ್ಫುರಿಸಲಹಿಯದೇ ಶಂಖಪಾಳಂ ಮಹಾ[8]ಪ ||
ದ್ಮರೆ ರಾಜಾವರ್ತಬಿಂದುಪ್ರಥಿತಮೆನಿ[9]ಕುಮಾ ಪೃಷ್ಠದೊಳ್ ಪದ್ಮಪೃಷ್ಠಾಂ |
ತರ[10]ದೊಳ್ಪಂಚಾಂಗಬಿಂದೂತ್ಕರಮೆಸೆವರುಣ[11]ಪ್ರಾಯದಿಂ ತೋರ್ಕುಮಲ್ತೇ|| ೧೫||

**ಅಷ್ಟನಾಗಂಗಳ ಭೂತಚತುಷ್ಟಯಂಗಳನ್ವಯಂ.**

ಕಂ|| ಧರಣಿಜಲ ವಹ್ನಿಮಾರುತ |
ವರಭೂತಚತುಷ್ಟಯಂಗಳನ್ವಯವಿಷಮಂ ||
ಧರಿಸಿಪ್ಪೆರಡೆರಡಹಿ[12]ಯು |
ದ್ಧರವೀರ್ಯಮನಱಿಯೆ ಪೇೞ್ದಪೆಂ ಕ್ರಮದಿಂದಂ || ೧೬ ||

*ಕಂ|| ಹುತವಹನಂಶಕದ ವಿಷಂ |
ಸಿತವರ್ಣಮನಂತಕುಳಿಕರುಂ ದ್ವಿಜಕುಲದರ್[13] ||
ಮತಿಯುಂ [14]ಕಣ್ಣುಂ ಕಿಡುಗುಂ |
ಕ್ಷಿತಿಯೊಳ್ ದಷ್ಟಂಗೆ ವಮನಮಕ್ಕುಮದಾಗಳ್ || ೧೭ ||

1. ನಿವವಸುಮತಿ (ಖ) 2. ಫಣಿಗಳ್ಗಿಂತುಂ (ಗ) ಫಣಿಗಳುಮೆಂತುಂ (ಖ) ಫಣಿಗಳೆಯಂ (ಘ) 3. ವಿಷದ ಭೇದಂಗಳುಮಂ. 4. ವಿರಚಿಸುವೆಂ (ಖ) 5. ಅದೆಂತೆಂದೊಡಷ್ಟಕುಲನಾಗಂಗಳ ಲಕ್ಷಣಮಂ ಪೇೞ್ವೆಂ। ಅಷ್ಟಕುಲನಾಗಂಗಳ ಚಿಹ್ನೆ (ಖ) 6. ಕಾಸಿಕಂಬರ (ಖ) 7. ಮಂದರಮೆನೆ. 8. ಪದ್ಮಗೆ ರಾಜಾ (ಖ) 9. ಮೆನಿಸುವೀ (ಖ) 10. ದೊಳ್ಪಂದಾಗ ಬಿಂದೂತ್ಕರ (ಗ) 11. ಚ್ಛಾಯೆಯಿಂ (ಖ) 12. ಯುದ್ಧತ (ಗ) 13. ದುರ್ಮತಿಯುಂ (ಖ) 14. ಕರ್ಣಂ.
* "ಧರಣಿಜಲವಹ್ನಿಮಾರುತ" ಎಂಬೀ ಕ್ರಮವು ವಿವರಣದಲ್ಲಿ ತಪ್ಪಿದೆ.

ಕಂ|| ಧರೆಯಂಶಕದ[1]ವಿಷಂಗಳ್ |
ನಿರುತಂ ಪಾರ್ಥಿವಕುಲಂಗಳರುಣಚ್ಛಾಯಂ ||
ವರಶಂಖಪಾಳ ವಾಸುಗಿ |
[2]ಗರಳಗುಣಂ ಗುರು ಜಡತ್ವ ಹಿಮುಮೆನಿಸಿರ್ಕುಂ || ೧೮ ||

[3]ಮಾರುತನಂಶದ ವಿಷಮಂ |
ದಾರಯ್ವೊಡೆ [4]ವೈಶ್ಯವಂಶ ವರ್ಣಂ ಸ್ವರ್ಣಂ ||
ಚಾರುಮಹಾಂಬುಜ ತಕ್ಷಕ |
ರೋರಂತಿರೆ ಪಿಡಿಯೆ ತನುಮುಖದ್ಯುತಿ [5]ಕಿಡುಗುಂ || ೧೯ ||

ಸಲಿಲಾಂ[6]ಶಕಗರಳಮದೊ |
ಕ್ಕಲಿಗಂ ಕೃಷ್ಣಾಭ[7]ಮಲ್ತೆ ಕಾರ್ಕೋಟಕನುಂ ||
ವಿಲಸತ್ಪದ್ಮಂ ಪಿಡಿಯಲ್ |
ಸಲೆ[8]ಲಾಲಾಸ್ರಾವ ಗಳನಿರೋಧ(ನ)ಮುಮಕ್ಕುಂ || ೨೦ ||

ಅಷ್ಟನಾಗಂಗಳ ಕುಲಂ ಮತ್ತು ವರ್ಣಂ.

ಕಂ|| *ಶ್ವೇತಂ [9]ದ್ವಿಜಾತಿ ರಕ್ತೋ |
ಪೇತಂ ಕ್ಷತ್ರಿಯನೆ ವೈಶ್ಯನುಂ ಕನಕಾಭಂ ||
ಭೂತಳದಸಿತಂ ಶೂದ್ರಂ |
ಮಾತೇಂ ಜಾತಿಯೊಳೆ ನಾಲ್ಕು ನಾಗಕುಲಂಗಳ್ || ೨೧ ||

[10]ಕರಿದಱ ಕರ್ಕೊಟಪದ್ಮಂ |
ಪರಿಕಿಸೆ ಪಾಂಡುರಮು[11]ಮಕ್ಕನಂತಂ ಕುಳಿಕಂ ||
ವರಶಂಖಪಾಳವಾಸುಗಿ |
ಯರುಣಮುಮಾ [12]ಪದ್ಮತಕ್ಷಕಂ ಕನಕನಿಭಂ || ೨೨ ||

ಅಷ್ಟನಾಗಂಗಳಾಡುವಭೇದಂ.

ಕಂ|| †ಗಗನಮನಾಡಿಪ ನರನಂ |
ಯುಗಪಾರ್ಶ್ವಮನಿಳೆಯನೀಕ್ಷಿಸುತ್ತಾ[13]ಡುಗುಮಿಾ ||
ಜಗದೊಳ್ ವಿಜಾತಿಮೊದಲಾ |
[14]ಗಗಣ್ಯಮಾನಾಲ್ಕುಜಾತಿ ಫಣಿಕುಲ[15]ಮನಿಶಂ || ೨೩ ||

1. ವಿಷಮುದಾರ (ಖ) 2. ಗರಳಗುಣಗುರುಜಡತಪೆಳುಮೆನಿಕ್ಕುಂ (ಖ) 3. ಮಾರುತಂ ತವವಿಷಮುಂದಾ—ಚಾರುಮಣಿಹಾಂಬುಜ (ಗ) 4. ವೈಶ್ಯವಂಶನುಂ ಕನಕಾಭಂ (ಘ) 5. ಯೞಗುಂ (ಗ) 6. ಶದವಿಷಮುದೊ (ಕ) 7. ಮಂತೆ (ಕ) 8. ಲಾಲಾಸ್ರಾವಗಳನಿ (ಖ) ಸ್ರವಗಳ್ ನಿರೋಧಿ (ಘ) ಸ್ರವಗಳೊಳ್ ನಿರೋಧ (ಕ) ಲಾಲಾವಗಳನಿ (ಗ) 9. ದ್ವಿಜಾದಿ (ಗ) 10. ಕರಿದು ಕರ್ಕೋಟ (ಗ) 11. ರಮುವಕ್ಕನಂ ಕುಳಿಕಂ (ಗ) 12. ಶಂಖಪದ್ಮಕಂ. ಮಾಪದ್ಮರಕ್ಷಕಂ 13. ತ್ತಾಡಿಸುಗುಂ· 14. ದಗಣ್ಯಮಾನಾಲ್ಕುಕುಲದ (ಘ), ಲಾಗಣ್ಯಮಿಾನಾಲ್ಕು (ಗ) 15. ಮನಿತಂ.

* ಸರ್ಪಗಳ ಕುಲವರ್ಣ ಅಂತಿರ್ಪವಿಷ ವಿವರ (ಖ)

† ಸರ್ಪಂಗಳಾಡುವ ಭೇದದಂತಂಗಳ ವಿವರ (ಘ)



ವಿಷದ ಪಲ್ಗಳ್.

[1]ಕೇಳ ಯಮದೂತಿ ರಾಕ್ಷಸಿ |
ಕಾಳಿ ಕರಾಳಿಗಳೆ ನಾಲ್ಕುಮಕ್ಕುಂ ವಿಷದಂ ||
ಷ್ವಾಳಿಗಳುೞದಮರಕುಳ |
ವ್ಯಾಳರ್ ಜಯವಿಜಯರೆನಿ[2]ಪವರ್ ದಿವಸಂಸ್ಥರ್ || ೨೪ ||

[3]ಅಂತಾಜಯವಿಜಯಯುಗ |
ಕ್ಕೆಂತುಂ [4]ವರ್ತನಮದಿಲ್ಲಮಿಾ ಮೇದಿನಿಯೊಳ್ ||
ಸಂತತಮಾಶೀವಿಷಮೆನಿ |
[5]ಪಿಂತಿದು ಪೂರ್ವೋಕ್ತಶಾಸ್ತ್ರಸಂಪಾದನೆಯಿಂ || ೨೫ ||

[6]ಪೇೞಲಿವೇ [7]ಲಕ್ಷಣಮಾ |
ಭೀಳಕ್ಷತದಿಂದಮುೞಗೆ ಕಾಕಪದಸೃಣಿ ||
ಮೇಳದ ವೃತ್ತಂ ಚಾಪಂ |
ಕಾಳೀಪ್ರಮುಖಂಗಳಿಗೆ ಯಥಾಕ್ರಮದಿಂದಂ || ೨೬ ||

ವ|| ಆಕಾಳೀಪ್ರಮುಖಂ(ಗಳಚಿಹ್ನಂ)ಗಳಾವುವೆಂದೊಡೆ*

ಕಂ|| ಕಾಳಿ ಯಮದೂತಿ ಯೆಸೆವ ಕ |
ರಾಳಿ ವಲಂ ರಾಕ್ಷಸೀಪ್ರಮುಖ [8]ನಾಮದೊಳಂ ||
ಮೇಳಿಸಿ [9]ನಿಲ್ಕುಂ ವಿಷದಂ |
ಷ್ಟ್ರಾಳಿಗಳ [10]ವೞಾ ಕ್ಷತಂಗಳಕ್ಕುಂ ಕ್ರಮದಿಂ || ೨೭ ||

ಅಂತಲ್ಲದಂಕುಶಾ[11]ಕೃತಿ |
ದಂತಂ(ಯಿಂತಾಂ) ತಾಳುಗೆಯ ಮಧ್ಯ [12]ದಲ್ಲಿರ್ಪುದು ಕಾ[13] ||
ಲಂ ತಾನದು ಪೆಸರಿಂ ಸ |
ರ್ಪಾಂತಕ[14]ನೆಂಬಂಗಸಾಧ್ಯಮಂತದಱ ವಿಷಂ || ೨೮ ||

ಸ್ರ|| ಓರೊಂದಕ್ಕೊಂದೆ [15]ಪಲ್ಲಾ ಗಿರಲದಧಿಕರಕ್ತಾಭಮಾ ಪಲ್ ಕರಂ ತಾಂ |
ಘೋರಂ ತಾನಲ್ಲ [16]ದೊಂದೊಂದೆನಿಪ ಬೆಮರ ಬಿಂದೂದ್ಗಮಂ ನೀಲವರ್ಣಾ ||
[17]ಕಾರಂ ಮತ್ತೊಂದು [18]ಜಂಬೀರದ ಫಲಸದೃಶಂ [19]ಚಕ್ರಮೆಂತಿರ್ಪುದಂತಾ |
ಕಾರಂ ಕೇಳ್ ಮೂಱಱಂ ಕರ್ಚಿದೊಡದನಿೞಪಲ್ ವೈನತೇಯಂಗಸಾಧ್ಯಂ|| ೨೯ ||

1. ಕೇಳಿ, ಕೇಳೆ (ಕ) 2. ಲಿನಿಪರ್ದೇವಸಂಸ್ಥರು (ಖ) 3. ಪರ್ದಿಜಯ (ಗ) 4. ವರ್ತನದಿ ಮಿಾ (ಗ) 5. ಮಾತ್ರಿದಿವದೊಳಿರ್ಪಿಂತಿದು. 6. ಪೇೞಲಿವೆ ತತ್‌ಕ್ಷಣ (ಖ) 7. ಲಕ್ಷಣಮು ಕೇಳಕ್ಷತದಿಂದಮರಿಗೆಕಾತಿಪದಶ್ರುಣಿ (ಗ) 8. ನಾಳದೊಳಂ (ಖ) 9. ನಿಕ್ಕುಂ (ಗ) 10. ಳಿವರಕ್ಷರಂಗಳಕ್ಕುಂ (ಕ) ಳಿವರ ಭೇದಮಕ್ಕುಂ ಕ್ರಮದಿಂ (ಗ) ಭೇದಮಕ್ಕುಂ ಕ್ಷತದಿಂ (ಘ) 11. ಕೃತಿಯಿಂತಾಂ (ಘ) ಕುಶಾಗ್ರಕೃತಿದಂತಂತಾಳಿಯ (ಗ) 12. ದಲ್ಲಿಯಿರ್ಪುದು (ಕ) 13. ಕಾಲಾಂತಕನದು (ಘ) 14. ಮೆಂಬವಂಗಸಾ (ಗ) 15. ಸಲ್ಲಾಗಿರಲಧಿಕ—ಪಲ್ಗಳ್‌ಕರಂ (ಘ), ಓ ದರ್ಕೊಂದೆ—ದಧಿಕರಕ್ತಾಭಮಾಸಲ್ಕರಂ ತಾನಲ್ಲದಂದೊಸೆ—ದ್ಧಮಂ—ಜಂಬೂವರಫಲ (ಗ) 16. ದಂದೊಂದೆಸೆವ (ಘ) 17. ಧಾರಂ(ಖ) 18. ಜಂಬೂವರಫಲ (ಘ) 19. ಚಕ್ರದಂತಿರ್ಪುದು (ಖ)

* ಆಕಾಳಿಯ ಪ್ರಮುಖಂಗಳು ಚಿಹ್ನಂಗಳವಾವುವೆಂದಡೆ ಪೇೞ್ಸಿದೆಂತೆಂದೊಡೆ (ಗ)

### ಸರ್ಪಂಗಳ್‌ಕೊಳ್ವ ವಾರಕ್ರಮಂ.*

ಕಂ|| ಕುಳಿಕಂ ವಾಸುಗಿ ತಕ್ಷಕ |
ನಿಳೆಯೊಳ್ ಕರ್ಕೋಟಪದ್ಮಮಾ ಪದ್ಮಕನುಂ ||
ಸಲೆ ಶಂಖಪಾಳನೆಂಬಿವು |
[1]ಕೊಳುಗುಂ ರವಿವಾರಮಾದಿಯಾಗಿರೆ ಕ್ರಮದಿಂ || ೩೦ ||

ಆದಿಯ ದಿನದೊಳನಂತಂ |
[2]ಬಾದಿಪುದು ಪದಾಗ್ರಮಂ [3]ನಿದಾನಿಸಲದು ತ ||
ತ್ಪಾದಾಗ್ರ[4]ದೊಳಿರ್ಕುಂ ವಿಷ |
ಮಾದರದಿಂದಱಿಗೆ ಮಂಗ[5]ವಿಭುವಿನ ಮತದಿಂ || ೩೧ ||

ಶಶಿವಾರದಂದು ವಾಸುಗಿ |
ಯೆಸೆ[6]ವಷ್ಟಮಯಾಮದಲ್ಲಿ ಸಿರಮಂ ಪಿಡಿಗುಂ ||
ಪ್ರಸರಂ[7]ಬೆತ್ತ ವಿಷಂ ತಾ |
ನಸಹ್ಯ[8]ಮಿರ್ಪೆಡೆಯದಲ್ತೆ ಜಾನುಸ್ಥಾನಂ || ೩೨ ||

ಭೂಮಿಜನೊಳ್ ತಕ್ಷ[9]ಕನ |
ಕ್ಷೇಮಕರಂ ಪಿಡಿಯೆ ಬಲದ ಮುಂಗೆಯ್ಯೆಡೆಯಂ ||
ಯಾಮಂ ಸಾರ್ಧಮದಾಗ |
ಲ್ಕೇಮಾತೋ ಕಟಿಯೊಳಿರ್ಕು [10]ಮಾವಿಷಮುದಿತಂ || ೩೩ ||

ಬುಧನೊಳ್ ಕಾರ್ಕೋಟಕನುಂ |
[11]ಕ್ಷುಧಾತುರಂ ಬಂದುಪಿಡಿವುದುಂ ಕಿಱುದೊಡೆಯಂ ||
[12]ನಿಧನವದಾಗಿಸುವ ಗುಣಂ |
ವಿಧಿಯಿಂದಂ ನಾಭಿಯಲ್ಲಿ ತದ್ವಿಷ[13]ಮಿರ್ಕುಂ || ೩೪ ||

ಗುರುದಿನದೊಳ್ ಪದ್ಮಕನುಂ |
ಭರದಿಂ ಬಂದೆರಡುಜಾವವರೆಗಂ ಪಿಡಿಗುಂ ||
ನಿರುತಂ ದಕ್ಷಿಣಜಂಘೆಯ |
ನುರುವಿಷಮಿರ್ಕುಂ ಶಿರಃಪ್ರದೇಶ[14]ದೊಳೆ ದಿಟಂ || ೩೫ ||

---

1. ಕೊಳ್ಳುಗುಂ (ಗ) 2. ಕಾದಿಪುದಪ್ಪುದಾಗ್ರ (ಘ) 3. ದಾನಿಸಿನೋಡಲ್ ಪಾದಾಗ್ರ (ಖ) 4. ಗ್ರಮಂದೊಳಿರ್ಕುಂ (ಘ) 5. ರಾಜನ (ಖ) 6. ನಷ್ಟಮಿವಾಮದಲ್ಲಿ ಶಿರಮಂಪಿಡಿದುಂ ಪ್ರಸರಂದೆತ್ತ ವಿಷಂ ತಾನಸಹ್ಯಮಿಪ್ಪಡೆಯಲ್ಕೆ (ಗ) 7. ಬೆತ್ತವಿದಂತಾಕಸಹ್ಯಮಾಪಿಡಿಯದತ್ತೆ (ಖ), ಪೆಸರಂಬೆತ್ತ ವಿಷಂ (ಘ) 8. ಮೊಪ್ಪೆಡೆಯದಲ್ತೆ (ಘ) 9. ತಕ್ಷಕಕ್ಷೇಮಂಕರ. 10. ಮಾವಿಷಮುದದಿಂ (ಗ) 11. ಕ್ಷವಾತುರಂ (ಘ) 12. ನಿಧನನಾಗಿಸುವ (ಖ) 13. ಮಕ್ಕುಂ (ಗ) 14. ದೊಳಾಗಳ್ (ಘ) ದೋಳಿಂಟಂ (ಗ)

* ವಾರಕ್ರಮು. (ಘ. ತ)



ಕಂ|| ಆಪತ್ಕರನೆಂಬೊಂದು ಮ |
ಹಾಪದ್ಮಂ ಶುಕ್ರವಾರದೊಳ್ ಬೆನ್ನಂ ತಾಂ ||
[1]ಕೋಪದೆ [2]ಯಾಮತ್ರಯದೊಳ್ |
ತಾಪಿಸುಗುಂ ಪಿಡಿಯೆ ತಲೆಯೊ[3]ಳತಿವಿಷಮಿರ್ಕುಂ || ೩೬ ||

ಮಂದನೊಳೆ ಶಂಖಪಾಳಂ |
ಸಂದೆಯಮೇಂ ಜಾನ(ವ)ದಲ್ಲಿ [4]ಹಗಱಿಂ ಪಿಡಿಗುಂ ||
ಬಂದಿರ್ಕುಂ ಕಣ್ಣೊಳ್ ವಿಷ |
[5]ಮೆಂದಱಿ ನೀಂ ಮಂಗರಾಜನನುಮತದಿಂದಂ || ೩೭ ||

[6]ಅಱುವತ್ತು ಮತ್ತೆತೊಂಬ |
ತ್ತಱಿಕೆಯದಯ್ವತ್ತು ಮತ್ತೆ ನಾಲ್ವತ್ತಕ್ಕುಂ ||
ನೆಱೆ[3][7]ಯೆಂಭತ್ತೆಪ್ಪ(ತ್ತು೦)ತ್ತೆನೆ |
ನಿಱಿಗೆಯ[8]ಮೂವತ್ತುಮಿ(ಮ)ವಱ ಘಳಿಗೆಗಳಕ್ಕುಂ || ೩೮ ||

ಇವಱ ವಿಪರೀತದಿಂದಂ |
ತವು ಪಲವುಂ ಕ್ಷುದ್ರಜಾತಿ [9]ಸಂಕರದಿಂದ ||
ಪ್ಪವು ಸರ್ಪಂಗಳ[10]ವಲ್ಲದೆ |
ವಿವರಣೆ[11]ಯೇಂ ತತ್ಪ್ರಸಿದ್ಧ ಜಾತಿಗ[12]ಳಲ್ಲಂ || ೩೯ ||

ವ|| ಇನ್ನಾ ಸರ್ಪಂಗಳುಂ ಪಿಡಿವುದರ್ಕೆ ಕಾರಣವಿಶೇಷ(ಂಗಳಂ)ಮಂ ಪೇೞ್ವಿನ ದೆಂತೆಂದೊಡೆ—*

ಮ||ಸ್ರ|| [13]ಸುರತಾರ್ಥಿಕ್ಷೋಭದಿಂ ಪಿ(ಪೊ)ಂಗುವುದತಿವಿಷದರ್ಪಿಷ್ಟನುನ್ಮತ್ತನಾಹಾ |
[14]ರರತಂ ಸ್ವಸ್ಥಾನಲುಬ್ಧಂ [15]ಕ್ಷುಧಿತನಧಿಕಭೀತಂ ನರಂ ದಾಂಟೆ ತನ್ನಂ ||
ಪಿರಿದುಂ ಶಂಕಾಕುಳಂ ತಾನೆನಿಪ[16]ನವವಿಧಂ ವೈರಸಂಬಂಧಮಕ್ಕುಂ |
[17]ಧರೆಯೊಳ್ ನಿಷ್ಕಾರಣಂ ಬಂದಡಸಿ ಪಿಡಿದೊಡಂ ಕಾಲಸರ್ಪಾಖ್ಯನಕ್ಕುಂ || ೪೦ ||

ವ|| ಮತ್ತಂ ವಿಷಧರಂಗಳಿರ್ದ ಸ್ಥಾನವಿಶೇಷತೆಯಿ[18] ನಸಾಧ್ಯಮಪ್ಪ[19]ವಿಷ(ಯ)ಮಂ ಪೇೞ್ವಿನದೆಂತೆನೆ—

---

1. ಕೋಪಿಸಿ (ಖ) 2. ಯಾಕ್ರಮದೊಳ್ (ತ) 3. ಳರೆ(ಗ) ಳುರು(ತ) 4. ಹದಱಿಂ ಪಿಡಿಯಲ್(ಖ) 5. ಮೆಂದಱಿ (ಖ) 6. ಅಱುವತ್ತುನಾಲ್ಕುತೊಂಬ (ಖ) (ಗ) (ತ) ಅಱುವತ್ತುನಾಡಿಯತ್ತಲ್ ತೊಂಬ(ಘ) 7. ಯೆಂಬತ್ತೆಪ್ಪತ್ತುಂ ನಿಱಿಗೆ (ಘ) 8. ಮುವತ್ತು ವಿವರ ಘಳಿಗಳಕ್ಕುಂ (ಗ) 9. ಸಲೆತರದಿಂದ. 10. ವಲ್ಲದ(ಘ) 11. ಯಂ(ಗ)ಯಿಂದಂಪ್ರ (ಘ) 12. ಗಳೆಲ್ಲಂ(ಖ)ಳವಲ್ಲಱ ವಿವರಣೆಯೆಂ(ಯಿದಂ)ದೇಂ ಪ್ರಸಿದ್ಧಿ (ಘ) 13. ಸುರಕಾರ್ತಿಕ್ಷಾರದಿಂ (ಖ) ಸುರತಾರ್ತಿಕ್ಷೋದದಿಂ (ಕ) ಸುರತಾರ್ತಿಕ್ರೋಧದಿಂ (ಘ) 14. ರತರಂ (ಖ) ಹಾರಕಂ ಸ್ವಸ್ಥಾನ (ಗ) 15. ಕ್ಷತದಿನಧಿಪಭಿಕ್ತನರಂ (ಘ) 16. ನವವಿಷಂ 17. ಧರೆಯೊಳ್ ನಿಂಕಾರಣಂ (ಖ) ಧರೆಯೊಳ್ವಿಷ್ಕಾರಣಂ (ಘ) 18. ಯಸಾಧ (ಅಸಾಧ್ಯ)ಮಪ್ಪಂದವಂ ಪೇೞ್ವಿಂ (ಗ) ಅಸಾಧ್ಯಮಪ್ಪ ವಿವರಮಂ (ತ) (ಚಂಪಕಮಾಲೆ) (ಗ) 19. ಪ್ಪಂದಮಂ.

*. ಇನ್ನಾವಸರ್ಪಂಗಳಂ ಪಿಡಿವುದಕ್ಕೆ ಕಾರಣಾಕಾರಣವಿಶೇಷ—(ಖ) ಇನ್ನೂ ಆ ಸರ್ಪಂಗಳು ಪಿಡಿವುದಕ್ಕೆ ಕಾರಣ ಅಕಾರಣಂ ವಿಷ(ಯ)ಮಂ ಪೇೞ್ವಿನದೆಂತೆನೆ—(ಗ) (ತ)

ಚಂ|| ಒಡಗೆಱ[3] ಜೀರ್ಣಕೂಪದೆಡೆ [1]ಬಿಲ್ದ ಸುರಾಲಯ ನೀರಸದ್ರುಮಂ |
ಸುಡುವೆಡೆ(ಕಾ)ಗಾಡು ಪುತ್ತಿನೊಳಮುಕ್ಷಕುಜಂ [2]ನಿಧಿದಾಣ ಕೋಟರಂ ||
ಕಡೆಸಿಡಿದೊಂದೆ ಭೂಜವಟಕಾನನವೊಪ್ಪುವ [3]ವೇಣುಕುಂಜವೆಂ |
ಬೆಡೆಗಳೊಳಿರ್ದ ಪಾವು ಕೊಳಲಪ್ಪುದಸಾಧ್ಯಮಿಳಾತಳಾಗ್ರದೊಳ್ || ೪೧ ||

ವ|| ಇ(ನಿ)ನ್ನಿಂತಪ್ಪಂಗದೊಳ್ ವಿಷಂ ಸಂ(ಗ್ರಹಿ)ಕ್ರಮಿಸಲೆತ್ತ(ಣ)ಲರಿದೆಂಬಾಸ್ಥಾನ(ವಿಶೇಷ)ಮಂ ಪೇೞ್ವೆಂ.*

ಚಂ|| ಪೆಡತಲೆ ಕಣ್ಣೊಸಲ್ ಕರತಳದ್ವಿತಯಂ ಪಣೆಗಣ್ ಕದಂಪು [4]ಕಾ |
ಲಡಿದುದಿ ಮೂಗು ನಾಭಿ ಹೃದಯಂ [5]ಚಿಬುಕಂ ತಲೆ ರೋಮದಂಚು ನಾ ||
ಣೆಡೆ ಕುಚಮಧ್ಯಮುಂ ಪ(ಗ)ದಱು ಪುರ್ವುಗಳೆಂಬಿವುಮಂ ಮಹಾಹಿ ಕೊಂ |
ಡೊಡೆ ಗರುಡಂಗಮೆತ್ತ(ಳ್ತ)ಲರಿದೆಂದೊಡೆ ಪೇೞಲೞ[6]ದರ್ಗೆ ಸಾಧ್ಯಮೇ || ೪೨ ||

ಕಂ|| [ನಡುನೆತ್ತಿಯು[7]]ದರ ದೇಹದೊ |
ಳೆಡೆಯೆಡೆಯಣ ಸಂಧಿ[8]ಕೊಡಲೆ ನಾಲಗೆ ಗುದಮುಂ ||
ನಡುಬೆನ್ನೆಂಬಿವ ನೀಕ್ಷಿಸಿ |
ಪಿಡಿಯ[9]ಲ್ಕರಿದದಱ ಗರಳಮಾ ಖಗಪತಿಗಂ† || ೪೩ ||

ವ|| ಇನ್ನಾ ಶುಭ[ಕಾಲ]ತಿಥಿ (ವಾರ) ನಕ್ಷತ್ರಯೋಗಕರಣ(ಕಾಲ)ಂಗಳಂ ಪೇೞ್ವನದೆಂತೆಂದೊಡೆ.

ಕಂ|| ಅಷ್ಟಮಿ ನವಮಿ ಚತುರ್ದಶಿ |
ಕಷ್ಟದಮಾವಾಸ್ಯೆ ಪೂರ್ಣೆ ಪಂಚಮಿ ರಿಕ್ತಾ ||
ಸ್ಪ(ಕ)ಷ್ಟಮೆನಿಸಿರ್ದ ಕೃಷ್ಣೋ |
ತ್ಕೃಷ್ಟದ ತಿಥಿಯಾಗಲಂತದಶುಭಮೆನಿಕ್ಕುಂ || ೪೪ ||

ಕಂ|| ಇನವಾರ ಭೌಮವಾರಂ |
ಶನಿವಾರಂ ಶುಕ್ರವಾರ ಮೆಂಬಿವಱೊಳ್ ಭೋ[10] ||
ರನೆ ಬಂದು ಪಿಡಿಯೆ ಸರ್ಪಂ |
[11]ವಿನತಾಸುತನೆಂಬವಂಗೆ ವಿಷಮರಿದಕ್ಕುಂ || ೪೫ ||

1. ಬಿರ್ದ್ದ (ಗ) 2. ಗಿರಿತಾಣಕೋಟರಂ ಕಡಸಿಡಿ (ಗ) 3. ಮೇಣುಪಂಜರವೆ—ಸಾರ್ದು ಮಿತಾಳಳಾಗ್ರದೊಳ್ (ಖ) 4. ಕಾಲೆಡೆ ತಡಿಮೂಗು (ಗ) 5. ಹೃದಯಂ ಮುಖಂತಲೆ (ಗ) 6.: ದಂಗೆ ಸಾಧ್ಯಮೇ (ಖ) 7. ಯಧರ (ಗ) (ತ) ಯದರ (ಘ) 8. ಕೊರ(ಲು)ಳು (ಗ)(ತ) 9. ಲ್ಕರದದರ (ಗ) ಇನ್ನು—ಯೋಗಕರಣಂಗಳಂ (ಖ) ಯೋಗಕಾಲಂಗಳಂ (ಘ) ಯೋಗಕರಣಂಗಳಂ (ಗ) 10. ಬೊರವೆ, ಸೊರ್ರನೆ. 11. ವಿನುತಾಸುತಂ (ಗ)

* ಇನಿತಪ್ಪ ಸ್ಥಾನದೊಳಿರ್ದು ವಿಷಂ ಸಂಕ್ರಮಿಸಕ್ಕೆ ಯೆತ್ತಲರಿದೆಂಬಾಸ್ಥಾನಮಂ ವಿವರಿಸಿ ಪೇೞ್ವೆನದೆಂತೆಂದೊಡೆ (ಗ) (ತ) † ಈಪದ್ಯವು (ಕ) (ಖ) ಪ್ರತಿಗಳಲ್ಲಿಲ್ಲ.



ಕಂ|| ಭರಣಿಯೊಳಾಶ್ಲೇಷೆಯೊಳಂ |
ಸುರಪತಿ[1]ಯೊಳ್ ಪಾವು ಪಿಡಿಯೆ ತದ್ವಿಷಮರಿದಾ ||
ಗರುಡಂಗೆಂದೆನೆ ಮಿಕ್ಕಿನ |
ಪುರುಷರ ಪವಣೇನೊ [2]ಮರಣಮಕ್ಕುಮವಶ್ಯಂ || ೪೬ ||

ಚಂ|| ಶ್ರವಣ ವಿಶಾಖೆ ಚಿತ್ತೆ ಮಖೆ ಕೃತ್ತಿಗೆ ರೇವತಿ ಮೂಲ[3] ಪುಷ್ಯ ಮಿ(ನು)ಂ |
ತವಗತಪೂರ್ವೆ ಮೂಱ[3]ಸೆವ ಮಧ್ಯ[4]ದಿನಂ ದಿವಸಾಂತ್ಯರಾತ್ರಿಯೊಳ್ ||
ಪವಣಿಸಿದರ್ಧಮಾಗಲಹ ವೇಳೆ ನಿಶಾಂತಮೆನಿಪ್ಪ ಕಾಲಮೆಂ |
ಬಿವಱ[3]ೊಳಹಿವ್ರಜಂ ಕೊಳಲಸಾಧ್ಯಮದೆಂದಱ ನೀಂ ಬುಧೋತ್ತಮಾ || ೪೭ ||

ಕಂ|| ನಂದೆಯೊಳಂ ಸಂಕ್ರಾಂತಿಯೊ |
ಳಂದಾ ಗ್ರಹ[5]ಣಂಗಳೊಳ್ ವ್ಯತೀಪಾತದೊಳಂ ||
ಬಂದಾ ವೈಧೃತಿಯೊಳ್ ಫಣಿ |
ಸಂದಿಸೆ ಪರಿಹರಿಸಲರಿದು ತಾರ್ಕ್ಷ್ಯ[6]ವರಂಗಂ || ೪೮ ||

ರವಿವಾರ ಹಸ್ತ ಪಂಚಮಿ |
ಶ್ರವಣಂ ಶನಿವಾರ ಷಷ್ಠಿ ಕುಜನ(ಮ)ಶ್ವಿನಿ ಯೆಂ ||
ಬಿವಱ[3]ೊಳ್ ಸಪ್ತಮಿ ಪುಷ್ಯಂ |
ನವಮಿಯೊಳಂ ಗುರುವು[7]ವೊದವಿರಲ್ಕತಿಕಷ್ಟಂ || ೪೯ ||

ಶನಿ ರೋಹಿಣಿ ಯೇಕಾದಶಿ |
ಯನುರಾಧೆ ಬುಧಾಷ್ಟಮಿತ್ರಯಂಗಳು[8]ವೋ(ದ)ವ ||
ಲ್ಕನುನಯದೆ ದಶಮಿ ರೇವತಿ |
ಧನುಜೇಜ್ಯರ್ [9]ಕೂಡಿದಲ್ಲಿ ಯಹಿ ಕೊಳಲಶುಭಂ || ೫೦ ||

[10]ಯಮಘಂಟಮರ್ಧಯಾಮಂ |
ಸಮನಿಸೆ ತಿಥಿವಾರಸಂಕ್ರಮಂಗಳಿವಶುಭಂ ||
ಭ್ರಮರಹಿತನಾಗಿ ಭಾವಿಸಿ |
ಯೆ[11]ಮಾೞ್ಪುದಶುಭಂಗಳಂ ವಿವರ್ಜಿಸಿ ಮರ್ದಂ || ೫೧ ||

*ವ|| ದೂತಲಕ್ಷಣಮಂ ವೇೞ್ವೆಂ..

1. ಪರಿಯೊಳ್ (ಖ) 2. ಮರಮೊಕ್ಕು (ಕ) 3. ಪುಶ್ಯಮಂತಾವ (ಗ) 4. ದಿವಂದಿನಸಾಂತ್ಯ—ಶಾಂತಮಿನಿತ್ತುಕಾಲ (ಗ) 5. ಗ್ರಹಣಗಳೊಳಂ ವ್ಯತೀ (ಖ) 6. ಕವರಗಂ (ಗ) 7. ಮೊದಗಿರಲ್ಕತಿ (ಖ) ಮೊದವಿನಿಲಲತಿಕಷ್ಟಂ (ಘ) ಮೊಡನಿಲಲ್ಕತಿ (ಕ) ಮೊಡನಿರಲ್ಕತಿ (ಕ) ಗುರುವುಮೋದೆನಿಲ್ಕತಿಕಷ್ಟಂ (ಗ) 8. ಮೆನಲ್ಕನು (ಖ) ತ್ರಯಂಗ(ಳ)ಳಿವೆಯ್ದಲ್ಕನು (ಘ) ತ್ರಯಂಗಳವೆಂದಲ್ಕಮನಯ (ಗ) 9. ಕೂಡಿದರಿಯಹಿಕೊಳ (ಗ) 10. ಯಮಘಮರ್ದು (ಖ) ಯಮಗಂಡಮರ್ಧ (ಘ) ಯಮಕಂಟ (ಖ) 11. ಯೇಮಾೞ್ಪುದಶುಭಂಗಳಂ ವಿಸರ್ಜಿಸಿಮದ್ದಂ (ಗ)

* ಅದೂ ಅಲ್ಲದೆ ಮುಂದೆ ದೂತಲಕ್ಷಣಂ ಪೇೞ್ವೆನದೆಂತೆಂದೊಡೆ (ಗ)

ಕಂ॥ ದೂತನ ಚೇಷ್ಟೆಗಳಂ ನಾ |
ನಾತೆಱದಿಂದಱಿದು ಬಳಿಕೆ [1]ಮಾಱ್ಪುದು[2]ವಿದ್ಯಾ ||
ಪ್ರೂತವಿಭೇಷಜಮಂತ್ರ |
ವ್ರಾತಮುಮಂ ಪುಣ್ಯಕೀರ್ತಿಭಾಜನನಪ್ಪಂ || ೫೨ ||

ಚಂ॥ ಸುರಪಸುರಾರಿಯಬ್ಧಿಪತಿಯಾಧನದೇಶ್ವರರಿರ್ಪ ದಿಕ್ಕಿನೊಳ್ |
ಬರೆ ಶುಭ ಮಗ್ನಿದಂಡಧರಮಾರುತಮಾರವಿರೋಧಿಯಾಶೆಯೊಳ್ ||
ಬರಲತಿಕಷ್ಟಮಿಷ್ಟಫಲಮಾಗದು [3]ಪೋಗದಿರೆಂಗೆ ದೂತನ(ನಿ)ಂ |
ಪರಿವಿಡಿಯಿಂ ನಿರೀಕ್ಷಿಸಿ ಶುಭಾಶುಭಮಂ ಧರೆಗೆಯ್ದೆ [4]ಪೇಳಿ ನೀಂ || ೫೩ ||

ಮ॥ ಫಲಪುಷ್ಪಾಂಕಿ(ಚಿ)ತಹಸ್ತ [5]ದಿವ್ಯವಸನಂ ತಾಂಬೂಲರಾಗಂ ಮಹಾ |
ಕುಲಜಂ ಸದ್ಗುಣಭೂಷಣಂ [6]ಸುಲಲಿತಂ ಶ್ರೀಖಂಡಮಾಲ್ಯಾಂಕನಿ ||
ಶ್ಚಲನಾಪೂರ್ಣ ಸುಲಕ್ಷಣಾಂಗನಮಲಂ ಸದ್ಭಾವದಿಂ ಬಂದವಂ |
ವಿಲಸ[7]ದ್ವಾಕ್ಪಟುವಾಗೆ ದೂ(ಯಾ)ತನುಪಮಾತೀತಂ ಶುಭಂ ಧಾತ್ರಿಯೊಳ್ || ೫೪ ||

ಮ॥ಸ್ರ॥ ತೃಣಹಸ್ತಂ ಕಾಷ್ಠಹಸ್ತಂ [8]ಸ್ಖಲಿತನಿಜಪದಂ ಸಾಶ್ರುನೇತ್ರಂ ಕುನೇತ್ರಂ |
ಕುಣ[9]ಪಾಂಗಂ ಜೀರ್ಣವಸ್ತ್ರಂ ಭಯಚಕಿತ[10]ಕರಂ [11]ಕಾಂತಹಸ್ತಂ [12]ಸರಾವೋ ||
ಲ್ಬಣವಾಕ್ಯದ್ವಂದ್ವಯುಕ್ತಂ ಬಧಿರನಸಿತರಕ್ತಾಭಮಾಲ್ಯಾಂಗ[13]ದೀನಂ |
ಭಣಿತಾಶೇಷಾಮಯಂ ಬಂದಿರಲವನೆ ಕೃತಾಂತಾಸುಗಂ ತಾನೆನಿಕ್ಕುಂ || ೫೫ ||

ಉ॥ ಒಟ್ಟೆ ಲುಲಾಯ ಗರ್ದಭ [14]ರಥಂಗಳನೇಱಿದವಂ ಕುಲಾನ್ವಿತಂ |
ಬಿಟ್ಟಶಿರೋರುಹಂಗಳ ನರಂ [15]ಕರಪಲ್ಲಿಲಿವಾಯನಪ್ಪವಂ ||
[16]ನಟ್ಟವಿಲೋಚನಂಗಳೊಳೆ ಮೇಗನೆ ನೋಡುತುಮಿರ್ಪ[17]ಮಾನಿಸಂ ||
ತೊಟ್ಟನೆ ಬಂದು ಪೇಳಲಶುಭಂ ಗತಮಾನಸನನ್ಯವಂಶಜಂ || ೫೬ ||

ಉ॥ [18]ಸುಯ್ಯದೆ ಪೊಯ್ಯಬಂದು ನೆಲನಂ ತಲೆಯಿಂ[19]ದೊಡೆಹಾಯ್ದು ಭೂಮಿಯೊಳ್ |
[20]ಮೆಯ್ಯನುರುಳ್ಚಿದುಟ್ಟು ಹೊದೆದಿರ್ದ ಸುವಸ್ತ್ರದ ನೂಲನಾಕ್ಷಣಂ ||
ಕೆಯ್ಯೊಳೆ[21]ಪೀಡಿಸುತ್ತಿರದೆ ಯಂಗುಲಿಯಂ ಮಿಡಿಯುತ್ತೆ ಮೇಗನಂ |
ದೊಯ್ಯನೆ[22]ನೋಡದಿರ್ಪ ಘಟ ದೂತನವಂ ಶುಭ[23]ದೂತನಲ್ಲವೇ || ೫೭ ||

1. ಮಾಱ್ಪುದು ವಿಷಸಂಘಾತ ವಿನಾಶನಮಂತ್ರ (ಘ) 2. ವಿದ್ಯಾಘಾತ (ಗ) 3. ಪಾಗದರಿಗೆ (ಘ) 4. ಪೇೞ್ಗಡಾ (ಘ) 5. ದಿವ್ಯವಶನಂ (ಖ) 6. ಸುಲಲಿತ ಶ್ರೀ ಕಂಸುಮಾಲ್ಯಾಂಕ (ಘ) ಶ್ರೀ ಕಂಠ ಮಾಲ್ಯಾಂಕ (ಖ) ಮಾಲ್ಯಾಂತ (ಗ) 7. ದ್ವಾಕ್ಯಪಟುತ್ವವಾಗೆ, ವೆಂಗೆ (ಖ) ವಾಗೆಯಂತದುಪಮಾತೀತಂ (ಗ) 8. ವಿಭುವಿಗತಪದಂ (ಖ) ವಿಭುವಿಗತಪದಂ (ಘ) (ಗ) ಲಿಖವಿಗತಪದಂ ಸಾಗಶ್ರುನೇತ್ರಂ(ಘ) 9. ಪಾಂಕಂ (ಖ) 10. ಹರಂ (ಘ) 11. ಕ್ಯಾಹಸ್ತಂ (ಘ) ಕಾಂಕಹಸ್ತಂ (ಖ) ತಾಂತ (ತ) 12. ಸರಾಸೋ (ಖ) ಸರಾಪೋ (ಘ) ಶರೋಪೋಲ್ಪಣ (ಕ) 13. ಲ್ಯಾಂಗದಿಂದಂ (ಕ) 14. ಹಯಂಗಳ (ಕ) ವವಂಗಳ (ಘ) ರಥಂಗಳ ನೇಱಿದನಂ ಕುಲಾನ್ವಿತನಂ (ಗ) 15. ತರಪಲ್ಲವವಾಯನಪ್ಪವಂ(ಗ) 16. ನಷ್ಟ (ಖ) 17. ಮಾನವಂ (ಘ) 18. ಸುಯ್ಯನೆ (ಗ) 19. ದೊದೆಹಾಯ್ದು (ಖ) 20. ನುರುಳಿಯುಟ್ಟು, 21. ಪಿಂಡಿಸುತ್ತೀರೆ, ಪಿಂಗಿಸುತ್ತಿರದೆಯಂಗುಳಿ (ಖ) (ಗ) 22. ನೋಡುತಿರ್ಪ, ನೋಡದಿರ್ಪಡೆದ (ಗ) 23. ಶುಭಪೂತ (ಖ) ಶುಭಘಾತ (ಘ) ದೂತನಪ್ಪನೇ (ತ) (ತಿದ್ದಿ ಮೇಲೆಬರೆದಿದೆ)



ಉ॥ ಕೆಯ್ಯೊಳೆ ಕಾಷ್ಠಮಂ ಮುಱಿಯುತಾಗುಳಿಸುತ್ತತಿರೌದ್ರನಾಗಿರು |
ತ್ತೊಯ್ಯನೆ ಸುಯ್ಯುತುಂ ನೆಲನನೇತಱಿಂಳಂ ಪೊಡೆಯುತ್ತೆ ಮತ್ತಮಾ ||
ರಯ್ಯೆ ಕರಂಗಳಂ ಪಿಡಿಯುತುಂ [1]ಬಲೆಬಳ್ಳಿಯನಾಯುಧಂಗಳಂ |
ಮೆಯ್ಯ[2]ನುರುಳ್ಚುತುಂ ಧರೆಯೊಳಿರ್ಪೊಡವಂ ಯಮದೂತನಲ್ಲವೇ || ೫೮ ||

ಕಂ॥ ಅಸಿತಾಂಬರ(ಮ) [3]ದರುಣಾಂಬರ |
ಭಸಿತಾಂಗಂ [4]ಕೃಷ್ಣ ನಂಗವಿಕಳಂ ಕುಬ್ಜಂ ||
[5]ಕಿಸುಗುಳಿಗಂ ಕೃಶ ಸರುಜಂ |
ಬೆಸ[6]ಗೊಂಡೊಡಮುಸಿರದಿರ್ದೊಡಂ ತಾಂ ಕಷ್ಟಂ || ೫೯ ||

ಮ॥ಸ್ರ॥ ತಲೆಯಂ ತೂಗುತ್ತೆ[7]ಮೇಗಂ ದೆಸೆಗಳನೆ ಕರಂ ನೋಱ್ಪವಂ ಕೇಶಮಂ ಕೆ |
ಯ್ಯೊಳೆ ನೀವುತ್ತೆಣ್ಣೆಯಂ ಮಂಡೆಯೊಳೊರಸಿದವಂ ಮುಕ್ತಕೇಶಂ ನಖಾಗ್ರಂ ||
[8]ಗಳೊಳಂ ತತ್ಪಾಣಿಶಾಖಾಗ್ರ[9]ದೊಳೆಳಸುವವಂ ಭಂಡಿಯಂ ಕಟ್ಟಿಕೋಣಂ |
ಗಳುಮಂ ತಾನೇಱಿದಾತಂ [10]ಬರಲವನೆ ವಲಂ ಕಾಲದೂತೋಪಮಾನಂ || ೬೦ ||

ಕಂ॥ ಮೃದುಮಧುರ [11]ವಾಕ್ಯನಪ್ಪಂ |
ಸದಯಂ ಗಂಭೀರನಾದವಚನ[12]ವಿಭೇದಂ ||
ಪದನಱಿದು [13]ಪೇಳ್ದನಪ್ಪಂ |
ಪದೆಪಿಂದಂ [14]ಪಡೆವನಲ್ತೆ ಯಭಿಮತಫಲಮಂ || ೬೧ ||

ದೂತಂ ವಾರ್ತೆಯನಱಿಪಿ |
[15]ದಾತನುಮಾಕುಳತೆಯಿಂದಿರಲ್ ಮೊಗಮಂ ನಿ ||
ರ್ಭೀತಂ ನೋಡದಿರಲ್ಕಂ |
ಮ್ಮಾತೇಂ[16]ಸಟೆಯೆಂಬುದಾತನೆಂಬುದನಱಿವ(ದ)ಂ || ೬೨ ||

ಉ॥ ಪನ್ನಗದಷ್ಟ[17]ನಾದನೆನುತಂ[18]ದುಸಿರ್ದೊಪ್ಪುವ ದೂತನಲ್ಲಿ [19]ಮೇ |
ಗನ್ನಗುತೀಕ್ಷಿಸುತ್ತಿರಲದುಂ ಪುಸಿಯೆಂದಱ ಯಲ್ಲದಂದು ದ ||
ಷ್ಟಂ ನಿಜವಾರ್ತೆಯೆಂದು [20]ನುಡಿದಾತನನೀಕ್ಷಿಸಲಾವ ತಾಣಮಂ ||
ತನ್ನ ಕರಂಗಳಿಂದೊಸೆದು ಮುಟ್ಟಿದೊಡಾ ಯೆಡೆಯೆಂಗೆ ಬಲ್ಲಹ(ವ)ಂ || ೬೩ ||

1. ಬರೆಬಳಿಯನಾ (ಗ) 2. ನುರುಳುತುಂ (ಗ) 3. ದಗುಣಾಂಬರ (ಕ) ವರಣಂಬರ (ಗ) 4. ಕಷ್ಟ (ಖ) 5. ಕಿಸುಗಳಿಗಣ್ಣಂ ಸರುಜಂ (ಖ) ಕಿಸುಗುಳಿಸಕೃಶರುಜಂ (ಘ) 6. ಗೊಂಡಬಡಮುಸುಡಿದ್ದೊರ್ (ಖ) ಮುಸುರದಿರ್ದುದಂತಾಕಷ್ಟಂ (ಗ) 7. ಮೇಲುಂ (ಖ) 8. ಗಳುಮಂ (ಖ) 9. ದೊಳಿರಿಸುವವಂ(ಖ)(ಗ) 10. ಬರವವನೆ (ಗ) 11. ವಪ್ಪವಾಕ್ಯಂ (ಕ) 12. (ವಚನ)ವಿಶೇಷಂ (ಖ) 13. ಪೇಳ್ಪೊಡೆಪದನಲ್ತೆಯಭಿಮತಫಲಮಂ (ಖ) ಪದನಱಿದುಪೇಳ್ದನಪ್ಪೊಡೆ—ನಡೆದನೆಲ್ತೆ (ಗ) 14. ಪೇಳ್ದೆ 15. ದಾರ್ತನು ಮಾಕುಲತೆ—ಸಟೆಯೆಂಬುದಾತ (ಘ) ದಾರ್ತನತಿನಾಕುಳದಿಂದಿರಮ್ಮೊಗಮಂ (ಖ) ದಾತನನಾಕುಲ (ಗ) ನನಾಕುಳನು ನಿಂದಿರಲ್ (ಘ) 16. ಶಠೆ (ಗ) (ತ) ಸರಿ (ಕ) 17. ನಾಕ (ಕ) 18. ತಂದೊಸೆದೊಪ್ಪುವ ಮಾತನಲ್ಲಿಮೊಗಮಂ (ಕ) 19. ಮೇಲುಂ ನಗುದೀಕ್ಷಿ (ಖ) ಮೇಲುನಗುತೀಕ್ಷಿಸುತ್ತಿರಲುದುಪುಸಿ (ಗ) ಮೆಲ್ಲಂನಗು (ತ) 20. ನುಡಿವುದಾತ (ತ)

ಇದೊಂದು ಸ್ತೋಭನಮಂತ್ರಂ—

(೨) ಮಂತ್ರಂ— [1]ಇಲೆ, ಜಯ, ವಿಜಯ, ಜ, ಸ್ವಾಹಾ, ಓಂ [2]ನಮೋಭಗವತೇ ಪಾರ್ಶ್ವನಾಥಾಯ ಧರಣೇಂದ್ರ ಪದ್ಮಾವತೀಸಹಿತಾಯ ಓಂ ಹ್ಮ್ಲ್ (ವ್ಯ), ಹ್ರಾಂ, ಹ್ರೀಂ, ಹ್ರೂಂ, ಹ್ರೌಂ, ಹ್ರಃ. ಅನಂತ [3]ವಾಸುಕಿ ತಕ್ಷಕ ಕಾರ್ಕೋಟಕ ಪದ್ಮ ಮಹಾಪದ್ಮ ಶಂಖ ಕುಳಿಕ ಜಯವಿಜಯನಾಗಾ್, ಏಹಿ, ಆವೇಶಯ, ದಹ, ಪಚ, ಧು(ಮ)ನ, ಕಂಪ, ಶೀಘ್ರಂ ಸ್ತೋಭಯ ಫೇ ಸಂ ವೌಷಟ್.

**ಇದೊಂದು ಸ್ತೋಭನಮಂತ್ರಂ.**

(೩) ಮಂತ್ರಂ—ಓಂ ನಮೋಭಗವತೇ ಪಾರ್ಶ್ವನಾಥಾಯ ಧರಣೇಂದ್ರ ಪದ್ಮಾವತೀಸಹಿತಾಯ [4]ಘೋರೋಪಸರ್ಗ ವಿನಾಶನಾಯ, ಸಂಸಾರಪ್ರಮರ್ದನಾಯ, ಅರಿ, ಇರಿ, [5]ಊ ರೀ,(ಷ)ಡರಿ, ಮುರಿ, ಪಿರಿ, ಮರಿ, ಆವೇಶಯ. ಶೀಘ್ರಂ, ಕಂಪ, [6]ಛಿಂದ ಸರ್ವರೋಗವಿನಾಶಿನಿ ಪರಮಂತ್ರಚ್ಛೇದಿನಿ, ಹೂಂ ಫಟ್ ಸ್ವಾಹಾ—

**ಇದೊಂದು ಸ್ತೋಭನಮಂತ್ರಂ[7].**

ಇಂತೀಪೇಳ್ದ ಸ್ತೋಭನಮಂತ್ರತ್ರಯದೊಳ್ ಆವುದಾನುಮೊಂದಱಿಂ—

ಮ|| [8]ಇಡೆ ದಷ್ಟಂಗೆಸೆವಿಷ್ಟಮಂತ್ರಸಹಿತಂ ಶಾಲ್ಯಕ್ಷತವ್ರಾತದಿಂ |
[9]ಜಡಿವುತ್ತಾತನ ನೀಕ್ಷಿಸುತ್ತೆ [10]ಜವದಿಂ ತನ್ಮಂತ್ರಸಾಮರ್ಥ್ಯದಿಂ ||
ಪಿಡಿಗುಂ ಸ್ತೋಭಮ(ನ)ದಾ(ಮಾ)ತನಂ ವಿಕೃತಿಯಿಂ [11]ದೆಱ್ಱಾಡಿ ಮಾತಾಡುಗುಂ |
[12]ಗಡಮೇಂ ಚೋದ್ಯಮೊ ಸಿದ್ಧಮಂತ್ರಚಯದಿಂದಂ[13]ತೀರದರ್ಥಂಗಳೇಂ || ೭೦ ||

**ಅಮೃತಧಾರಾಮಂತ್ರಂ.**

ಮಂತ್ರಂ—ಓಂ ನಮೋಭಗವತೇ ಪಾರ್ಶ್ವ[14]ನಾಥಾಯ ಧರಣೇಂದ್ರ ಪದ್ಮಾವತೀ ಸಹಿತಾಯ ಅಷ್ಟಮಹಾಸಿದ್ಧಿಪ್ರದಾಯಕಾಯ ಊತಿ[15]ಜ್ವಾಲಾ ಗರ್ಭಕರ್ಣಶೂಲ ನೇತ್ರಶೂಲ ಮೂಲವ್ಯಾಧಿ ದುಷ್ಟವ್ರಣನಾಶನಾಯ ಅನೇಕ ವಿಷಸಂಹರಾಯ [16]ಛಿಂದ, ಭಿಂದ ಚಂಡೋಗ್ರ [17]ದಾಹ ಸಂತಾಪಂ ಕ್ಷನ,ರ(ಣ)ನ,ರುಣ,ಮಣ [18]ಶಿಳಿ,ಚಿಳಿ,ಮಿಳಿ, ಕಿಳಿ, ಓಂ ಹ್ರಾಂ ಹಂಸಃ [19]ಓಂ ಹ್ರೀಂ ಹಂಸಃ ಓಂ ಹ್ರೂಂ ಹಂಸಃ ಓಂ ಹ್ರೌಂ ಹಂಸಃ ಓಂ ಹ್ರಂ ಹಂಸಃ ಓಂ ಹ್ರಃ ಹಂಸಃ, ಓಂ ಗ್ಲಾಂ ಕ್ಷಾಂ ಠಂ ಸ್ವಾಹಾ—

ಮಂತ್ರಂ—ಓಂ ನಮೋಭಗವತೇ ಚಂದ್ರಪ್ರಭ [20]ಶಂಕರ, ಚಂದ್ರಾಯ ಹರ, ರ, ರ, ರ, ಮಾ(ರಾ)ರಯ, ಸ್ಥಾವರಜಂಗಮವಿಷಂ [21]ಹರ ಕ್ಷ್ಮ್ಲ್ (ವ್ಯ)ಂ ಪಿಬ(ಂ) ಸ್ವಾಹಾ—

---

1. ಓಂ ಅನಂತ ಆಯಿಯಿಲೆ ಜಯ (ಗ) ಓಂ ಅನಂತಋೈಲೆಜಯ (ಘ) 2. ಓಂ ಭಗವತೇ (ಗ) ಓಂ, ತ್ರಂ, ಹ್ರಂ. 3. ವಾಸುಗೆ(ಗ) 4, ಉಪಸರ್ಗವಿ(ಘ) (ಗ) 5. ಉರಿಷಡರಿ(ಗ) ಉರಿ ದರಿ ಮುರಿ ಪಿರಿ ಮರಿ ಘ) 6. ಛಿಂದ. 7. ಇಂತಿದೊಂದು ಸ್ತೋಭನಮಂತ್ರದೊಳಾವುದಾನೊಂದರಿಂ (ಗ) 8. ಇದೆ ದಷ್ಟಾಂಗ ಮನೋಷ್ಟಮಂತ್ರಂ (ಗ) 9. ಜದೆಯುತ್ತಾತನ (ಗ) 10. ಭರದಿಂ ತನ್ನೇತ್ರ (ಗ) 11. ದೆರ್ದಾಡಿ (ಗ) 12. ಗಡಿವೇಂ. 13. ತೀರದರ್ದೆಂಗಳೆಂ (ಗ) 14. ಚಂದ್ರಾಯ (ಗ) 15. ಲೂತಿಜಾಲ (ಗ) ಜ್ವಾಲಾ (ಘ) 16. ಭಿಂದ (ಗ) 17. ದಹ (ಘ) 18. ಮಣತಿಳಿ ಓಂ ಹ್ರಾಂ (ಗ) 19. ಓಂ ಹ್ರೀಂ ಹಂಸಃ, ಓಂ ಹ್ರೀಂ ಹಂಸಃ, ಓಂ ಹ್ರೂಂ ಹಂಸಃ, ಓಂ ಹ್ರೂಂ ಹಂಸಃ, ಓಂ ಹ್ರೌಂ ಹಂಸಃ, ಓಂ ಹ್ರೆಂ ಹಂಸಃ, ಗ್ಲಾಂ, ಕ್ಷ್ಲಾಂ, ಠಃ ಸ್ವಾಹಾ (ಗ) 20. ಪ್ರಭಂ (ಗ) 21. ಹರ ರ ರ ರ ಮಾದಯ ಓಂ, ಕಿಂ, ಸ್ವಾಹಾ



ಕಂ|| ಇಳೆಯೊಳಿವೆ ಸಿದ್ಧಮಂತ್ರಂ |
ಗಳೆ[1]ನಲ್ ಮುನಿಗದಿತ ಮಮೃತಧಾರಾಮಂತ್ರಂ ||
ಗಳೆನಿಕ್ಕುಂ ತನ್ಮಂತ್ರಿತ |
ಜಳಮಂ [2]ಕುಡಿಯಲ್ಕೆ ಕೂಡೆ ನಿರ್ವಿಷಮಕ್ಕುಂ || ೭೧ ||

**ಅಮೃತಧಾರಾಮಂತ್ರಂ.**

[3]ಈಮಂತ್ರಂಗಳೊಳೊಂದಂ ಇಪ್ಪತ್ತೊಂದುಸೂಳ್ವರಂ ಮಂತ್ರಿಸಿ ಆ ಮಂತ್ರೋದಕ[4]ಸ್ನಾನದಿಂ ಸರ್ವ ಸ್ಥಾವರಜಂಗಮವಿಷಂ ಕಿಡುಗುಂ.

**ಮತ್ತಂ ಸರ್ವ ನಿರ್ವಿಷೀಕರಣಮಂತ್ರಂ.**

ಮಂತ್ರಂ—ಓಂ ನಮೋ ಭಗವತೇ [5]ಪಾರ್ಶ್ವನಾಥಾಯ ಧರಣೇಂದ್ರ ಪದ್ಮಾವತೀಸಹಿತಾಯ [6]ಓಂ ಹನ ಪದ್ಮಹನ ಶಿವ ಹನ [7]ಕೋಹನ [8]ಹುನ ಅರೆ ಹಂಸಃ ಆಮಿಉರ್ಝುರಿರಿ ಹಂನಃ ಪಕ್ಷಿ ಮಹಾವಿಷಂ [9]ನಿರ್ವಿಷಂ ಓಂ ಹ್ರಾಂ ಹಂಸಃ ಓಂ ಹ್ರೀಂ ಓಂ ಹ್ರೂಂ ಹಂಸಃ ಓಂ ಹ್ರೌಂ ಹಂಸಃ ಓಂ ಹ್ರಃ ಹಂಸಃ ಸ್ವಾಹಾ—

**ಸರ್ವ ನಿರ್ವಿಷೀಕರಣಮಂತ್ರಂ.**

ಮಂತ್ರಂ—ಓಂ ನೀಲಕಂಠಿ ನಿರ್ಮಳಾಕ್ಷಿ ನಾಗದೂತಿ ನಾಗ [10](ಸರ್ಪ)ಕುಲಮಾರಿ ಶೀಘ್ರ ಆವೇಶಯ, ಹರ ಹರ ಹಂಸಃ [11]ಹಿಂಸ ಅಂಧ ವಿಷದೃಷ್ಟಿವಿಷ(ಪ್ರ)ಹರಿ [12]ತ್ರಾಂ, ಹ್ರೂಂ, ಸ್ರೋಂ ಸ್ವಾಹಾ—

**ಪಕ್ಷಿರಾಜಮಂತ್ರಂ**

ಮಂತ್ರಂ—ಓಂ ನಮೋ ಭಗವತೇ [13]ರುದ್ರಾಯ ಪವನವೇಗಾಧಿಪತಯೇ ಮಹಾಪಕ್ಷಿರಾಜಾಯ ಪಕ್ಷವಾತೇನ ಹರ ವಿಷಂಜ(ಚ) ಸ್ವಾಹಾ—

**ಇ(ಂತಿ)ದು ಪಕ್ಷಿರಾಜಮಂತ್ರಂ.**

**ಭ್ರಾಮರೀಮಂತ್ರಂ.**

ಮಂತ್ರಂ—(ಓಮ್) ಭ್ರಮರಿ, ಭ್ರಾಮರಿ, ಸರ್ವ ವಿಷನಾಶಿನಿ ಸ್ವಾಹಾ—

**ಇದು ಭ್ರಾಮರೀಮಂತ್ರಂ.**

**ಈಶ್ವರೀಮಂತ್ರಂ.**

ಮಂತ್ರಂ—ಹ್ರೂಂ[14].

**ಇದು ಈಶ್ವರೀಮಂತ್ರಂ.**

**ನೀಲಕಂಠಮಂತ್ರಂ.**

ಮಂತ್ರಂ—ಓಂ, ಕ್ರೋಂ, ಪ್ರೋಂ, [15]ತ್ರೀಂ ಠಃ ನೀಲಕಂಠಾಯಸ್ವಾಹಾ—

**ಇದು ನೀಲಕಂಠ ಮಂತ್ರಂ.**

---

1. ಗಳೆನಂ (ಗ) 2. ಕುಡಿಸಲ್ಕೆ ತಳಿಯೆ (ಗ) (ಘ) 3 ಈ ಮಂತ್ರದೊಳೊಂದಂ. 4. ಸ್ನಾನಪಾನದಿಂ (ಘ) 5. ಪಾರ್ಶ್ವತೀರ್ಥಕರಾಯ. 6. ಓಂ ಪದ್ಮಹನ ಹೂಂ ಅಂ ಅಂನಃ ಅವರೆ ಹಂಸಃ ಅಮಿರಾರ್ಝುರಿ ಕಿ ಹಂಸಃ ಓಂ ಹ್ರೌಂ, ಹಂಸಃ, ಓಂ ಹ್ರಂ, ಓಂ ಹ್ರಃ ಸ್ವಾಹಾ (ಘ) 7. ಕೋಹಂನ ಹುಂನ (ಖ) ಹಾನ = ಅಮಿಟ = ಝುರಿ = ರಿಹಂನ (ಖ) 8. ಹುಅರಹಂನಃ, ಅಮಿ (ಗ) 9. ನಿರ್ವಿಷಃ (ಗ) 10. ನಾಗ ಸರ್ಪಕುಲಮಾರಿ (ಖ) ಸರ್ಪಕುಮಾರಿ(ಘ) 11. ಹಿಂ ಆಂಡ (ಖ) ಆಂಧ್ರವಿಷಂ (ಘ) 12. ತ್ರಾಂ ಹ್ರೂಂ ಪ್ರೋಂದಸ್ವಾಹಾ (ಘ) (ಗ) 13. ವತೇ ಪವನೇಗಾಧಿಪಯೇ—ಹರವಿನಿಷಂಜ ಸ್ವಾಹಾ (ಗ) ವಿಷಂ ಭಂಜ (ಘ) ಓಂ ಸ್ವಾಹಾ ಇತಿಪಕ್ಷಿರಾಜಮಂತ್ರಂ (ಖ) (ಗ) 14. ಓಂ ಭೂರ್ಂ (ಘ) 15. ತ್ರಿಂ ತ್ರಿರ(ಖ)

## ಮಂಗಳಾಖ್ಯ ವಿದ್ಯೆ.

ಓಂ ನಮೋ ಭಗವತಿ [1]ಪರಮಸತ್ವೇ ಪರಮಾಕ್ಷರೇ ವಿದ್ಯೆ ಮಹಾವಿದ್ಯೆ ಚಂದ್ರ ಕಾಪಾಳಿನಿ ಘೋರಶ್ಮಶಾನ ಪರಿಭ್ರಮಣಿ [2]ಅಷ್ಟಾಟ್ಟಹಾಸಿನಿ ಉಜ್ಜೇನಿಪೀಠ ನಿವಾಸಿನಿ ಏಹಿ ಭಗವತಿ ಪೀಠೆ ಮಹಾಪೀಠೆ [3]ಓಂ ಶ್ರೀಂ ಮಂಗಳಾದೇವ್ಯೈನಮಃ ಸರ್ವಕಾಮ್ಯಾರ್ಥದಾಯಿನಿ (ಸರ್ವ) ಯಿಚ್ಛಾಪ್ರದಾಯಿನಿ ಯೋಗಿನಿ ಯೋಗಪೀಠಸ್ಥೆ[4] ತ್ರಿಪುರೆ [5]ತ್ರಿಯಕ್ಷರೆ ತ್ರಿಪದೆ ತ್ರಿಕೋಣವಾಸಿನಿ [6]ವೇತಾಳ ಅಪಸ್ಮಾರ ಯಕ್ಷರಾಕ್ಷಸ ಭೂತಪ್ರೇತಪಿಶಾಚ ನಿವಾರಿಣಿ ಸ್ಥಾವರ ಜಂಗಮ ಕೃತ್ರಿಮ ವಿಷ ನಿರ್ನಾಶಿನಿ [7]ಸರ್ವ ಜ್ವರವಿನಾಶಿನಿ ಏಹಿ ಮಮ ಸಪುತ್ರಪೌತ್ರ ಪಶುಬಾಂಧವ ಭೃತ್ಯಕಳತ್ರ ಪರಜನಸಹಿತಸ್ಯ ರಕ್ಷ. ವಜ್ರಶರೀರಂ ಕುರು = ಸ್ವಕುಲೇಸ್ಥಿತಂ ಪರಕುಲೇಸ್ಥಿತಂ ರಾಜಕುಳೇಸ್ಥಿತಂ [8]ಸುಪ್ತಸ್ಥಿತಂ ಜಾಗ್ರತ್‌ಸ್ಥಿತಂ [9]ಪಥಿಸ್ಥಿತಂ ಗೃಹಸ್ಥಿತಂ [10]ಬಾಹ್ಯಸ್ಥಿತಂ ರಕ್ಷ. [11]ಸರ್ವಶಂಕರ್ಾ ನಿರ್ನಾಶಯ ಸರ್ವ ದುಷ್ಟಕ್ಷುದ್ರಾಂ ಭಂಜಯ, ಏಕಾಕ್ಷರಿ, ದ್ವ್ಯಕ್ಷರಿ ತ್ರ್ಯಕ್ಷರಿ ಚತುರಕ್ಷರಿ ಪಂಚಾಕ್ಷರಿ ಕಾಲ[12]ರುದ್ರಂ ನಿವಾರಯ, ಬಂಧ ಆಕ್ರಾಮಯ, [13]ಒಡ್ಯಾಣ ಪೀಠ ಪ್ರಸಾದೇನ(ಅನ್ಯ(ಸ್ಯ)ಉಪಪೀಠಪ್ರಸಾದೇನ)ದೇವಿ ಜಾ(ಬ)ಳಾಂದರಪೀಠಪ್ರಸಾದೇನ ಪೂರ್ಣಗಿರಿ ಪೀಠಪ್ರಸಾದೇನ ಕಾಮರೂಪಪೀಠಪ್ರಸಾದೇನ,ಏವಂ ಚತುಃಪೀಠಪ್ರಸಾದೇನ ಅನ್ಯ ಮುಪಪೀಠ ಪ್ರಸಾದೇನ ದೇವಿ ಮಮ (ಸಾಧ್ಯಂ)ಪ್ರಸಾದಂ ಕುರು [14]ಏಕಾಹ್ನಿಕಂ,ದ್ವ್ಯಾಹ್ನಿಕಂ ತ್ರ್ಯಾಹ್ನಿಕಂ ಚಾತುರ್ಥಿಕಂ ಸಂಧ್ಯಾಜ್ವರಂ, ರಾತ್ರಿಜ್ವರಂ [15]ವಿಷಮಜ್ವರಂ, ಸನ್ನಿಪಾತಜ್ವರಂ ಸರ್ವಜ್ವರಂ ನಿರ್ನಾಶಯ ಸರ್ವಾಶನಿ [16]ವಜ್ರಂವಾರಯ, ಸರ್ವವಿಷಂ ಭಕ್ಷಯ, ಏಹಿ ಇಂದ್ರ [17]ವಜ್ರೇಣ ಯಮದಂಡೇನ ಗರುಡ ಪಕ್ಷಪಾತೇನ ಮಹಾಕಾಳರೂಪಿಣಿ ಸರ್ವವಾದರ್ಾ ವಿಧ್ವಂಸಯ ನಿರ್ಭಯಂ ಕುರು ರಕ್ಷ [18]ಮಂತ್ರಸಿ(ದ್ಧಿಂ)ದ್ಧಂ ದದಾತು—ಓಂ ಹ್ರೀಂ ಶ್ರೀಂ ಕ್ರೂಂ [19]ಫಟ್—

**ಇದು ಮಂಗಳಾಖ್ಯ[20]ವಿದ್ಯೆ.**

ನಿರ್ವಿಷದೃಷ್ಟಿಪ್ರತ್ಯಯಂ.

## ಮೇಘಮಾಲಾಮಂತ್ರಂ.

ಮಂತ್ರಂ—ಓಂ ಮೇಘಮಾಲೆ, ವಿಮಳೆ ಹರ ವಿಷವೇಗಂ [21]ಹಾಂ, ಹಂ ಶಂಬರಿ ಅ(ಚರಿ)ಚಿ(ಆಚರಿ)ಲೆಚಿ ಸರ್ವವಿಷನಾಶಿನಿ ಮಹಾಮಾಯೆ ಹಂ(ಹಂ)ಸಃ(ಉಂ)ಠ(ಃ)ಸ್ವಾಹಾ,(ಜ.)

**ಇದು ಮೇಘಮಾಲಾಮಂತ್ರಂ**

ಮಂತ್ರಂ—ಓಂ ನಮೋ ಅನಂತಾಯ ಮಹಾನಾಗಹೃದಯಾಯ ಸರ್ವನಾಗ ವಶಂಕರಾಯ ಸ್ವಾಹಾ.

---

1. ಪರಮಶಕ್ತಿ ಪರಮಾಕ್ಷರೇ ಮಹಾವಿದ್ಯೆ (ಘ) 2. ಅಷ್ಟಷ್ಟ (ಗ) ಮಹಾಟ್ಟಹಾಸೇ ವಡ್ಯಾಣ ಪೀಠವಾಸಿನಿ (ಘ) ಉದ್ದೆಯಣಪೀಠ (ಖ) ಉಜ್ಜೆನಿ (ಕ) ಉಡ್ಡಿಯಾಣ (ಗ) 3. ಒಂ ಹ್ರೀಂ ಮಂಗಳ ಪೀಠವಾಸಿನಿ (ಘ) ಉದ್ದೆಯಣಪೀಠ (ಖ) ... 7. ಜ್ವರನಿವಾರಿಣಿ, ಏಹಿ(ಘ) (ಘ) 4. ಪೀಠಸ್ಥಿತೇ (ಗ) 5. ತ್ರ್ಯಕ್ಷರಿ, ತ್ರಿಪಥೆ. 6. ತಾಳಾಪಸ್ಮಾರ (ಘ) 8. ಸುಪ್ತಕ(ಗ) 9. ಪಂಕ್ತಿ(ಗ) 10. ಬಾಹ್ಯೇ(ಗ) 11. ಸರ್ವಂನಾಶಯ (ಖ) 12. ಮುದ್ರಾನಿವದಯ(ಗ) 13. ವೇದ್ಯಾಕೋಪಿ (ಗ) 14. ಏಕಾಹಿಕ ದ್ವ್ಯಾಹಿಕತ್ರ್ಯಾಹಿಕಂ ಚಾತುರ್ಥಿಕಂ (ಗ) 15. ವಿಷಜ್ವರಂ (ಘ) 16. ಸರ್ನಾಶನಿ ಜ್ರೆವಾರಯಿ (ಖ) ಸರ್ವಾಸ ನಿವಾರಣಾಯ:(ಘ) 17. ವಜ್ರಯಮ(ಘ) 18. ಈ ಮಂತ್ರ (ಗ) 19. ಪಟು (ಗ) 20. ಖ್ಯೆಯೆಂಬ ವಿದ್ಯೆ ನಿರ್ವಿಷ ದುಷ್ಟಪ್ರತ್ಯಯಂ (ಗ) 21. ಹರ್ ಹರ್ ಶನ ಶಿರಿ ಅಜಲೇಚಿ ಸರ್ವ ವಿಷನಾಶಿನಿ ಮಹಾಮಾಯೆ ಹ್ರಂ ಲಂ ಸಃ ಸ್ವಾಹಾ (ಗ) ಹ್ರಾಂ ಅ ಅಂಸಃ ಸ್ವಾಹಾ ಇದು—ಪಠಿತಸಿದ್ಧಿ (ಘ)



ಸ್ರ॥ ಸಂತರ್ ಮುಂ ಮಂತ್ರವಾದಜ್ಞರೊಳಧಿಕಗುಣರ್ ಪೇಳ್ದ ಶಿಷ್ಟೇಷ್ಟವಾಗಿ ।
ರ್ಪಿಂತೀ ಮಂತ್ರಂಗಳೊಳ್ ಭಾವಿಸಿ ತನಗುಚಿತಾರ್ಥಕ್ಕೆ ತಕ್ಕೊಂದಱಿಂದೇ ॥
ಕಾಂತಸ್ಥಾನಂಗಳೊಳ್ ಮುಂ ಜಪಿಸಿರಲಹಿದಷ್ಟಂಗೆ ತನ್ಮಂತ್ರಪೂತಾ ।
ತ್ಯಂತಸ್ವಚ್ಛಾಂಬುವಿಂ ನಿರ್ಗತವಿಷಮೆನಿಕುಂ ಸ್ನಾನಪಾನಂಗಳಿಂದಂ ॥ ೭೨ ॥

## ಇನ್ನು ಬಡಬಾನಳ ಭೈರವ ಮಂತ್ರೋದ್ಧಾರಂ,

ಓಂ ನಮೋ [1]ಭಗವತೇ ನಮೋ ರುದ್ರಾಯ ಮಹಾಪ್ರಳಯಕಾಲ ತಾಂಡವ ಭೈರವಾಡಂಬರಾಯ ತ್ರಿಶೂಲ ಡಮರುಗ ಖಟ್ವಾಂಗ ಕಪಾಲಮಾಲಾಧರಾಯ, ಸೋಮ ಸೂರ್ಯಾಗ್ನಿ ನೇತ್ರತ್ರಯಾಯ, ಶಶಾಂಕಾಲಂಕೃತ ಶೇಖರಾಯ ಕೃಷ್ಣಸರ್ಪಯಜ್ಞೋಪ [2]ವೀತಾಯ ಅನೇಕಕಾಲ ನಿರ್ನಾಶನಾಯ, ಯುಗಯುಗಾಂತರಾಳ [3]ಪ್ರಳಯಾಯ, ಪ್ರಚಂಡ [4]ಹ್ರೀಂ ಹ್ರೂಂ ಮಾರ್ತಂಡ ಮಹಾಭೈರವ, [5]ಲಳ, ಚಳ, ವಳ ಹು(ಳು) [6]ಗರ್ಜ ಹಂಸ, ಜರ ಜ್ವಲ ಮಲ ಮೋಟಯ ತ್ರೋಟಯ, ಸರ್ವದುಷ್ಟಗ್ರಹಾನ್ನಿವಾರ(ಣಾ)ಯ, [7]ಶಿರೋ ಲಲಾಟ ಕರ್ಣ ನಾಸಿಕಾ ಚಕ್ಷುರ್ಮುಖೋಷ್ಠ ತಾಲು ಹನು ಗ್ರೀವ ಭಾಳ ಬಾಹು ಕರ ವಕ್ಷಸ್ಥಳೋರೂದರ ಪೃಷ್ಠ ನಾಭಿ ಗುದ ಗುಹ್ಯ ಜಾನು ಜಂಘಾ ಪಾದ ಪಾದಾಂಗುಷ್ಠಾನ್ [8]ಛಿ(ಸ)ಂದಿ, ಭಿಂದಿ ಮುಹುಃ, ಮೂಷಯ, ತ್ರೋಟಯ ಓಂ ಹ್ರಾಂ ಕ್ಷ್ಮ್ಲ್ರ್ಯೂಂ ಹಂಸ ಕ್ಷ್ಮ್ಲ್ರ್ವ್ಯೂಂ [9]ಐಂಯೂಂ ಖ್ಮ್ಲ್ರ್ವ್ಯೂಂ ಐಂಯೂಂ ಗ್ಮ್ಲ್ರ್ಧ್ಯೂಂ ದ್ರಿಂಯೂಂ ಕ್ಷ್ಮ್ಲ್ರ್ಷ್ಯೂಂ ಐಂ ಯೂಂ ಹಂಸ ಕ್ಷ್ಮ್ಲ್ರ್ವ್ಯೂಂ ಐಂ ಯಾಂ ಯೂಂ ಹಂಸಃ ಕ್ಷ್ಮ್ಲ್ರ್ವ್ಯೂಂ ಐಂ ಯೀಂ ಹಂಸ ಕ್ಷ್ಮ್ಲ್ರ್ವ್ಯೂಂ ಐಂ ಯೂಂ ಠಠ- ಕ್ಷ್ಮ್ಲ್ರ್ವ್ಯೂಂ [10]ಐಂ ಯೂಂ ಹೂಂ ಫಟ್, ಘೇ ದಷ್ಟ ಆವೇಶಯ ಅವತರ ಆಗಚ್ಛ ಕಹ ಕಂಪ ಗ(ದ)ದಾ ಮುದ್ಗರ ತೋಮರ ಪರಶುಹಸ್ತಾಯ ಫಲಪುಷ್ಪ ತಾಂಬೂಲ ಸುವರ್ಣ ಕೃಷ್ಣಾಯ ಓಂ ಐಂ ಕ್ಲೀಂ ಹ್ರೀಂ [11]ಸ್ತ್ರೀಂ ಆಂ ಕ್ರೋಂ (ತ್ರೋಂ) ದ್ರಾಂ, ದ್ರಿಂ [12]ಕ್ಷೀಂ ಮ್ಲಾಂ (ಕ್ಷೂಂ ಕ್ಷಂ ಕ್ಷಃ) ಹಂಸಃ, ಪರ ಮಂತ್ರ ಯಂತ್ರ ತಂತ್ರ ಶತಸಹಸ್ರ ಲಕ್ಷಕೋಟರ್ಾ (ಕೋಟೀಃ) ಛೇದಯ, ಆತ್ಮಮಂತ್ರ ತಂತ್ರ ಯಂತ್ರ [13]ಕೋಟರ್ಾ ಪೂಜಯ, ದಿಶಾಬಂಧಂ. ತತ್ರ ಸರ್ವದಿಶಾಬಂಧ ಓಂ [14]ನಮೋ ಭೈರವ ಬಡಬಾನಳಾಯ ಆಂ ಕ್ರೋಂ ಹ್ರಾಂ ಹ್ರೀಂ ಹ್ರೂಂ ಹ್ರೌಂ ಹ್ರಂ ಹ್ರಃ [15]ಕ್ಷಂ ಕ್ಷಾಂ ಕ್ಷಿಂ ಕ್ಷೀಂ, ಕ್ಷುಂ, ಕ್ಷೂಂ ಕ್ಷೆಂ, ಕ್ಷೇಂ ಕ್ಷೈಂ (ಕ್ಷೊ) ಕ್ಷೋ ಕ್ಷೌ, ಕ್ಷಂ, ಕ್ಷಃ.

ಎಂಬೀ [16]ಮಂತ್ರಮಂ ಬರೆದು ಅಷ್ಟವಿಧಾರ್ಚನೆಯಿಂ ದರ್ಚಿಸಿ,

---

1. ಭಗವತೇ ಮಹಾರುದ್ರಾಯ (ಘ) 2. ಪವಿಟಾಯ (ಗ) 3. ಪ್ರಳಯ ಪ್ರಚಂಡ ಹ್ರೂಂ, ಹುಂ (ಘ) 4. ಹ್ರಂ (ಘ) 5. ಅ(ಚ)ಳ (ಘ) ಲಳ ಚ ವಳ (ಗ) 6. ಘರ್ಜ, ಹಂಸ ಜರ ಜ್ವಲ (ಗ) ಜಲ್ಪ ಮಟ (ಖ) 7. ಲಲಾಟಕೇಶನಾಗ್ರಸಿಕಾ ಚಕ್ಷುರ್ಮು (ತ) ಶಿರ ಲಲಾಟ ಕರ್ಣ ನಾಸಿಕ ದಶನ ಚಕ್ಷುರ್ಮುಖೋಷ್ಠತಾಲು ಅನುಗ್ರೀವ ಬಾಹುವಕ್ಷ (ಘ) ಬಾಳತುರಹುಕರ (ಗ) 8. ಸಂಧಿ, ಭಿಂದಿ (ಗ) 9. ವೌಂ ಯೂಂ. ಕ್ಮ್ಲ್ರ್ವ್ಯೂಂ ಪೂಂ ಯೂಂ, ಖ್ಮ್ಲ್ರ್ವ್ಯೂಂ ಪೂಂ ಯೂಂ ಗ್ಮ್ಲ್ರ್ವ್ಯೂಂ ಪೂಂ, ಯೂಂ. 10. ರ = ರ = ಹೂಂಫಟ್ ಘೇ (ಘ) ಘೇ, ಘೇ (ಗ) 11. ಶ್ರೀಂ (ಗ) 12. ಕ್ಲೀಂ, ಊ್ಲಂ ಹಂಸಃ ಪರಯಂತ್ರ ಕ್ಲೀಂ ದೊಂಸಃ (ಗ) ತಂತ್ರಕೋಟೀನ್ ಛೇದಯ (ಘ) 13. ಕೋಟೀಃ. 14. ಓಂ ನಮೋ ಬಡಬಾನಲ ಭೈರವಾಯ (ಘ) ಹ್ರಃ-ಕಂಧ ಕ್ಷೇತ್ರಾಧಿಪತಿಯ. 15. ಕ್ಷೀಂ ಕ್ಷ್ಮ್ರೀಂ ಕ್ಷ್ಮ್ರೂಂ (ಘ) 16. ಮಂತ್ರದಿಂದೀ ಯಂತ್ರಮಂ ಬರೆದು—ಚರ್ಸಿಯಾಯಂತ್ರಮಂ (ಘ)

[1]ಯಂತ್ರಂ



ಕಂ|| ಕ್ಷೇತ್ರಾಧಿಪತಿಯ ಮುಂದೆ ಪ |
ವಿತ್ರಾರುಣ ಕುಸುಮಮಂ [2]ಸಹಸ್ರ ಸಮೇತಂ ||
ಸ್ತೋತ್ರಯುತ ಮಷ್ಟಸಂಖ್ಯಾ |
ಮಾತ್ರಮನರ್ಚಿಸಲದಾತ[3]ನೊಳ್ ಸಿದ್ಧಿಸುಗುಂ[4] || ೭೩ ||

ವಿನುತಂ ಗ್ರಹತತಿಗುಚ್ಚಾ |
ಟನಮಕ್ಕುಂ ಸಕಳವಿಷಹರಂ ತಾನೆನಿಕುಂ ||
ಜನತಾವಂದ್ಯಮಿದಾವೇ |
ಶನಮುಖ್ಯಂಗಳ್ಗೆ ಯೋಜಿಪುದು ಮಂತ್ರಜ್ಞಂ || ೭೪ ||

ಇನ್ನಾ ವಿಸರ್ಜನಮಂತ್ರಮಂ ಪೇೞ್ವೆಂ—

ಮಂತ್ರಂ—ಓಂ, ಐಂ ದ್ರೊಮ್ಲ್ವ್ಯ್ರೂಂ ಕ್ಲೀಂ, ಹ್ರೀಂ, ಸ್ತ್ರೀಂ ಆಂ, ಕ್ರೋಂ, ದ್ರಾಂ, ದ್ರಿಂ ಕ್ಲೀಂ, ಹ್ಲೂಂ (ಜಂ) ಸ(ಂ)ಃ ಯಾ, ರಿ—ಜಃ ಜಾ

ಎಂದು ವಿಸರ್ಜನಮಂತ್ರಂ.

ಇದು ಸರ್ವಾ(ರ್ಪಾ)ವೇಶಕ್ಕಂ ವಿಸರ್ಜನಂ.

ಕಂ|| ಉರ್ವಿಯೊಳಹಿದಷ್ಟಂಗಂ |
ನಿರ್ವಿಷಮಕ್ಕುಂ [5]ವಿಧಿಜ್ಞಮಂತ್ರದ ದೆಸೆಯಿಂ ||
ಸರ್ವ[6]ವಿಷಂಗಳ್ಗದಱಿಂ |
ನಿರ್ವೃತಿ[7]ಯಕ್ಕುಮೆ ಯಿದಲ್ಲದುೞಿದೌಷಧದಿಂ || ೭೫ ||

ಮ|| ವಿಲಸ[8]ದ್ಧ್ಯಾನದೃಗಾದಿ ಲಕ್ಷಣನ[9]ನೇಕಾಂತಾತ್ಮನತ್ಯಂತ ನಿ |
ರ್ಮಲನಿರ್ವಾದ ನಿರಾಮಯಂ ನಿರುಪಮಂ ತಾನೆಂದು ತಾಂ ತನ್ನೊಳಂ |
[10]ನೆಲೆಗೊಂಡಾತ್ಮ ವಿನಿಷ್ಟನಾಗಿರೆ ಮಹಾ ಘಾತಾತ್ಮನಕ್ಕುಂ ಬೞಿ |
ಕ್ಕಱಿಗುಂ ಸರ್ವ[11]ವಿಷಾಧಿ ತತ್ತನುಲಸತ್ಸಾನ್ನಿಧ್ಯ [12]ಮೃಣ್ಮಾತ್ರದಿಂ || ೭೬ ||

---

1. ಯಂತ್ರ—  ಇನ್ನು ಸರ್ವಾವೇಶ ವಿಸರ್ಜನೆ (ಗ) 2. ಸಹಸ್ರಂ ಸಹಿತಂ (ಘ)
3. ದಾತನೊಳ (ಗ) 4. ತನ್ಮಂತ್ರೋದ್ಧಾರಮೆಂತೆಂದೊಡೆ ಯಂತ್ರ—ದ್ರೋಮ್ಲ್ವ್ಯ್ರೂ ಈ ಯಂತ್ರಮಂ ಬರೆದು ಅಷ್ಟವಿಧಾರ್ಚನೆಯಿಂದರ್ಚಿಸಿ ಪಿಂತೆ ಪೇೞ್ದ ಕಂದದೋಜೆಯಿಂ ಮಾಡಲು ವಿಸರ್ಜನಮಂತ್ರಮಂ ಪೇೞ್ವೆಂ ಓಂ, ಐಂ, ಕ್ಲೀಂ, ಹ್ರೀಂ ಆಂ ತ್ರೋಂ ದ್ರಾಂ ದ್ರಿಂ ಕ್ಲೀಂ ಪ್ಲೋಂ ಸಃ ಯಃ = ರೆ = ಜ = ಜಾ = ಯೆಂದು ವಿಸರ್ಜನಂ ಮಾಡೂದು—ಇದು ಸರ್ವಾವೇಶಕ್ಕಂ - ವಿಸರ್ಜನಂ—ಉರ್ವಿಯೊಳಹಿ - (ಗ) ಪ್ಲೂಂ, ಸಃ ಯರೆ ಜಃ (ಘ) 5. ವಿದಜ್ಞ (ಖ) 6. ವಿಷಂಗಳುಮದಱಿಂ (ಘ) 7. ಯಕ್ಕುಂ ವಿವೇಕಚೂಡಾರತ್ನಾ (ಘ) ನಿವೃತ್ತಿಮಕ್ಕು ಮೆಲ್ಲೂಡುೞಿದ ಉಷಧಿಯಿಂ (ಗ) 8. ದ್ಧಾನ (ಗ) ಧ್ಯಾನ (ಘ) 9. ನನೇಕಂ ತಂತ್ಮನತ್ಯಂತ ನಿರ್ಮ ನಿರ್ವಾದ ನಿರಾವಯಂ ನಿರಾಮಯಿಂ ನಿರೂಪಮಂ ತಾನೆಂದು ತಾಂ (ಗ) 10. ನೆಲೆಗೊಂಡಾತ್ಮ ಸುಖಂ ವಿಷಾಧಿ ಘಾತಾತ್ಮನಪ್ಪಂ ಬೞಿಕ್ಕಱಿಗುಂ ಸರ್ವವಿಷಾಧಿ ತತ್ತನು (ಗ) 11. ವಿಷಾದಿ ತತ್ತನುಲ ಸತ್ಸಂ ನಿವ್ಯ ಮೃನ್ಮಾತ್ರದಿಂ (ಖ) ತ್ಸಾಪೇಧ್ಯ ಮೃಮಾಂತ್ರದಿಂ (ಕ) 12. ಮಂ ಮಂತ್ರಮಂ (ಘ)



ಕಂ|| [1]ತನುತಾನಲ್ಲಿಂ [2]ಭಾಧೆಗ |
ಳೆನ[3]ಗಿಲ್ಲಂ ಸರ್ಪಕೀಟಕಾದಿಗ[4]ಳಿಂದಿಂ ||
ದೆನುತುಂ ಭಾವಿಸೆ ತನ್ನಂ |
ಜನಿತಾತ್ಮಸುಖಂ ವಿಷಾದಿ [5]ಪ್ರೂತನೆನಿಕ್ಕುಂ || ೭೭ ||

ಮಾಳಿನೀ|| ಉರಗವಿಷಹರಂ ತತ್ಸಿದ್ಧಮಂತ್ರಪ್ರಯೋಗಂ |
[6]ಸ್ಮರವಿಷಹರಮಕ್ಕುಂ ನೋಡೆ [7]ಶುದ್ಧೋಪಯೋಗಂ ||
ಧರೆಯೊಳನುಪಮಂ [8]ತದ್ದ್ವಂದ್ವಮೆಂತೆಂದಱಿಂದಂ |
ವಿರಚಿಸಿದೆ[9]ನಿದಂ ನಾಂ ನೋಡೆ ಸದ್ಭಾವದಿಂದಂ || ೭೮ ||

---

1. ತನುವಾನಲ್ಲಂ(ಲ್ಲೇ)(ಘ) 2. ಬಾಬೆಳಲೆಗಳೆಲ್ಲಂ(ಕ) 3. ಗಿಲ್ಲಾಂ(ಗ) 4. ಗಳಿಂದಿನ್ನೆನುತುಂ(ಖ) 5. ಘಾತನೆನಿಕ್ಕುಂ(ಕ), ಈ ೭೭–ನೆಯ ಪದ್ಯವಾದ ಮೇಲೆ (ಘ) ಪ್ರತಿಯಲ್ಲಿಮಾತ್ರ ಈ ವಿಷಯವು ಹೆಚ್ಚಾಗಿದೆ–

ಇನ್ನು ಸರ್ವನಿರ್ವಿಷಮಂತ್ರ ವಿಧಾನಂ.

ಕಂ|| ಆರ್ಯರ್ ಪೇೞ್ದೀಮಂತ್ರಂ |
ಸೂರ್ಯಗ್ರಹಣದೊಳೆ ಮೋಕ್ಷಪರ್ಯಂತಂ ತಾ ||
ತ್ಪರ್ಯದೊಳಾದನಿತಂ ಬುಧ |
ವರ್ಯಂ ಮಾಳ್ಪುದು ಜಪಂಗಳಂ ಸಿದ್ಧಿಸುಗುಂ || ೭೮ ||

ತನ್ಮಂತ್ರಂ—ಓ(ಂ) ಲೆಯಮುಟ್ಟೆ ಅಚಿತಮುಚಿತ ಅಘೋನಾಸ್ತಿ ಕೈಯಂಬೊಕ್ಕಂ ವಿನನೂಪ ಹರಹ(ರ) ಸ್ವಾಹಾ—

ಅದಲ್ಲದೆಯುಂ—

ಕಂ|| ಮುಂ ಪೇೞ್ದಂತೀ ಮಂತ್ರಮು |
ಮಂ ಪರಿಸಲ್ ಸಿದ್ಧಿಯಕ್ಕುಮೇೞ್ಸೂೞ್ತಾಂ ನಿ ||
ಚ್ಚಂ ಪೇೞ್ದೊರ್ಕುಡಿತೆಯ ನೀ |
ರಂ ಪಾನಂಗೆಯ್ಯೆ ಶಬ್ದನಿರ್ವಿಷಮಕ್ಕುಂ || ೭೯ ||

ತನ್ಮಂತ್ರಂ—ಹಾಡಂಗಟ್ಟಿನ ಮಂಗಂಪಯಂಗಟ್ಟಿ ನಲ್ಲಾಗಿಯುಂ ಕಟ್ಟಿ ಮಹಾದೇವಿಯ ಶೂಲಂ ಚಿತ್ತಂಗಟ್ಟಿ ನಯಂಗಟ್ಟಿ ಕಟ್ಟಿ ಪರಕಟ್ಟಿ ಕಟ್ಟಲಿ ಓಂ ಜುಂ ಬಾಳಗುರುಪ್ರಸಾದ ಅಚಿತಕ್ಕುಂ ಕಾಲಮಕ್ಕುಂ ವಿಷಂ ನಾಸ್ತಿ ಹರಶಬ್ದ ನಿರ್ವಿಷಂ ಗುರುಪ್ರಸಾದ—

ಈ ಮಂತ್ರಕ್ಕಂ ಪೂರ್ವಕ್ರಮದಿಂ ತ್ರಿಸಂಧ್ಯಾಕಾಲದಲ್ಲಿ ಏೞುಸೂೞ್ ಜಪಿಸಿ ಒರ್ಕುಡಿತೆ ನೀರಂ ಕುಡಿಯುತ್ತೆ ಬರೆ ಶಬ್ದ ನಿರ್ವಿಷಮಕ್ಕುಂ ತನ್ನಂ ಮುಟ್ಟದಹಿ ಸಾಯ್ಗುಂ. 6. ಸ್ಮರಹರವಿಷಮಕ್ಕುಂ (ಗ) 7. ಶ್ರದ್ಧಾ (ಗ) ಶುದ್ಧಿಪ್ರ (ಘ) 8. ದ್ವಂದ್ವಮೊಂದೊಂದಱಿಂದಂ, (ತ) ದ್ವಂದ್ವಮಂ ಮೆಂತರಿಂದಂ (ಗ) 9. ಸಿದನಿದಂನೋಡಿ (ಘ) ಮಿದಂ (ಗ)

ಮ॥ಸ್ರ॥ ಇದು ಸದ್ವಿದ್ಯಾನಿಧಾನಂ ಸಕಳಜನಹಿತಂ ಸಂಗ್ರಹಾದಿಪ್ರಸಿದ್ಧಾ |
ಸ್ಪದ[1]ಮೆಲ್ಲಂ ಮಂತ್ರಶಾಸ್ತ್ರಂ[2]ಗಳ ತಿರುಳುಪಮಾತೀತಭೀತಿಪ್ರಣಾಶಂ ||
ಸದಯರ್ ಮುಂಕೊಂಡು ನೋೞ್ಪಾ ಪರಮವಿಧಮಿದಂ ಲೋಕ ಮೆಚ್ಚಲ್ಕೆ ಪೇೞ್ದಂ|
ಬುಧಮಿತ್ರಂ ಮಂಗರಾಜಂ ಸಕಳಜನನುತಂ ಪುಣ್ಯಭೂಜಾತಬೀಜಂ || ೭೯ ||

—ಗದ್ಯ—

ಇದು

[3]ಸಕಲವಿದಮಲ ಜಿನೇಂದ್ರೋಕ್ತಸಿದ್ಧಾಂತಪಯಃಪಯೋನಿಧಿಪಾರಗ

ಶ್ರೀಪೂಜ್ಯಪಾದಮುನೀಂದ್ರ ಚಾರುಚರಣಾರವಿಂದ

ಗಂಧಗುಣಾನಂದಿತಮಾನಸಂ

ಶ್ರೀಮದಖಿಲಕಲಾಗಮೋತ್ತುಂಗ

ಮಂಗವಿಭು

ವಿರಚಿತಮಪ್ಪ

## ಖಗೇಂದ್ರ ಮಣಿದರ್ಪಣದೊಳ್

ಸಂಗ್ರಹಾದ್ಯಷ್ಟವಿಧ [4]ಗಾರುಡಮಂತ್ರಾಧಿ[5]ಕಾರಂ

ಚತುರ್ಥಂ.

---

1. ಮೆಲ್ಲಾಮಂತ್ರ (ಘ) ಮೇಲಾಮಂತ್ರ (ಖ) 2. ಗತಿಯುಂ ತಾನುಪಮಾಲತ ಭೀತಿಪ್ರಣಾನಂ| ಸದಯರ್ ಮುಂಕೊಂಡುನೋೞ್ಪಾದಶನಮಿದನೆಪೇೞ್ದಂ ಬುನಿಟ್ಟಸಿದ್ಧಿ ಪ್ರತಮಂ ಶ್ರೀಮಂಗ (ಕ) ಸದಯರ್ ಮುಂಕೊಂಡು ನೋೞ್ಪಾದರ್ಶ(ರುಶ) ಮಿದೆನೆ ಪೇೞ್ದಂ ಬುಧರ್ಗಿಷ್ಟಸಿದ್ಧಿ । ಪ್ರದಮಂ ಶ್ರೀ ಮಂಗರಾಜಂ ಸಕಳಜತನುತಂ (ಗ) ಸದಯಮ್ಮುನ್ನೋೞ್ಪಾದರ್ಶಮಿದನೆ ಪೇೞ್ದಂ ಬುಧರ್ಗಿಷ್ಟಸಿದ್ಧಿ ಪ್ರದಮಂ (ಖ) 3. ವಿಮಳಜಿನೇಂ (ಘ) ಕ ಪ್ರತಿಯಲ್ಲಿ—ಇಲ್ಲಿಂದ "ಮಾನಸಂ" ವರಗಣಭಾಗವಿಲ್ಲ. 4. ಗಾರುಡಾಧಿಕಾರಂ (ಖ) ಸಂಗ್ರಾಹದಷ್ಟವಿಧಗಾರುಡ (ಕ) 5. ಕಾರಂನಾಮ ಚತುರ್ಥಾಶ್ವಾಸಂ—

# ಪಂಚಮಾಧಿ[1]ಕಾರಂ

ಪಾನಾಧಿಕಾರಂ.

**ಸಪ್ತಧಾತುಗಳ ವಿಷಲಕ್ಷಣ ಚಿಕಿತ್ಸಾವಿವರಣಂ.** [2]

ಕಂ॥ ಶ್ರೀರಮಣಂ ಶುಭ ಕೀರ್ತಿ ರ |
ಮಾರಮಣನುಮೆನಿಸಿ ನೆಗೞ್ದೊಡಂ ಬಹುವಿದ್ಯಾ ||
ಧಾರಂ ತನು[3]ತನಗೆ ಹಿತಂ |
ಸಾರ[4]ಮೆನಿಪ್ಪೌಷಧಂಗಳಂ[5]ನೋೞ್ಕೆ ಬುಧಂ [6] || ೧ ||

ಕೌಶಲ್ಯಯುತಂ[7]ಕ್ಷತದವ |
ಕಾಶಾವಸ್ಥಾಗ್ರಭಾಗದೊಳ್ [8]ಪೞಿಯಿಂ ತ||
ದ್ದೇಶದ ಕೆಲಂಗಳೊಳ್ ನಯ |
ಪಾಶಂಗಳ ನೞಿದು [9]ಕಟ್ಟನಿಕ್ಕುಗೆ ವಿಧಿಯಿಂ || ೨ ||

ದಷ್ಟ[10]ವಿಷರಕ್ತಮೋಚನ |
[11]ದಿಷ್ಟಂ ಬೞಿಯಂ ಜಲಾಭಿ[12]ಷಿಕ್ತತೆಯಿಂ ದು ||
ತ್ಕೃಷ್ಟ ಮೆನಿಪ್ಪೌಷಧಿಯಂ |
ಸ್ಪಷ್ಟ[13]ಮೆನಲ್ ತೊಡೆದು ಕುಡಿಯೆ ಕುಡುವುದು ತಕ್ಕಂ || ೩ ||

*** ಗಾರುಡಮಂತ್ರಂ.**

ಮಂತ್ರಂ—ಓಂ ನಮೋ ಭಗವತೇ ಪಾರ್ಶ್ವತೀರ್ಥಕರಾಯ ಧರಣೇಂದ್ರ ಪದ್ಮಾವತೀ ಸಹಿತಾಯ [14]ಪಾಂ [15]ಖ್ರೋಂ ಪಾಂ ಬಾಂ ಹಾಂ ಖ್ರೋಂ [16]ಬಾಂ ಭಾಂ ಖ್ರೋಂ ಬಾಂ ಭ್ರಾಂ, ಭಾಂ ಖ್ರೋಂ.

---

1. ಮಾಶ್ವಾಸಂ (ಗ) 2. ಇದು ಕ. ಖ. ಪ್ರತಿಗಳಲ್ಲಿಲ್ಲ. 3. ತಮುಗೆ (ಘ) ತನುಗೆ (ಗ) ಕನಕದುಗೆ (ಕ) 4. ಸಾರಮುಪ್ಪೌ (ಘ) 5. ಮಾೞ್ಕೆಬುಧರ್ (ಘ) ಮಾೞ್ಕೆಬುಧಾ (ಗ) 6. ಈ ಅಧಿಕಾರದ ಆದಿಯಲ್ಲಿ ಕ. ಖ. ಪ್ರತಿಗಳಲ್ಲಿ ಈ ಪದ್ಯವು ಹೆಚ್ಚಾಗಿದೆ. ಆದರೆ ಇದು ಇಲ್ಲಿರುವುದು ಸಾಧುವಲ್ಲ.

ಚಂ॥ ಕನಕಮುದಂಗುರಂ ವಿಷದಮುಂಗುರಿಯುಂ ಮಡಿವಾಗಲಂಚಿ ಚುಂ ।
ಚಿನಫಲನೀಲಿ ಅಂಚಿಗೆಯು ಬ್ರಹ್ಮಿಯು ಪಾಲೆಯು ನಂಜುವಾತನುಂ ॥
ದಿನಪನ ಬೇರುಪುಷ್ಪೆ ? ಶಿಖಿ ತೊಂಡೆಯಿಮ—........ನೊಂದನೊಂ ।
ದನೆ ಕುಡಿಸುಂ ಫಣಿಯ ? ವಿಷಂ ಕಿಡುಗುಂ ಜಿನಪಾದಶೇಖರಾ ॥ ೧ ॥

7. ಕ್ಷತಧವಕಾಶಾವಸ್ಥಾ (ಖ) ಕ್ಷತವಾದಾಕಾಶಾವಸ್ಥಾಗ್ರದೊಳ್ ಬಳಿಯಂ (ಗ) ಕ್ಷತದವಕಾಶಾಧಸ್ಥಾಗ್ರ (ಕ) 8. ಪೞಿಯಂ (ಖ) ಬಳಿಯಂ (ಘ) 9. ದಷ್ಟನಿಕ್ಕುಗೆ (ಗ) ಟಕ್ಕಿ (ಕ) 10. ವಿಧರಕ್ತ (ಗ) 11. ಮಿಷ್ಟಂ (ಖ) 12. ಷೇಕತೆಯಿಂ (ಘ) ಷಿಕ್ತತೆಯಿಂ ದುತ್ಕೃಷ್ಟಮನೆ ಯೌಷಧಿ (ಗ) 13. ಮೆನಲೊಡಯು ಕುಡಿಯು ಕುಡು (ಗ) 14. ಪಾಂ ಬ್ವಾಂ ಪಾಂ ಹಾಂ ಬ್ವಾಂ ಹ್ರಾಂ ಖ್ರೋಂ ಬೋಂ ಬ್ರೋಂ ಬ್ರಾಂ ಭ್ರಾಂ ಖ್ರೋಂ (ಘ) 15. ಚ್ರೋಂ ಳಾಂ ಪ್ಲಾಂ (ಖ) ಬ್ರೋಂ ಬ್ರೋಂ ಪಾಂ ಬಾಂ ಭ್ರೋಂ ಬಾಂ ಭಾಂ ಭ್ರೋಂ ಎಂದು (ಗ) 16. ಫಿಂ ಬೂಂ (ಕ)

* ಪಾನಾಖ್ಯಾಯಮಂತ್ರ—(ಖ)(ಘ)

ಕಂ|| ಎಸೆವೀ ಮಂತ್ರದಿನಭಿಮಂ |
ತ್ರಿಸಿ ಕುಡುವುದು ಮರ್ದನಂತಱಿಂ ದಷ್ಟನ [1]ಸಂ ||
ಧಿಸಿದ ವಿಷಂ ತೊಲಗುಗುಮೆಂ |
ದಸದೃಶಗುಣಿ[2]ಯೆನಿಪ್ಪ ಮಂಗರಾಜಂ ಪೇೞ್ದಂ || ೪ ||

ಸಪ್ತಧಾತುಗತ (ವಿಷಲಕ್ಷಣಂ)ಕ್ಕೆ.

ಕಂ|| ಕ್ರಮದಿಂದೆ ಸಪ್ತ[3]ಧಾತುಗ |
ಳುಮನಾವರ್ತಿಸಿದ ವಿಷಮುಮಂ ದಷ್ಟನ[4]ಸಂ ||
ಕ್ರಮವಿಷಭೇದಮುಮಂ ತ |
ತ್ಪ್ರಮಿತಾಪ[5]ಹರೌಷಧಂಗಳಂ ವಿರಚಿಸುವೆಂ || ೫ ||

ತ್ವಗ್ಗತ (ವಿಷಲಕ್ಷಣಂ)ಕ್ಕೆ—

ಕಂ|| ವಿಷಮುಂ ತ್ವಗ್ಗತಮಾಗಿರೆ |
ವಿಷಧರದಷ್ಟಂಗೆ ತಡೆಯದಕ್ಕುಂ [6]ಸ್ವೇದಂ ||
ವಿಷಮು[7]ಶ್ವಾಸಮುವಂಗಂ |
ನಿಷೇವಣೀಯಂಗಳಪ್ಪ ಮರ್ದಂ ಪೇೞ್ವೆಂ || ೬ ||

ಅದಕ್ಕೌಷಧಂ—

ಕಂ|| ಉತ್ತರಣೆಯರ್ಕಮೂಲಂ |
ಮತ್ತಂ ತ [8]ತ್ಪಲಿನಿ ರಕ್ತಚಂದನಮಿನಿತಂ ||
ಬಿತ್ತರದೊಳರೆ[9]ದುದಂ ಕುಡಿ |
ಸುತ್ತುಂ ಲೇಪಿಸೆ ವಿಷಘ್ನಮುಂ ತ್ವಗ್ಗತದೊಳ್ || ೭ ||

ರಕ್ತಗತ (ವಿಷಲಕ್ಷಣಂ)ಕ್ಕೆ—

ಕಂ|| [10]ಕಂಗಳ್ ಶೋತ್ರಂಗಳೆನಿ |
[11]ಪ್ಪಂಗಂಗಳ್ ವೇದನಾಸ್ಪದಂಗಳೆನಿಕ್ಕುಂ ||
ಪೊಂಗೆ ವಿಷಂ ರಕ್ತದೊಳಸಿ |
[12]ತಂಗಳ್ ದಶನಂಗಳಪ್ಪ[13]ವಾ ಗರಳಕ್ಕಂ || ೮ ||

[14]ಅದಕ್ಕೌಷಧಂ—

ಕಂ|| ಬೆರಸಿರಲುಶೀರ ಚಂದನ |
ಸುರಕ್ತಮಂತಾ ಪ್ರಿಯಂಗು ಕುಂಕುಮ ನಖಮುಂ ||
ನಿರುತಂ ಲೇಪನ ಪಾನಮು |
[15]ನಿರದೀಯಲ್ ಪರೆಗುಮರಿದೆನಿಪ್ಪ ವಿಷಂಗಳ್ || ೯ ||

1. ನಂತದಱಿಂದಷ್ಟನಾ ಸಂಧಿಸಿದ (ಕ) 2. ಯೆನಿಪಮಂಗರಾಜನ (ಸು) ಮತದಿಂ (ಗ) 3. ಧಾತುಮನಾ (ಗ) 4. ಸಂಕ್ರಮಿಪ (ಘ) ಸಂಕ್ರಮಿತ ವಿಷ (ಖ) (ಗ) 5. ಹರದೌಷಧಗಳಂ (ಘ) ಹದಾಷದಂ (ಗ) 6. ಶ್ವೇತಂ (ಗ) 7. ಶ್ವಾಸಮುವಂಗಂ (ಖ) ಮನಂಗಂ (ಕ) 8. ತತ್ಪಲಿತ ನೀರಚಂದನ (ಖ) ತ್ವಕ್ಷಲಿನಿರಕ್ತ (ಕ) ತತ್ಪಲಿಬಿ (ಗ) 9. ದದಂ (ಘ) 10. ಕಂಗೊಳ್ (ಘ) 11. ಪ್ಪಂಗಗನದನಾಸ್ಪ (ಖ) ಪಂಗಳೆಡನಾ....ಕುಂ (ಕ) 12. ತಂಗಳಶನಂಗಳಪ್ಪ (ಗ) 13. ಪಾದರಗಳಪ್ಪಂ (ಕ) 14. ಯಿಂತಪ್ಪವರ್ಣದವಿಷಂ ಬಂದದಕ್ಕೌಷಧ? (ಗ) ನಖಳಂ (ಕ) 15. ನಿರದೀಯೆಸಮಂತು ರಕ್ತಗತವಿಷಮುೞಿಗುಂ (ಘ) ಬಗೆಗುಂ ಮರಿದೆನಿಪ್ಪ ವಿಷಂಗಳಂ (ಗ)



ಮಾಂಸಗತ(ವಿಷಲಕ್ಷಣಂ)ಕ್ಕೆ.

ಕಂ|| ಭೂತಳವಸ್ತ್ರಾದ್ಯಂಗಳ್ |
ಪೀತಾಭಮಮಾದೊಡಂ ಭ್ರಮಂ ವಮನ[1]ಕದು ||
ಷ್ಣಾತಿಶಯದಿಂದೆ ಮಾಂಸ |
ವ್ರಾತದೊಳೊಂದಿದ ವಿಷಂಗಳಂತಲ್ಲದೊಡಂ || ೧೦ ||

[2]ಲಾಲೆ ಬಹುದಂತಮುಂ ಸುಕ |
ರಾಲಂ ಮಾಂಸ[3]ಗತಮಾಗಲಕ್ಕುಮದರ್ಕಂ ||
ಕಾಲಕ್ಷೇಪಂಗೆಯ್ಯದಿ |
[4]ರಾಲೋಚಿಸು ಮಂತ್ರಮಣಿ [5]ಚಿಕಿತ್ಸಾದಿಗಳಂ || ೧೧ ||

ಅದಕ್ಕೌಷಧಂಗಳ್—

ಕಂ|| [5]ಹಿಂಗು ಮಧು ಮಧುಕ ಕುಂಕುಮ |
[6]ಸಂಗತ ಮೆನಿಸಿರ್ದ ರೋಹಿಣಂ ಪಾನವಿಲೇ ||
[7]ಪಂಗಳೆನಱಿಗುಂ ದದ್ವಿಷ |
ಸಂಗಂ ಶುಭಸಂಗಮುಂಗನನುಮತದಿಂದಂ || ೧೨ ||

ಅಸ್ಥಿಗತ(ವಿಷಲಕ್ಷಣಂ)ಕ್ಕೆ.

ಕಂ|| ವದನದ[8] ದುರ್ಗಂಧಂ ಕಾ |
ಸದತಿಶ್ವಾಸದ ವಿಕಾರ ಲಾಲಾಸ್ರಾವಂ ||
ಒದವಿರ್ದ ನಿದ್ರೆಗಳಿಗಾ |
ಸ್ಪದ ಮಕ್ಕುಮದ [9]ಸ್ಥಿಗತವಿಷಂ ವಿಷಮತರಂ || ೧೩ ||

[10]ಅದಕ್ಕೌಷಧಂ—

ಕಂ|| ಚಿತ್ರಾರ್ದ್ರಕೇಂದ್ರವಾರುಣಿ |
ಸತ್ರಿಫಲಾ ಕಟುಕರಾಜ ಕೋ[11]ಶಾತಕಿಯಾ ||
ಪತ್ರಂಗಳೊಡನೆ [12]ಕುಡೆ ವಿಷ |
ವಿತ್ರಸ್ತಂ ಪಾನಮಾತ್ರದಿಂ ಸುಖಿಯಕ್ಕುಂ || ೧೪ ||

ಮೇದೋಮಜ್ಜಾ ಶುಕ್ಲಗತ(ವಿಷಲಕ್ಷಣಂ)ಕ್ಕೆ.

ಕಂ|| ಶ್ವಾಸಂ ಕ್ಷೋಭೆ ಮಹಾ ಸಂ |
ತ್ರಾಸಂ ವಮನಂ ಯಥಾ[13]ಕ್ರಮಂ ಮೇಧೆಗೆ ಮ ||
ಜ್ಜಾಸಂಗಕ್ಕಂ [14]ಶುಕ್ಲದೊ |
ಳೋಸರಿಕುಂ ಪ್ರಾಣವಾಯು[15]ಗಳ್ ವಿಷತತಿಯಿಂ || ೧೫ ||

1. ಕದುಷ್ಮಾ (ಗ) 2. ಲಾಲಿ (ಗ) 3. ಗತ ವಿಷದಿನಪ್ಪುದು ಮದಕಂ (ಘ) ಗತಮಾಂಗಲಕ್ಕು (ಗ) 4. ರಾಲೋಕಿಸು ಮಂತ್ರ ಮಣಿಶಿತ್ಸೆಗಳಿಂದಂ (ಗ) ಮಣಿಜೀಟಗಳಂ (ಘ) 5. ಯಿಂಗು (ಗ) 6. ಸಂಗಮೆನಿಪಸಿರ್ದ (ಖ) 7. ಲೇಪನಂಗಳಿ (ಗ) 8. ದುರ್ಗಮನಂ ಕಾಸದತಿಳ್ವಾರ್ಣದವಿಕಾರ ಲಾಲಾಸ್ರಾಮ (ಖ) ಕಾಸದ ತೀವ್ರಗಳಕಾರಲಾಲಾಶ್ರಾವಂ (ಖ) ದತಿವ್ರತಗಳಕಾರಲಾಲಾಶ್ರಾವಂ 9. ಮದಸ್ಥಿಗತಂ ವಿಷಂ ವಿಷಮತರಂ (ಖ) 10. ಅವುಷಧಿ (ಗ) ಚಿತ್ರಾರ್ಧ (ಘ) 11. ಕೋಶಾತತಿಯಂ (ಗ) ತಕಿಯಂ (ಖ) 12. ಕುಡಿ (ಗ) 13. ಕ್ರಮಮೊದಗೆ(ಖ) ಮೆಯಿದೆಗೆ (ಗ) 14. ಶುಕ್ಲಪರಿಕುಂಪ್ರಾಣ (ಕ) 15. ವಾಯುವಿಷಸಂತತಿಯಿಂ (ಖ)

**ಅದಕ್ಕೌಷಧಂ—**

ಕಂ|| ಘೃತದಿಂ[1]ದಮೃತಲತಾ ಸಂ |
ಗತ ಕರ್ಕೋಟಕಿಯುತಂ [2]ಪಯಃಪಾನಮದಂ ||
ದತಿಶಯದ ಪುತ್ರಜೀವಿಯೆ |
[3]ಜಿತವಿಷಮಕ್ಕುಂತು ದುಗ್ಧಪಾನ ವಿಲೇಪಂ || ೧೬ ||

**ಸರ್ವಗತಕ್ಕೌಷಧಂ.**

ಮ|| ಘೃತದಿಂ ತ್ವಗ್ಗತ[4]ಮಾಪಯಃ ಪ್ರಯುತದಿಂ ರಕ್ತಾಶ್ರಿತಂ [5]ಮಾಂಸಗಂ |
ಕ್ಷಿತಿಯೊಳ್ [6]ಕುಷ್ಠದಿ ನಸ್ಥಿಗಂ ರಜನಿಯಿಂ [7]ಮೇದಃಪ್ರಯುಕ್ತಂ ನವೋ ||
ದ್ಗತ ಸದ್ವಾಕುಚಿಯಿಂ ಸಮಜ್ಜೆ ಕಣದಿಂ ಚಾಂಡಾಳಿಯಿಂ ಶುಕ್ಲಗಂ |
ಹತಮಕ್ಕಂತಪರಾಜಿತಾಖ್ಯ(ಖ್ಯೆಯ)ಮನದಂ ಕೊಂಡಂದು ತತ್ತದ್ವಿಷಂ || ೧೭ ||

ವ|| [8]ತ್ರಿದೋಷಗತವಿಷಲಕ್ಷಣ ಚಿಕಿತ್ಸಾವಿವರಣಂ

**ಪಿತ್ತಗತ(ವಿಷಲಕ್ಷಣಂ)ಕ್ಕೆ.**

ಕಂ|| [9]ಪಿತ್ತಗತಮಾಗೆ ವಿಷಮದು |
ಪಾ(ಪೊ)ತ್ತ ಸುಪೀತಾಭಮಕ್ಕುಮಾ ನಯನಪದಂ ||
ಬಿತ್ತರದಿಂ ಹಿತಮ[10]ಪ್ಪ |
ತ್ಯತ್ತಮದೌಷಧದೆ ಮಾೞ್ಕೆ ಪಾನಾದಿಗಳಂ || ೧೮ ||

**ಅದಕ್ಕೌಷಧಂ—**

ಕಂ|| ಚಂದನ[11]ಕುಷ್ಠಂ ತ್ರಿಫಳೆಯೊ |
ಳೊಂದಿದ ಘೃತಮಾದ್ರ್ರಕಂಗಳೊಳ್ [12]ಬೆರಸರೆದೀ ||
ಗಂದು ವಿಲೇಪನ [13]ಪಾನಂ |
ಸಂದೆಯಮೇಂ ಪಿತ್ತಗತ ವಿಷಂಗ[14]ಳನೞಿಗುಂ || ೧೯ ||

**ಕಫಗತ(ವಿಷಲಕ್ಷಣಂ)ಕ್ಕೆ.**

ಕಂ|| ಮೂಕಾ[15]ಂಧರಂದದಿಂ ಮ |
ತ್ತಾ ಕಫಯುತ ವಿಷದ ತೀವ್ರಪರಿಣಾಮದಿನಾ ||
ಳೋಕಿಸದೆ ಸುಮ್ಮನಿರ್ಕುಮ |
ನೇಕವಿಧಂ ತನುಗೆ ಬಣ್ಣಮಕ್ಕುಂ [16]ವಿಕೃತಂ || ೨೦ ||

**ಅದಕ್ಕೌಷಧಂ—**

ಕಂ|| [17]ಅಗುರರಗು ಬೋೞ ಕುಂಕುಮ |
[18]ತಗರಂ ಸರ್ಜ್ಜಂ ಕುಸುಂಬೆ [19]ಯಂಕಲೆ ಮಧುಕಂ ||
ಸೊಗಯಿಪ ಚಾತುರ್ಜಾತಕ |
ಮೊಗೆದ ಕಫಾನ್ವಿತ [20]ವಿಷಾಪಹಂ ಕೃತಪಾನಂ || ೨೧ ||

---

1. ಮಮಪ್ಪತಮಂತಾಂಸಂಗತ ಕಟಿಕಿ (ಖ) 2. ಪಯಱ್ಪಾನಮದುಂತತಿಶ್ರಯದ (ಖ) ಪಾನಮುಮಂದತಿ (ಘ) 3. ಜಿತವಿಷಮಕ್ಕುಂತದ್ದುಗ್ಧತಾನ ವಿಲೇಪಂ (ಕ) 4. ಮಾಂಸಯಃ (ಖ) 5. ಪಾಂಸಗತಂ (ಕ) 6. ಯೊಳ್ಕುಷ್ಮದಿ (ಗ) 7. ಮೇಧಾಪ್ರಯುಕ್ತಂ (ಗ) 8. ಈ ವಾಕ್ಯವು "ಗ" (ಖ) ಪ್ರತಿಗಳಲ್ಲಿಲ್ಲ. ಆ ದೋಷಗತವಿಷಗಳ ಲಕ್ಷಣಚಿಕಿತ್ಸೆ (ಘ) 9. ಮಿಪಿತಪಗತಮಾಗೆ (ಖ) ಮಪ್ಪುತ್ತಮ (ಖ) 10. ಮಿಕ್ಕುಪ್ಯುತ್ತಮದೌ (ಗ) 11. ತ್ರುಷ್ಟಂ. 12. ಬೆರಸಿರೆದಿಗಂದು ಲೇಪನ (ಗ) 13. ಪಾನದೆ (ಘ) 14. ಗಳಕಳೆಗುಂ (ಘ) 15. ದರುದದಿಂ ಮತ್ತಾತಪಯುಗತ (ಗ) 16. ವಿಶ್ರುತಂ (ಗ) 17. ಅಗಿಲರಗು (ಘ) 18. ತಗರಂ....ಕುಸುಂಬೆ (ಕ) ತಗರಂ ಸರ್ಜರಸಕುಸಂಬೆ (ಖ) ಸರ್ಜರಸಕಂಸಬೆ (ಘ) ತಗರಂ ಶತಿಂಕಂಸುಂಬೆ (ಗ) 19. ಯಂಕುಲೆ (ಘ) ಯಂಕೊಲೆ (ಗ) 20. ವಿಷಾಹಂ (ಗ) ಕಫಾನ್ವಿತದ ವಿಷಹರಂ (ಖ)



**ವಾತಗತ(ವಿಷಲಕ್ಷಣಂ)ಕ್ಕೆ.**

ಕಂ|| ಶ್ವಾಸಮತಿಮೂರ್ಛೆಯಕ್ಕುಂ |
ಮಾಸುಗುಮಾನನದ ವರ್ಣಮುಂ ಶೇಮುಷಿಯಂ ||
ತೋಸರಿಕು [1]ಮಂಗಮುಡುಗುಗು |
ಮಾಸುರದ ಸಮೀರಣಸ್ಥ[2] ವಿಷದಿಂ ದಿಳೆಯೊಳ್ || ೨೨ ||

**ಅದಕ್ಕೌಷಧಂ—**

ಕಂ|| [3]ಪಾರೋಪದಾಕ್ಷಿ ತಾಳಕ |
ಚಾರು[4]ಮನ ಶ್ಶಿಲೆಯೆನಿಪ್ಪಿವಂ ಶೀಘ್ರದೊಳಂ ||
[5]ನೀರೊಳರೆದೀಂಟಿ ಪೂಸಲ್ |
ಮಾರುತ[6]ಗತವಿಷಮವಿಷಹರಂ ಗುಣನಿಲಯಾ || ೨೩ ||

ತ್ರಿದೋಷಂಗಳ್ ಸಪ್ತಧಾತುಗಳಂತರ್ಭಾವಿತಂಗಳಪ್ಪುದಱಿಂ-

ಮ|ಸ್ರ|| ಕ್ರಮದಿಂ [7]ಕಂಡೂಪ್ರದಾಹಂ ಭ್ರಮೆ ಪತನ ಮಹಾಕ್ಷೋಭೆ ಮೂರ್ಛಾಗತಪ್ರಾ[8] |
ಣಮೆನಿಪ್ಪೀ ಸಪ್ತಚಿಹ್ನಂ [9]ನರರೊಳಹಿವಿಷಗ್ರಸ್ತರೊಳ್ ತೋರ್ಕುಮೆಂದ ||
ಭ್ರಮ[10]ರಪ್ಪರ್ ಪೂರ್ವಸೂರಿ ಪ್ರಭುಗಳಱಿಪಿದರ್ ಸಪ್ತಧಾತುಸ್ಥದಿಂ ದೆಂ |
ದು ಮಹೀ ಚಕ್ರಕ್ಕೆ [11]ಸಂದುಗ್ರಮೆನಿಪ ವಿಷದಿಂ [12]ನೋಡೆ ಸ(ತ)ದ್ಭಾವಿತಾತ್ಮರ್||

ಕಂ|| [13]ಬಗೆಗೊಂಡು ಕೆಲಂಬರ್ [14]ಧಾ |
ತುಗಳೊಳ್ ತ್ವಕ್ಪ್ರಮುಖಮಾಗಿ ಯಾ ಶುಕ್ಲಾಂತಂ ||
ಜಗದೊಳ್ [15]ತ್ವಗ್ಗತವಿಷಮುಂ |
ದ್ವಿಗುಣಕ್ರಮ [16]ವೃದ್ಧಿಯಿಂದ ಮೇಲೞಱೊಳಿರ್ಕುಂ || ೨೪ ||

ತುಷಮಾತ್ರಮೆಂಬರೆಲ್ಲಾ |
ವಿಷಮಂ [17]ಮರ್ದುಗಳ ಶಕ್ತಿಯಂ [18]ಬಲ್ಲುದಱಿಂ ||
ವಿಷಮುಮಸಾಧ್ಯ[19]ಮದೆಂಗುಂ |
ಭಿಷಗ್ವರರ್ ಮನುಜರಂತ್ಯಧಾತುಸ್ಥಮುಮಂ || ೨೬ ||

---

1. ತೊಸರಿಕುಮೆನಿಪ್ಪವ ಶೀಘ್ರದೊಳಂ ಮಾಸಲುಮಾರುತಗತ ವಿಷಹರಂ (ಕ) (ಎಂದು ಎರಡು ಕಂದಗಳು ಸೇರಿವೆ) 2. ಸಮೀರಣಸ್ತವ (ಖ) 3. ಪಾರದವ(ರ)ರಾಟತಾಳಕ (ಘ) ಪಾರಾಪಥೋ(ತಾ)ಕ್ಷಿ ತಾಳಕ (ಗ) 4. ಮಣಿಸಿಲೆ (ಖ) ಮಣಿಸಿಲೆಯೆನೆಯೆನಿಪ್ಪಂ (ಗ) 5. ನೀರೊಳರೆದಿರಿಸೆ ಪೂಸಲು (ಗ) ಮಾಸಲು (ಕ) 6. ಗತಿ (ಖ) 7. ತಂಡು (ಗ) 8. ಪ್ರಣಮೆನಿಸಪ್ತ (ಗ) 9. ನರಮೊ........ಸ್ತನೊಳ್ (ಖ) 10. ರಪ್ಪಾಪೂರ್ವ (ಘ) 11. ದುಗ್ರಮೆನೆವಿಷ—ಡಿದದ್ಭಾವಿತಾತ್ಮರ್ (ಗ) ತಾತ್ಮಂ (ಖ) ಸಂದಗ್ರಹಮೆನೆ(ಕ) 12. ನೋಡಿ(ಘ) 13. ಬಗೆದೊಂದು(ಘ) 14. ಧಾತುಗಳಂ ತತ್ಪ್ರಮುಖಮೆಂಬರವು ಶುಕ್ಲಾಂತಂ (ಖ) ಧಾತುಗಳಂ ತತ್ವವನುಶುಭಮೆಂ ಬರುವು (ಗ) 15. ತದ್ಗತವಿಷಮಂ (ಕ) ಜಗದೊಳ್ ವೆಗ್ಗಳವಿಷಮುಂ (ಗ) 16. ಬುದ್ಧಿಯಂ ದಮಳರೊಳಿರ್ಕುಂ (ಗ) 17. ಮದ್ದುಗಳ (ಗ) ಮೆದುಗಳ (ಖ) 18. ಬಲ್ಲವರೀವಿಷಮವಸಾಧ್ಯದಿರವಂ ಭಿಷಗ್ವರರ್ಮನುಜರಂತ್ಯದುಸ್ತಮುಮಂ (ಗ) 19. ಮದೆಂದುಂ (ಘ)

## [1] ವಿಷವೇಗಂಗಳ್

ಮ|| ಸ್ರ|| ಧರೆಯೊಳ್ ದರ್ವೀಕರೋಗ್ರಪ್ರಥಮವಿಷವಿಕಾರಂಗ[2]ಳೆಂತೆಂದೊಡಂ ಮ |
ರ್ತ್ಯರೊಳಾದಷ್ಟಂಗೆ ಮೂರ್ಛಾಪರಿ[3]ಣತಿ ಯಧಿಕಂ ರಕ್ತಮುಂ ಮಾಂಸಮೆಲ್ಲಂ ||
ಕರಿದಕ್ಕುಂ [4]ನಾಡಿಯುಂ ತತ್ಪ್ರಕೃತಿ[5] ವಿಕೃತಿಯಕ್ಕುಂ ದ್ವಿತೀಯಾಖ್ಯವೇಗಂ |
ಬೆರಸಲ್ಕಂತಾ ಪ್ರಕಾರಂ [6]ಪರಿಕಿಸೆ ದಿಟದಿಂದಂ ತೃತೀಯಾಭಿ[7]ಧಾನಂ || ೨೭ ||

ಕಂ|| [8]ಸಂಗಳಿಸಲ್ಕೆ ಶಿರೋರೋ |
ಗಂಗಳ್ ಚಕ್ಷುರ್ದ್ವಯಂ [9]ಗುರುತ್ವಮೆನಿಕ್ಕುಂ ||
ಪಿಂಗದಿ[10]ರಲ್ಕುಪಯೋಗದ |
ಭಂಗಿಯೊಳೆ ಚತುರ್ಥವೇಗದೊಳ್ ಬೆರಸಿರ್ಕುಂ || ೨೮ ||

[11]ಒಸರ್ಗುಂ ನಾಸಿಕದೆಡೆ ಕಫ |
ದೆಸಕದೊಳಂ[12]ತಪಿತನಲ್ತೆ ಪಂಚಮವೇಗ ||
ಕ್ಕಸದೃಶಹಿಕ್ಕಾಯುಕ್ತಂ |
ಪೆಸರೆನಿಸಿದ ಷಷ್ಠವೇಗಮುಂ ವಿಷಮಕರಂ || ೨೯ ||

[13]ಅದೆಂತೆಂದೊಡೆ—

ಕಂ|| ದೇಹದತಿ ಮೂರ್ಛೆ [14]ಯುದಿತವಿ |
ದಾಹಂ ಗಳಿ[15]ವಕ್ಕುಮಿಂತು ಸಪ್ತಮದೊಳ್ ಸಂ ||
ದೇಹಂ ಮರಣಮದಕ್ಕುಂ |
ತ್ರಾಹಿ[16]ಯೆನಲ್ ಗರುಡನಾದೊಡಂ ರಕ್ಷಿಪನೇ || ೩೦ ||

[17]ಅಂತಾದೊಡಂ—

ಮ|| ಮೊದಲೊಳ್ [18]ಮಾಱ್ಪುದು ಶಸ್ತ್ರಕರ್ಮಮದಱಿಂದಂ ತದ್ದ್ವಿತೀಯಾಖ್ಯದೊಳ್ |
ವಿದಿತಂ ರಕ್ತವಿಮೋಚನಂ [19]ಬಳಿಯಮೆಂತುಂ ತತ್ತೃತೀಯಾಹ್ವದೊಳ್ ||
ಪುದಿದಾ ಘೋರವಿಷಕ್ಕೆ ಪಾನಮೆಸೆವೀ ನಸ್ಯಾಂಜನಂಗಳ್ ಸುಖ ||
ಪ್ರದಮಕ್ಕೌ[20]ಷಧಮಾಶು ನಾಶಮನದುಂ ಮಾಱ್ಕುಂ [21]ಚತುರ್ವೇಗದೊಳ್ || ೩೧ ||

ಕಂ|| ಪಂಚಮವೇಗದೊಳಭಿಮಂ |
ತ್ರಾಂಚಿತ [22]ಶೀತೋದಕಂಗಳಿಂ ಕಚ್ಚಿರ್ಕ ಬಳಿ ||
ಕ್ಕಂ[23]ಚದುರಂ ಮಾಂತ್ರಿಕ ತ |
ತ್ಸಂಚಿತ ದಿವ್ಯೌಷಧಂಗಳಂ ತೊಡೆ ಬಳಿಕಂ || ೩೨ ||

1. ಇದು ಕ. ಖ. ಗ. ಪ್ರತಿಗಳಲ್ಲಿಲ್ಲ. 2. ಳೆಂತಿಟ್ಪೊಡಂ (ಗ) 3. ಪರಿಣತೆ (ಗ) 4. ನಾಡೆಯುಂ (ಖ) 5. ಕೃತಿಯುಂ (ಗ) ಯಕ್ಕುಂ ಪ್ರಿಂಗದಿರಲ್ಕಪಯೋಗಡ ಭಂಗಿಯೊಳೆಚ್ಚತ್ತುರ್ಥಿವೇಗದೊಳ್ವಿರ ಸಿರ್ಕುಂ || ೨೮ || ದ್ವಿತೀಯಾಖ್ಯವೇಗಂ ಬೆರಸಲ್ಲಂ ತಾ ಪ್ರಕಾರಂ ಪರಿಕಿಸೆ ದಿಟದಿಂದಂ ತೃತೀಯಾಭಿಧಾನಂ||. ೨೯ || (ಕ) 6. ಪರಿಕಿಸಿ (ಖ) 7. ಯಾಭಿದೂತಂ (ಗ) ಯಾಭಿಘಾತಂ? 8. ಸಲ್ಕೆ........ಂಗಳ (ಖ) 9. ದ್ವಯಂಗಳರುತ್ವ (ಖ) 10. ದಿರಲ್ಕಪ, ದಿರಲ್ಕಫ (ಗ) 11. ಪೊಸರ್ದುಂ (ಗ) ಪೊಸರ್ಗುಂ (ಘ) ಜವರ್ಗಂ (ಖ) 12. ತಪೇತನಲ್ತೆ—ಗಕ್ಕೊಸದೃಶವೆತ್ತಾಯುಕ್ತಂ—ಶಷ್ಟವೇಗಮುಂ ವಿಷಮುಕ್ಕುಂ (ಗ) ಕಂಪಿತನಲ್ತೆ (ಘ) 13. (ಗ) ಪ್ರತಿಯಲ್ಲಿಲ್ಲ. 14. ಯಹಿಕೋದಾಹಂಗಳಿದೆಕ್ಕು (ಕ) ಯಾದೊಡಾಹಂಗ (ಖ) 15. ವಕ್ಕುಮಲ್ತೆ (ಘ) 16. ಯೆನಲರುತವಾದೊಡಂ (ಗ) 17. ಇದು (ಗ) ಪ್ರತಿಯಲ್ಲಿಲ್ಲ 18. ಮಾಱ್ಪಂದು ಶಸ್ತ್ರಕ್ರಮ. 19. ವಿವೇಚನಂ ಚಳಿಯ (ಕ) 20. ಷಧಮಾ........ಮನದುಂ (ಖ) ಸುಖಾಸ್ಪದಮಕ್ಕೌಷಧ (ಘ) 21. ಚತುರ್ಥಾಂಗದೊಳ್ (ಕ) 22. ಶೀತೋ (ಗ) 23. ಚತುರ ಮಾಂತ್ರಿಕಂ ತತ್ಸಂ (ಗ) ಚೇತಂ ಮಾಂತ್ರಿಕಂ (ಖ)



ಕಂ|| ಶೀತದ್ರವ್ಯಾ[1]ಲೇಪಂ |
ಮಾತೇಂ ಶೋಧನ ವಿಶೇಷಮುಂ ಪಂಚಮವೇ ||
ಗಾತಿಶಯಷಷ್ಠವೇಗವಿ[2] |
ಘಾತಮುಮಂ ತೊಲಗಿಸಲ್ಕಮಿವೆ ಶಕ್ತಂಗಳ್ || ೩೩ ||

[3]ವೇಗದೊಳಾ ಸಪ್ತಮದೊಳ್ |
ಬೇಗಂ [4]ನಸ್ಯಾಂಜನಾದಿಯಂ ಮಾಱ್ಕೆ ಬುಧಂ ||
ಪೋಗದೊಡೆ ಕಾಕಪದದವೊ |
ಲಾಗಳೆ ಶಿರದೊಳ್ ಕೃತಕ್ಷತಾದಿಕ್ರಿಯೆಯಿಂ || ೩೪ ||

ವಿಸ್ತರ [5]ಧಾತ್ವಂಗವಿಷ |
ಪ್ರಸ್ತುತ ಮೆನಿಸಿದ ಚಿಕಿತ್ಸೆಯಂ [6]ಪೇೞ್ದಂ ನಾಂ ||
ಶಸ್ತತರಂ ಹಿತಮಿದುವೆ ಸ |
ಮಸ್ತವಿಷಕ್ಕೆಂಬ [7]ಮರ್ದನಾಂ ಪ್ರಕಟಿಸುವೆಂ || ೩೫ ||

ಅದೆಂತೆಂದೊಡೆ—

ಮ|| ಅಮರ್ದಿರ್ಪುತ್ತಮಪಾನ ನಸ್ಯಕವಳಂ ಗಂಡೂಷಮುಂ ವಾಂತಿಯುಂ |
ಸಮಸಂದೊಪ್ಪುವ [8]ಬೇದುಕಟ್ಟು ತಿಲಕಂ ರಕ್ಷಾವಹೋದ್ವರ್ತನಾ[9] ||
ದ್ಯಮೃತೋದ್ಯದ್ಘೃತತೈಲಕಜ್ಜಳಮೆನಿಪ್ಪೀರೇೞು ಭೇದಂಗಳಂ |
ರಮಣೀಯಂಗಳೆನಿಪ್ಪವಂ ತಿಳಿಪುವೆಂ ಸಾಂಗಂ ವಿಷಘ್ನಂಗಳಂ || ೩೬ ||*

ಚಂ|| ರಸ ಪೊಸಗಂಧಕಂ ರಜನಿ ಟಂಕಣ ತುತ್ಥಮಿವೆಯ್ದುಮೊಂದ[10]ಲೊಂ |
ದಿಸು ಸುರದಾಳಿಯ ದ್ರವದೆ ಮರ್ದಿಸಿ ಮಾಡಿದ ನಿಷ್ಕಮಾತ್ರದಿಂ ||
[11]ವಿಸೃತವಿಷಂ ಮೆಲಲ್ಕೆ ಫಣಿದಷ್ಟನದಲ್ಲದೊಡಂ ಸಮೂತ್ರಮಿಾಂ |
ಟಿಸೆ ವಿಷಹಂ [12]**ಕೃತಾಂತಕುಧರಾಶನಿ**ಯೆಂಬಭಿಧಾನಮಿಾ ರಸಂ || ೩೭ ||

ಕಂ|| [13]ಬಾವುಜಿಗೆಯ ಬಿತ್ತಂ ನೆಱೆ |
ಭಾವಿಸಿ ಗೋಮೂತ್ರದಿಂದದಂ ತಜ್ಜಲದಿಂ ||
ಸೇವಿಸಲದು ತಾಂ **ಮೃತಸಂ** |
**ಜೀವಿನಿ** ಕಳೆಗುಂ ಚರಾಚರಂಗಳ ವಿಷಮಂ || ೩೮ ||

1. ಲೇಪನಂ ಮಾಡಿಂ(ಗ) 2. ದಿಷಾತಮುಮಂ ತೊಲಗಿಸಲ್ಕೆ ನಿವೇಶಕಂಗಳೂ(ಗ) 3. ನಾ(ವೇ)ಗದೊಳಂ (ಗ) 4. ನಸ್ಯಾಂಜನಂಮಾೞ್ಕೆ (ಖ) 5. ದಾಶ್ವಂಗ, ಧಾತ್ವಂಶ? (ಖ) ಧಾತ್ವಂಗ ಪ್ರಸ್ತುತಮೆನೆ ಚಿಕಿತ್ಸೆಯಂ ಪೇೞ್ದಿಂನಾಶಕ್ತಿತರಂ (ಗ) 6. ಪೇೞ್ದಿನ್ನಾಂ (ಘ) ನ್ನಾಂ ಸ್ವತರಂಹಿತ (ಖ) ಸದಸ್ಥತರಂಹಿತ (ಕ) 7. ಮರ್ದನಿಂ (ಘ) ರ್ದನುಂ (ಖ) 8. ಭೇದಗಟ್ಟು (ಖ) 9. ನಾದ್ಯಘೃತತೈಲಕಂ ರಜನಿ ಟಂಕಣತುತ್ಥಮಿಪ್ಪೆದ (ಕ) (ಗ್ರಂಥಪಾದವಿದೆ.) ತೈಲತಜ್ಜಲಮೆನಿಪ್ಪರೇೞು (ಗ) ಶಾಳಿನಿ (ಗ) 10. ಲೊಂದಿನಿಸುಸುದಾಳಿಯ (ಕ) ನೊಂದನೊಂಪಿಸಿ (ಗ) 11. ವಿಶ್ರುತ ವಿಷಂಮೆನಲ್ಕೆ (ಕ) 12. ಕೃತಾಂತುಕ ಕುದಿಶಾಸನಿ (ಕ) ಕೃನಾಂತಕು ಕುಳಿ ವಿಷಹರಂ (ಗ) 13. ಬಾವುಜೆಯ ಬಿತ್ತನೆರೆಭಾವಿಸಿ——ದಿಂದವಂ (ಗ) ದಿಂದಂತದಂ (ಖ)

*. ಇನ್ನು ನಾನಾಪ್ರಕಾರಂಗಳಪ್ಪ ಪದಿನಾಲ್ಕುತೆಱದ ತಂತ್ರಗಳ ಸೂಚನೆಮಂತ್ರಂಗಳಿಂ ಪಂಡಿತಮಾಂತ್ರಿಕ ಸಚ್ಚರಿತ್ರರಪ್ಪಸೂರಿಗಳ್ಗೆ ಅಱಿಪುವೆನದೆಂತೆಂದೊಡೆ ("ಗ" ಪ್ರತಿಯಲ್ಲಿಮಾತ್ರ ಇದೆ.)

ಕಂ|| ಟಂಕಣ ಮುಶಲೀಕಂದಮು |
ಮಂ ಕುಡಿಸುಗೆ ನೀರೊಳಂತುಮಲ್ಲದೊಡಂ ಮೇಣ್ ||
ಪಂಕಜದ ಮೂಲಟಂಕಣ |
ಮಂ ಕೊಳಲಾಕ್ಷಣದೊಳಱಿಗುಮಹಿಕುಲದ ವಿಷಂ || ೩೯ ||

[1]ಮುಸ(ಶ)ಲೀಕಂದಂ ಕಟುಕಂ |
[2]ಕುಶಲತರಂ ಸರ್ಪದಷ್ಟವಿಷಹರಮಕ್ಕುಂ ||
[3]ವಶಮಲ್ಲದ ವಿಷತತಿಯಂ |
ಪ್ರಶಮಿಸುಗುಂ ಕವಿಸರೋಜಭಾಸ್ಕರಮತದಿಂ || ೪೦ ||

ಕೈಪೆ[4]ಸೊರೆಯೆಸೆವ ಮೂಲಮು |
ನಾ ಪತ್ರದ[5] ರಸದೊ[6]ಳರೆದು ಗೋಮೂತ್ರದೊಳಂ ||
[7]ಲೇಪಿಸುವುದು ಕುಡಿಸುವುದು ವಿ |
ಷಾಪಹಮಕ್ಕುಂ ವಿವೇಕಚೂಡಾರತ್ನಾ || ೪೧ ||

ಸುರದಾರು[8]ವರ್ಕ ಲಾಂಗಲಿ |
ಕರವೀರಂ ಚಿತ್ರಕಂಗಳೆಂಬಿವನಿಂಬಿಂ ||
ದರೆದುರಗದಷ್ಟನಪ್ಪಂ |
[9]ಗಿರದೀಂಟಿಸಲದು ವಿಷಾಪಹಂ ಬುಧಬಂಧೂ || ೪೨ ||

ಉ|| ಪಿಪ್ಪಲಿ [10]ಶೃಂಗಿವೇರ ಮರಿಚಂ ಮೊಸರುಂ ಪೊಸಕೋಷ್ಠಮೆಯ್ದೆ[11]ಲೇ |
ಸಪ್ಪಿನಿದಪ್ಪ ಬೆಣ್ಣೆ ಮಧು ಸೈಂಧವಮೆಂಬಿವನೆಯ್ದೆ ಕೂಡಿಕೊಂ ||
ಡೊಪ್ಪುವ [12]ಯೋಗಮಂ ಭರದೊಳಂ ದಧಿ ಮಸ್ತುಕಯುಕ್ತಪಾನದಿಂ |
[13]ತಪ್ಪಿಸಿ ಕಾಲದಷ್ಟವಿಷಮಂ ಪರೆಗುಂ ನರರಂ ಬುಧೋತ್ತಮಾ || ೪೩ ||

ಕಂ|| ಗಿರಿಕರ್ಣಿಕೆಯಂ ಕಱಿಯಿಂ |
ದಿರದೀಂಟಲ್ ಫಣಿಯ ವಿಷಮುದಱಿಗುಂ ಮೇಣ್ ಚೆ ||
ಚ್ಚರದಿಂ[14]ದರೆದು ಗುಡೂಚಿಯ |
ನಿರದೀಂ[15]ಟಲ್ ಕಱಿಯೊಳಂ ವಿಷಘ್ನಮೆನಿಕ್ಕುಂ || ೪೪ ||

[16]ತಾಱಿ ಮಣಿಶಿಲೆಗಳಂ ಕಾ |
ಯ್ದಾಱಿದ ನೀರಿಂದೆ ಕುಡಿಸೆಯುಂ [17]ಮೇಣ್ ನೀ(ರೊಳ್)ರಿಂ ||
ಬೇಱೆ ತೊಱೆಮಲ್ಲಿಗೆ[18]ಯೊಳಂ |
ಮಾಱಿದ ವಿಷಮಿಱಿಗುಮಿಲ್ಲಿ ಸಂದೆಯಮುಂಟೇ || ೪೫ ||

---

1. ಮುಶಲಿಯ. 2. ಕುಶಲಕರಂ (ಖ) 3. ಬಸಮಲ್ಲದ 4. ಸೋರೆ. 5. ಯೆಸರೊಳರೆದು(ಗ) 6. ಳರೆದು ಗುಡುಗೋಮೂತ್ರ (ಕ) 7. ಲೇಪಿಸುಗೆ ಕುಡಿಸೆ (ಗ) ವುದು ಕಂಡೆಸುವುದು (ಕ) 8. ದಾರು ವಲ್ಕಲಾಗುಲಿ (ಖ) 9. ಗರಿದೀಂ (ಕ) 10. ಶೃಂಗವೇರ (ಖ) 11. ಲೇಸಿಪ್ಪಿನಿ (ಕ) 12. ಯೋಗ ಮಂಭರದೊಳಂದಡೆಮಸ್ತುಕ (ಖ) 13. ತಪ್ಪಿಸೆ ಕಾಲದಷ್ಟವಿಷಮುಂ ಪರೆಗುಂ. 14. ದರಿದು. 15. ಟಲ್ಕಳೆಯೊಳಂ (ಘ) 16. ತಾರಿ ಮಣಿಶಿಲೆಯುಂ (ಖ) 17. ನೀರೊಳ್ ಪೇಱೆ ತೋಱೆತಿರಮಲ್ಲಿಗೆಯುಂ (ಕ) 18. ಯುಮರಿ ಮಾಱದೆ ವಿಷದಮಱಿಗುಮಲ್ಲ (ಖ)



ಚಂ|| ಸಿರಿಸ ಗುಡೂಚಿ ರಂಜಿ[1]ಗೆಯುಮಿಾಶ್ವರಿ ಕತ್ತರಿ ದೇವದಾರು[2]ಕಾ |
ಸರಿಕೆ ವರಾಶ್ವಗಂಧಿ ಕಟುಪ(ಕ)ರ್ಣಿಯೆನಿಪ್ಪವಱಲ್ಲಿ ಯುಕ್ತಮಾ ||
ಗಿರಲರೆ ಕಾಡಮಲ್ಲಿಗೆಯೊಳಂ ಕಱಿ(ಳಿ)ಯಿಂದತಿ ಕೈಪೆಯಪ್ಪ ಕಾ |
ಱಿಕ್ಕೂರೆಯೆಳಗಾಯ್ಗಳೊಪ್ಪುವ ರಸಪ್ರಸರಂಗಳೊಳೊಂದೆ ಮತ್ತದಂ || ೪೬ ||

ಕಂ|| ತೂಗುವುದು ಮೂಱು ಪೊಂಪ(ಣ್ಪ)ಣ |
ಮಾಗಿರೆ ಮಾಡುವುದು [3]ವಳಿಗೆಯಂ ಕೆಯ್ಯಿಂದಂ ||
[4]ನಾಗಸುದಷ್ಟಗೆ ಪೂಸುವು |
ದಾಗಳೆ ತತ್ಪಾನನಸ್ಯಲೇಪನವಿಧಿಯಿಂ || ೪೭ ||

ಇದವೋಘಮಪ್ಪ ಯೋಗಂ |
ಸದಯರ್ ಮುಂ ಪೇೞ್ದರೊಸೆದು ಸಂಗ್ರಹಿಸುವುದೇ ||
ೞದ [5]ಮಲ್ಲೆಂದಿಳೆಗೆಲ್ಲಂ |
ಸದಮಳಗುಣನಿಳಯ [6]ಮಂಗರಾಜಂ ಪೇೞ್ದಂ || ೪೮ ||

ಸಾರಕರಂಜದ ಪೊಸಕಾ |
ಱ್ಪೀರೆಯ [7]ಧಾತ್ರಿಯ ಸುಬೀಜಮರಿದಾಳಮಿವಂ ||
ಕ್ಷೀರದೊಳರೆದೀಂಟಲ್ ಸಂ [8] |
ಹಾರಿಸುಗುಂ ವಿಷಮವಿಷಮನಿದು ಕೇವಳಮೇ || ೪೯ ||

ಕಾರಸೆ[9]ಱಂಚಿಗೆ ಬೆಟ್ಟದ |
ಬೇರೀಶ್ವರಿ ಹಸ್ತಿಕರ್ಣಿ ಹತ್ತಲಿ(ರಿ)ಕೆಗಳೆ ನಿ* ||
ವಾರಿಸುಗುಮಖಿಲವಿಷಗಳ |
ನೋರಂತಿರೆ ನಸ್ಯಪಾನ[10]ಲೇಪನವಿಧಿಯಿಂ || ೫೦ ||

ಚಂ|| ಧರೆಯೊಳಿದೊಂದು ಚಿತ್ರತರಮಂ[11]ತಿಳಿಯಿಂ ನರರೊಪ್ಪ[12]ವಾಚದೊಳ್ |
ಬೆರಸಿರೆ ಕಕ್ಕೆ ಪಲ್ಲವಿಸಿ ಕಂಡೊಡೆ ಮಂದನವಾರದಂದು ಬೆ ||
ಚ್ಚರದೊಳದಂ ಸ್ಥಿರಂ ಭಜಿಸಿ ಮೂವಳಸಾಗಿಯೆ ಸುತ್ತಿ ನೂಲುಮಂ |
ಸರಸಿಜಮಿತ್ರವಾರದೊಳೆ ಮೋನದೊಳೀಕ್ಷಿಸಿ ಕೊಂಡು ಬೇಗ್ಗಳಂ || ೫೧ ||

ಕಂ|| ಘಮ್ಮನೆ ಧಾತ್ರಿಯುಮಿಾಶ್ವರಿ |
ಹೆಮ್ಮಿಟಲಂಗಳೊಳೆ ಬೆರಸಿ ಮತ್ತಂ ಜಲದಿಂ ||
ದಮ್ಮುದದೊಳರೆದು ಮಾೞ್ಪುದು |
ಸಮ್ಮತ[13]ಚಣಕಪ್ರಮಾಣಮೆನೆ ವಳಿಗೆಗಳಂ || ೫೨ ||

---

1. ಯೆಸೆದೀಶ್ವ (ಖ) 2. ಕಾರಿಕೆ ವರಾಶ್ವಗಂಧಿವಟ (ಕ) ಕಾಚರಿಕೆ (ಖ) 3. ಗುಳಿಗೆಯಂ ಕಱಿಯಿಂದಂ. 4. ನಾಗದಷ್ಟಂಗೆ ಮಾಡಿಪೂಸೂದಾಗಲೆ (ಖ) 5. ಮಲ್ಲೆಂದು ಯಿಳಗೆಲ್ಲಂ (ಖ) 6. ಮಂಗರಾಜನಮತದಿಂ (ಕ) 7. ಧಾತ್ರೀಸುಬೀಜ (ಕ) 8. ಸಂಹರಿಸುಗುಂ ವಿಷವಿಷಮನದುವೆನಪ್ಪಂ (ಖ) 9. ರಂಜಿಗೆ, ಱಂಚಿಗೆ (ಕ. ಖ) 10. ಲೇಪನದಿಂದಂ (ಕ) 11. ಕಳಿಯಿಂ (ಖ) 12. ವಾಚಾದೊಳ್. 13. ಚರಣಕಪ್ರಮಾಣಮೆನೆಗುಳಿಗೆಗಳಂ (ಖ) ಮೆನೆವೆಳೆರಗಳಂ (ಘ)

* ಕಂದದ ಅರ್ಧಾಂತದಲ್ಲಿ ಲಘುವಿರುವುದು ಛಂದೋದೋಷವು. ಕೆಗಳುಂ| ವಾರಿಸು(ಎಂದಿರಬಹುದು)

ಕಂ|| ಅವು ದಿವ್ಯಮಪ್ಪ ವಳಿಗೆಗ |
ಳವನೆ ಸುರಕ್ಷಿತದೊಳಿರಿಸಿ ಫಣಿದಷ್ಟಂಗಂ ||
ಜವದಿಂ ಪೂಸುಗೆ ತತ್ಪಾ |
ನವಿಶೇಷದೊಳಂ ವಿಷಾಪಹಂ ಬುಧಬಂಧೂ || ೫೩ ||

ಕುಡಿಯಲ್ಕಣಮಾಱದೊಡಂ |
[1]ಕುಡಿಸಿದನೊಡನುಂಡವಂಗವಂ ತೆಕ್ಕಿಸಿಕೊಂ ||
ಡೊಡಮವನ [2]ವಿಷಮದಿೞಿಗುಂ |
[3]ಕುಡು ನಲ್ಲರೊಳಿಂ ಪರಸ್ಪರಂ ತತ್ಕ್ರಮದಿಂ || ೫೪ ||

ಹತ್ತರಿಕೆ ಹಾಲೆ ಯೆಲೆಯಂ |
ಮತ್ತೀಶ್ವರಿ ಕೀರತುಂಡಿಗಳ ಬೇರ್ಗಳನ ||
ತ್ಯುತ್ತಮದಂಬಿಲ[4]ದಿಂದರೆ |
ಯುತ್ತುಂ ತತ್ತನು(ಪ)ಗೆ ಪೂಸಲಹಿವಿಷಮಿೞಿಗುಂ || ೫೫ ||

ದಧಿ ನವನೀತಂ ಮರಿಚಂ |
ಮಧು ಪಿಪ್ಪಲಿ ಪಂಚಲವಣ [5]ಮೆಂಬೀ ದಿವ್ಯೌ ||
ಷಧಿಯಂ ಕೊಂಡೊಡೆ ನಾನಾ |
ವಿಧ ಸರ್ಪಪ್ರಮುಖ ವಿಷಮ [6]ವಿಷಮಿರದಿೞಿಗುಂ || ೫೬ ||

ಸುರವಾರುಣಿಕ (ಖ)ರಕರ್ಣೀ |
ಶ್ವರಿಗಳ್ ಶುಕತುಂಡಿ ಕೈಪೆಸೊರೆಯೊಳ್ದರುಳೊಂ ||
ದಿರಲರೆ [7]ದೆಱೆಯಲ್ ಪೂಸ |
ಲ್ಕುರಗವಿಷಂ ಪಱಿಗುಮೆಂದನಮಳಚರಿತ್ರಂ || ೫೭ ||

ಎರಡರಿಸಿನಂಗಳೊಳೆ ತಗ |
ರರಸಾಂಜನಮೊಂದಿರಲ್ಕ [8]ಮರೆದೀಂಟಲ್ ಮೇ ||
ಣಿರದೆ ವಚಾದ್ವಯಗಳುಮಂ |
ಭರದಿಂದೆ [9]ಕುಡಿ (ಯಿಸೆ) ತದ್ವಿಷಘ್ನಮದಕ್ಕುಂ || ೫೮ ||

ಅಂಕೋಲೆ ಚವ್ಯ ವಿಳಂಗಂ |
ಕುಂಕುಮ ಚಂದನ ರಸಾಂಜನಂ ಮಗಧರುಹಂ ||
ಟಂಕಣಮುಂ ಮಣಿಶಿಲೆಯುಮಿ |
ವಂ ಕು[10]ಡಿಯಿಸಲಿೞಿಗುಮಖಿಳಜಂಗಮವಿಷಮುಂ || ೫೯ ||

---

1. ಕುಡಿಸೂದೊಡನುಂಡವಂಗವಂ ತೆಕ್ಕಿಸಿ (ಕ) 2. ವಿಷಮಿೞಿಗುಂ (ಖ) 3. ಕಡುನಲ್ಲರೊಳಂ, ನಲ್ಲದೊಳಂ (ಕ. ಖ) ಕುಡಿನಲ್ಲ (ಘ) 4. ದಂಡೆಬುಲುತಂ ತತ್ತನು (ಕ. ಖ) 5. ಮೆಂಬಿದಿವ್ಯದಿಯಂ ನಾನಾ (ಕ) 6. ವಿಷಮುಪಸಮಿಕ್ಕುಂ (ಖ) 7. ಲರೆದೆಱೆಯಲ್ಕೆ ಉರಗೊಲ್ಕರವಿಷಂ ಪರಿಗು........ರಿತ್ರಾ (ಕ) 8. ಮದನೀಂಟಲ್ ಮೇಣೆರಡುವಳ(ಚ)ಂಗಳವೊಪ್ಪಿಂ ಪಿರಿದುಂ ಕುಡಿಸೆ ತದ್ವಿ (ಕ) 9. ನೊಪ್ಪಿಶಿ ಅರದುಕುಡಿಸ ತದ್ವಿಷಘ್ನಮುಂತಾನಕ್ಕುಂ (ಘ) 10. ಕುಡಿಸಲ್ಕುೞಿಗುಂ (ಖ)



ಕಂ|| ಸುರದಾಳಿ ನೀಲಿ ಅಂ(ಚಿ)ಜಿಗೆ |
ಕ(ಖ)ರಕರ್ಣಿಕೆ ಯೆಂಬಿನಿತಱೊಳೊಪ್ಪುವ ಬೇರಂ||
ಬೆರಸಂಬಿಲದಿಂದರೆದೀ |
ಗರಿದೆನಿಸುವ ಫಣಿವಿಷಂಗಳಂ [1]ಪರಿಹರಿಕುಂ || ೬೦ ||

ಸುರದಾಳಿ ನೀಲಿ ಅಂಜಿ(ಚಿ)ಗೆ |
ಯೆರಡರಿಸಿನ ಮೊಂದಿರಲ್ ವಿಷಾಪಹಮಕ್ಕುಂ ||
ಕ(ಖ)ರಕರ್ಣಿ[2]ಬೆಳದ ಬೇರ್ಗಳ |
ನರೆದು ಕಟುತ್ರಯದೊಳೀಂ[3]ಟೆ ಯಹಿವಿಷಮುೞಿಗುಂ || ೬೧ ||

ಕ(ಖ)ರಕರ್ಣಿ ಸುರಸಿ ಯೆರಡಱ |
ವರಮೂಲಂ ಕೈಪೆಸೊರೆಯ ಕಾೞ್ಬೇರೆಯ [4]ಬಿ ||
ತ್ತಿರೆ ಪೋತಿನ ಮೂತ್ರದೊಳಂ |
ಪರಿಮರ್ದಿಸಿ ಕುಡಿಸಲುರಗತತಿವಿಷಮುೞಿಗುಂ || ೬೨ ||

ಶರಪುಂಖಿ ಯಿಂದ್ರವಾರುಣಿ |
ಸಿರಿಸದ ಪಣ್ [5]ಬ್ರಹ್ಮಿ ಕತ್ತಗಿರಿ ಯೆಂಬಿವಱೊಳ್ ||
ಬೆರಸಿದ [6]ಶುಕತುಂಡಿಯುಮಂ |
ಪರಿಮರ್ದಿಸಿ ಕುಡಿಸಲುರಗವಿಷಮಿರದಿೞಿಗುಂ || ೬೩ ||

ದಳಮಂ [7]ಶಿರೀಷಸಂಭವ |
ಫಳಮಂ ನೀರಿಂದಮರೆದು [8]ಶೋಧಿಸಿ ಬಿಸಿಲೊಳ್ ||
ಕೊಳುಗಂಬುಲವಣಮಿಶ್ರದೆ |
ಕಳೆಗುಂ ಕಾಳಾಹಿ ಮುಖ್ಯಬಹುವಿಧವಿಷಮಂ || ೬೪ ||

[9]ಊರಹಿಗಳ್ ಪಿಡಿಯಲ್ ತ |
ಣ್ಣೀರಿಂ [10]ಜಂಭೀರಮೂಲಮಂ ಸಣ್ಣಿಸಿ ಬೆ ||
ನ್ನೀರಿಂ ಮೇಣ್ ಕುಡಲದು ಸಂ |
ಹಾರಿಸುಗುಂ ತದ್ವಿಷಂಗಳಂ ಗುಣನಿಳಯಾ || ೬೫ ||

ಅಡವಿಯೊಳಹಿ ಕೊಂಡೊಡದು |
ತ್ಕಟದ ವಿಷಂ [11]ಶ್ರೋತ್ರವಲ್ಲಿ ಯೊಪ್ಪುವ ಬೇರಂ ||
ಝುಟಿತೆಯೊಳೆ ಮೂತ್ರದಿಂ ಕುಡೆ |
ದಿಟಮಿೞಿಗು[12]ಮದನಲನಡಸಿದರಲೆಯ ತೆಱದಿಂ || ೬೬ ||

---

1. ಸಂಹರಿಕುಂ (ಖ) 2. ಬೆೞಲ (ಘ) 3. ಟೆಯುಕಿ (ಖ) 4. ಬಿತ್ತಿರೆಪೊತ್ತಿನ (ಕ) 5. ಬ್ರಂಹಿ (ಖ) 6. ಅವುಷಧಿಯಂ (ಕ) ಧೌರ್ಷಧಿಗಳು ತುಂ (ಖ) 7. ಸಿರಿಸ ಸಂಭವ (ಖ) 8. ಶೋಷಿಸಿ ಬಿಸಿಲೊಳಗಂ | ಬುಲವಣ ಮಿಶ್ರದೆ ಕುಡಿಸಲ್ ಕಳೆಗುಂ (ಖ) 9. ಉರಹಿಗಳ್ (ಕ) 10. ಜಂಬೀರದ ಮೂಲ (ಖ) 11. ಶ್ರೋತ್ರದಲ್ಲಿ (ಕ) 12. ಮದನಲ....ಸಿದರಲೆ (ಖ) ಮದನಂ ನಡಸಿದರಲೆಯ (ಕ)

ಕಂ|| [1]ಸೊಡರಿಯ ಬೇರರುತಾಳಂ |
ಗುಡೂಚಿ ಯಾಡುಳಿಚಮೆಂಬಿವಂ [2]ಕಱಿಯಿಂದಂ ||
ಕುಡಿ[3]ಯಿಸಲಹಿವಿಷಮಱಿಗುಂ |
ಕಡುಭರದಿಂ ನಸ್ಯ[4]ಲೇಪನಂ ಮಾಱಿಕ್ಕೆ ಬುಧಂ || ೬೭ ||

ಕಱಿಯಿಂದರೆದಿರದೀಂಟಿಸೆ |
ಹುಱಿಗುಡಿ ಹೆಮ್ಮಿಟಲಿ ಬಿಳಿಯಗುಂಜಿಯ ಬೇರಂ ||
ಘಱಿಲನೆ ನಸ್ಯಂಗೆಯ್ಯ |
[5]ಲ್ಕಳೀವರಕ್ಕೆಯ್ದೆ ಪೂಸೆ ಫಣಿವಿಷಮಱಿಗುಂ || ೬೮ ||

ಮಲ್ಲಿಕಾಮಾಲೆ— ಕಕ್ಕೆ ಮಾದಲ(ಲೆ) ಪೆರ್ಗುರುಂಟಿಗೆ ಮೊಲ್ಲೆ ಯಿಶ್ವರಿ ಚಂಪಕಂ |
ಮೆಕ್ಕೆ ನಾಂಗುಲಿ ಕಟ್ಟವತ್ತಿಗೆಯುಂ [6]ಸಮಂತೆಸಗಂ ಗಡೀ ||
ಯೆಕ್ಕೆ [7]ನುಗ್ಗೆ ಯಿವೆಲ್ಲಮಂ ಕಱಿಯಿಂ ಕೊಳುತ್ತಿರೆ ಪೂಸಲಿಂ ||
ನಿಕ್ಕುವಂ ಕಿಡುಗುಂ ಫಣೀಂದ್ರಮುಖಪ್ರಚಂಡವಿಷಂಗಳುಂ || ೬೯ ||

ಕಂ|| ಕುರುಟಿಗೆ ಕುಮಾರಿ ಯಿಶ್ವರಿ |
ವೆರಸಿರೆ ಮಗ್ಗಾರೆ ಯೆಕ್ಕೆಯ ಶುಕತುಂಡಿಗಳಂ ||
ಭರದೊಳರೆದೀಂಟೆ ಕಱಿಯಿಂ |
ದಿರದುರಗವಿಷಂ ವಿನಷ್ಟಮಪ್ಪುದು ಪುಸಿಯೇ || ೭೦ ||

ಹೆಗ್ಗುರುಟಿಗೆ ಕಡಸಿಗೆಗಳೊ |
ಳೊಗ್ಗಿರೆ ಕಱಿ[8]ಯಿಂದೆ ಮಿಟ್ಟ ಹುರುವಳ್ಳಿಯುಮಂ ||
ಸಿಗ್ಗಿರೆ ಕುಡಿಸುಗೆ [9]ಪೂಸುಗೆ |
ಯಗ್ಗಲಿಸಿದ ವಿಷಮುಮಱಿವುದೊಂದಚ್ಚರಿಯೇ || ೭೧ ||

ಉ|| ಹಿಂಗು ವಿಳಂಗ ವಹ್ನಿ ಕಟುಕತ್ರಯ ಸೈಂಧವಮುಂ ಫಲತ್ರಯಂ |
ಸಂಗತಮಪ್ಪ [10]ಪಾರಿ ಯಜಮೋದ ಪುರಂದರಮೆಂಬಿವಂ ಸಮಾ ||
ನಂಗಳಿನಲ್ಕೆ ಕೂಡಿ ಪಟಚೂರ್ಣಮನಾಗಿಸಿ [11]ತುಪ್ಪದಿಂ ಕೊಳಲ್ |
ಶೃಂಗಿ ಮಹೋರಗಾದಿವಿಷಸಂತತಿಯಂ ಕಳೆಗುಂ ಬುಧೋತ್ತಮಾ || ೭೨ ||

ಕಂ|| ಸುರದಾಳಿ ಕಾಡು(ಳು)ಜೀರಗೆ |
ಮರಿಚಂ ಬಜೆ ಕಾಗೆದೊಂಡೆ ಬೆಳುಗಣಜಿಲೆಯಂ ||
ವಿರಚಿಸಿ ಪಾನದೆ ನಸ್ಯದೆ |
ನರಗೋಮಹಿಷಾದಿಗಳ್ಗೆ ನಿರ್ವಿಷಮಕ್ಕುಂ || ೭೩ ||

1. ಸೋದರಿಯ (ಕ) 2. ತಳಿಯಿಂದಂ (ಖ) 3. ಯಿಸುಮಹಿ (ಕ) 4. ಲೇಪನಾಂಜನ. ವಿಧಿಯಿಂ (ಘ) 5. ಗೆಯ್ಯಲ್ಕಳಿವರಕ್ಕೆಯ್ದೆ (ಸೆಯೆ) ಪೂಸಿ ನಿರ್ವಿಷಮಕ್ಕುಂ (ಕ) 6. ಸಮಂತೆಂಗಂ ಗಡೆ 7. ನುಗ್ಗಿಲು ಬೇಲಮಂ, ಬೆಲ್ಲಮಂ (ಕ. ಖ,) 8. ಯಿಂದೆಮೇಟ (ಕ) 9. ಕುಡಿಸುಗೆ ಪೂಸುಗೆ ಮಸುರ (ಖ) ಆಸುರದಗ್ಗ (ಕ) (ಖ) 10. ಪಾರೆ (ಖ) ಪಾಲೆ (ತ) 11. ತತ್ಪದದಿಂ (ಕ)



ಚಂ|| ಸಿರಿಸ ಸುಗಂಧಿ ಬಂಜೆ ಮಡುವಾಗಲ ಕನ್ನೆ ಕುಮಾರಿ [1]ಕಕ್ಕೆಯಿಶ್ |
ಶ್ವರಿ ಯಜದಂಡೆ ಮಲ್ಲಿಗೆ [2]ವಿಶಾವಿಷಮಾಮಯ ನಿಂಬಬೀಜಮೊ ||
ಪ್ಪಿರೆ [3]ಸರಸಾಶ್ವಗಂಧಿ ರವಿ ವಾಯಸತುಂಡಿ ಸುದೇವದಾಳಿಯೊಳ್ |
ಬೆರಸಿರದಟ್ಟ [4]ತುಪ್ಪಮದು ಪಾನದಿ ಸರ್ವವಿಷಘ್ನಮುರ್ವಿಯೊಳ್ || ೭೪ ||

ಕಂ|| ಸಾಲದೆ ಫಣಿವಿಷಮಂ ನಿ
ರ್ಮೂಲಿಸಲೀ ಯೋಗಮೊಂದೆ ಹಿಮಮಿಶ್ರದೊಳಂ ||
ತೈಲಂ ಲೇಪನ ಪಾನದೆ |
ಲಾಲಿತಗುಣನೆನಿಪ ಮಂಗರಾಜನ ಮತದಿಂ || ೭೫ ||

ಘನನಾದಿ ಕಾಗೆತೊಂಡೆಗ |
ಳನೆ ಕೂಡಿ ಮಯೂರಪಿತ್ತದೊಳ್ ಬಱಿಯಂ ಚೆ ||
ಕ್ಕನೆ ಗೋಮೂತ್ರದೊ[5]ಳಗದಂ |
ಜನ ವಿನುತಂ ಕುಡಿಯೆ ಸರ್ವವಿಷಹರಮಕ್ಕುಂ || ೭೬ ||

ಉ|| ಏಪಡೆವಾತೊ ಕೋಷ್ಠಮಡುವಾಗಲು ನುಗ್ಗಿ ಕಟುತ್ರಿಕಂ[6]ಕರಂ |
ಕೈಪೆಯೆನಿಪ್ಪಲಾಬು ಮುನಿಭೂರುಹ ಮೂಲಕುಮಾರಿ ಸಾರಮ ||
ಪ್ಪಾಪುದಿದಶ್ವಗಂಧಿ ಸುರದಾಳಿಯೆನಿಪ್ಪಿವನೆಯ್ದೆ ಕೊಂಡು ಮ |
ತ್ತಾ ಪರಿಪಕ್ವಮಪ್ಪ ಕುಟಜೋದ್ಭವಬೀಜಯುತಂ [7]ಸುರಕ್ಷಿತಂ || ೭೭ ||

ಕಂ|| [8]ಇರಲವಱ ಚೂರ್ಣಮಂ ಬೆರ |
ಸರೆದು[9] ಕುಮಾರೀರಸಪ್ರಯುಕ್ತಂ[10]ಗೆಯ್ದಂ ||
ದಿ(ದ)ರದೀಂಟಿಸೆ ನಸ್ಯಯುತಂ |
ಪರಿಹರಿಕುಂ ಸರ್ಪವೃಶ್ಚಿ[11]ಕಾಳಿಯ ವಿಷಮಂ || ೭೮ ||

ಮ|| ಹರಿವಾರಂ ಹಸ್ತತಾರಾಯುತಮಿರೆ ಭರದಿಂದಂದು ಕರ್ಕೋಟಕಾಹ್ವಂ |
ಬೆರಸಂತಾ ಕಾಕತುಂಡೀ ಪ್ರಥಿತಮೆನಿಪ ನಿರ್ಗುಂಡಿಯುಗ್ಮಂ ಲಸ ||
ಚ್ಛರಪುಂಖೀ[12]ಪ್ರಷ್ಠಕೋಷ್ಠಿ ಕ್ಷಿತಿನುತ ಮೆನಿಪಿಂ[13]ತಯ್ದಱೊಳ್ಮೂಲಮಂ ತಂ |
ದುರಗಂ ಕೊಂಡಂಗಮಾ ಚೂರ್ಣಮನರೆದೆಱೆಯಲ್ ತದ್ವಿಷಂ ನಾಶಮಕ್ಕುಂ || ೭೯ ||

ಕಂ|| [14]ಕಿಱುಕುಂ ಸಾಲೆಯ ಬೇರುಮ |
ನಿರದರೆ ತುಪ್ಪದೊಳೆ ಸರ್ಪ(ರ್ವ)ವೃಶ್ಚಿಕವಿಷಮುಂ ||
ಪಱಿಪಡುಗುಂ ಕೃತ್ರಿಮದಿಂ |
ನೆಱೆದಿರ್ದೊಡದುಂ ಜನೈಕಮಿತ್ರನ ಮತದಿಂ || ೮೦ ||

1. ಮೇಕೆ (ಕ) ಯೆಕ್ಕೆ (ಖ) 2. ವಿಷಾವಿಷ (ತ) 3. ರಸಸಾಶ್ವಗಂಧಿ (ಖ) 4. ತುಪ್ಪಮಧುಪಾನದಿ. (ಕ) ತಂಪಮಧು (ಖ) 5. ಳೀಗದು. 6. ತ್ರಿಕಂಕೈಪೆನಿಪ್ಪಾಪುದಿ (ಖ) ಗ್ರಂಥಪಾತವಿದೆ. 7. ಸುರಃಚಿತಂ (ಖ) 8. ಇರರವಱನತ ಚೂರ್ಣಮಂ (ಖ) 9. ದಕುಮಾರೀ (ಕ) 10. ಯುಕ್ತಂಗೆಯ್ದರೆ ದೀಂಟಿಸೆ (ಕ) ಯುಕ್ತಂಗೆಯ್ದಂದಿರದಿಂಪೆನೆ (ಖ) 11. ಸರ್ವ ವೃಶ್ಚಿಕಾದಿವಿಷಂಗಳ್ (ಖ) 12. ಶ್ರೇಷ್ಠತೊಟ್ಟೇ (ಘ) ಪೃಷ್ಠತೊಟ್ಟೇ (ಕ) 13. ತೈವರೊಳ್ (ಘ) 14. ಕಿಱುಕುಸಾಲೆಯ ಬೇರ ನರೆದೊಳೆ ತುಪ್ಪದೊಳರೆದು (ಖ) ಕಿಱುಕಸಯ ಬೇರುಮನಿರದೆಱತುಪ್ಪ (ಕ)

ಕಂ|| ಉರಗಂ ಕೊಂಡೊಡೆ ಘೃತದೊಳ್ |
ಬೆರಸಿದ ಮಧು ಸಮವೆನಲ್ಕೆ ಕುಡಿಸುವುದದಱಿಂ ||
ಪರಿಹರಿಕುಂ ತದ್ವಿಷಮದು |
ನಿರುಪಮಗುಣಿ[1]ಯೆನಿಪ ಮಂಗರಾಜನ ಮತದಿಂ || ೮೧ ||

ಬಿಳಿಯ ಗಿರಿಕರ್ಣಿಕೆಯ ಬೇ |
ರೊಳೆ ನೀಲಿಯ[2]ಮೂಲಮಂ ಸಮಾನಂಗೊಂಡಾ ||
ಕಳ[3]ತುಪ್ಪದಿಂದೆ ಕುಡಿಯಿಸ |
ಲಱಿಗುಂ ಫಣಿವಿಷಮದಮಲತರಗುಣನಿಲಯಾ || ೮೨ ||

ಭೂಲೋಕದೊಳೊಂದೌಷಧಿ |
ಸಾಲದೆ ಪಲವೇವು [4]ದರೆದುಮರಿದಾಳಯುತಂ ||
ನೀಲಿಯುಮಂ [5]ಕುಡಿಸುವುದದು |
ಕಾಲೋರಗನಗಿದ ವಿಷಮನಾಕ್ಷಣಮಱಿಗುಂ || ೮೩ ||

ಬಜೆಯಶ್ವಗಂಧಿ ಯಿಲ್ಲಣ |
ರುಜೆ ಯೆಂಬಿವನರೆದು ಕಲಿಯೊಳಂ ಕುಡಿಸುವುದುಂ ||
ಭುಜಗೋಗ್ರವಿಷಂ ಕಿಡುಗುಂ |
ತ್ರಿಜಗದ್ಭೂಷಣನೆನಿಪ್ಪ [6]ಜಿನಮುನಿಮತದಿಂ || ೮೪ ||

ಹುಲಿಗಿಲರು]ತಾ(ಟಾ)[7]ಳದೊಪ್ಪುವ |
ಫಲಮಂ ಗಣಿಜಿಲೆಯುಮಂ ಸಮಾನಂಗೊಂಡಂ ||
[8]ಬಿಲದಿಂದರೆದೀಂಟಿಸಲದು |
ತೊಲಗಿಸುಗುಂ ಫಣಿಯ ವಿಷಮನಪಗತ [9]ಕುಮತಾ || ೮೫ ||

ಅರೆದಿಂದ್ರವಾರುಣಿಯೊಳಂ |
ಬೆರಸಿರೆ[10]ಸೀಗುಡಿತೆ ಯೊಪ್ಪವಂಬಿಲದಿಂದಂ ||
ಭರದಿಂ ಕುಡಿಸಲ್ಕುರಗೋ |
ತ್ಕರದ ವಿಷಂ ಪಱಿಗುಮೆಂದನಪಗತ [11]ಕಲುಷಂ || ೮೬ ||

ಅಂಗುರಮಂ [12]ನೀಲಿಯುಮಂ |
ಸಂಗತಮಾಗರೆದು ತುಪ್ಪದಿಂದೀಂ[13]ಟಲದಂ ||
ದೇಂಗಹನಂ ಫಣಿಯ ವಿಷಂ |
ಪಿಂಗುವುದಕಳಂಕಚರಿತ[14]ಮಂಗನ ಮತದಿಂ || ೮೭ ||

1. ಗುಣಿಮಂಗರಾಜನನುಮತದಿಂದಂ (ಖ) 2. ಮೂಲಮನೆಂತು ಮೇಂ (ಖ) 3. ತುಪ್ಪದಿಂ ದರೆದು ಕುಡಿಯಿಸಲಳಿಗುಂ ಫಣಿವಿಷಮನಮಲ (ಘ) 4. ವೇವುವರೆದರಿದಾಳ (ಖ) 5. ಗಿರಿಯುಮಂ ಕುಡಿಸಲೊಡಂಕಾಳೋರಗ ದಷ್ಟನಾದೊಡಂ ಜೀವಿಸುಗುಂ(ಘ) ದಷ್ಟನಾನನದ ವಿಷಮನದ ಸಂಹರಿಕುಂ(ಖ) 6. ಭೂಷಣ ಮತದಿಂ (ಖ) 7. ಟಾಳವೊಪ್ಪುವ (ಖ) 8. ಬಿಲದರೆದೀಂಟಿಸ (ಕ) 9. ಕಲುಷಾ(ಘ) 10. ಸೀಗುಡಿತೆ (ಖ) 11. ಕುಮತಂ (ಖ) 12. ಗಿರಿಯುಮಂ (ಕ) 13. ದೀಂಟಲೊಡಂದೇಂ (ಘ) ದಲುಂಡಂದೇಂ (ಖ) ದೀಂಟಲದಂದಂ (ಕ) ತಪ್ಪದಿಂ ಕುಡಿಸಲದೇಂ )ಗ) 14. ನನುಮತದಿಂದಂ (ಕ)



ಕಂ|| [1]ಬೆರಸೆಲವದ ಹಗಿನೆಲಹುರಿ |
ಯಿರವಂತಿಗೆ ಯೆಂಬಿವಂ [2]ಲಸದ್ದುಗ್ಧದೊಳಂ ||
ದರೆದೀವುದು [3]ಪಾನದೆ ವಿಷ |
ಧರವಿಷಮಱಿಗುಂ ಸರಸ್ವತೀಮುಖತಿಲಕಾ || ೮೮ ||

ಚಂ|| ಬೆಳದಿರ[4]ಲಾಚ ಕಕ್ಕೆಗಳಿಳಾತಳದೊಳ್ ಕರವೊಂದುಗೂಡಿ ತಾಂ |
ವಿಳಸಿತಸಿದ್ಧಿಯೋಗದೊಳೆ [5]ಬೇಱವನೊಪ್ಪಿರೆ ತಂದುದೊಂದನೊಂ ||
ದಳವಿಯೊಳಂಟದಂತಿರಿಸಿ ಚೂರ್ಣಿಸಿ ರಕ್ಷಿತಮಾಗಿರಲ್ಕದುಂ |
[6]ತಳವಲು ತುಂಬೆ[7]ನೆಲ್ಲಿ ತುಱಿಚಂ ಕಿಱಿನೆಲ್ಲಿ[8]ಯೆರಲ್ಕುರಂಟಕಂ || ೮೯ ||

ಉ|| ನಾಗರು ಮಾರಿಯೆಂಬಿವ ಱಿೞ[9]ಳೊಂದಿರಲಾಚದ ಚೂರ್ಣಮಂತದಾ |
ಯೋಗ ಮದೊಂದೆ(ದ)ನಿಕ್ಕುಮದನಿಂಬಿನೊ[10]ಳಿಟ್ಟರಸಂತೆ ಮತ್ತೆಯುಂ ||
ದಾಗುಡಿ ಸಂದಲಾಬು ಮಡುವಾಗಲು ಕೈಪೆಯೆನಿಪ್ಪ[11] ಹೀರೆ ವೊಂ |
ದಾಗಿರೆ ಕೈಪೆದೊಂಡೆಯೊಳೆ ಪಿಂದೆಸೆ[12]ವಿಪ್ಪೆಯ ಮೂಲದೊಳ್ ಕರಂ || ೯೦ ||

ಕಂ|| ಸಕ್ಷೀರಕಂಚುಕಂ ಸುಪ |
ರೀಕ್ಷಿತದಾ ಪವಳ[13]ದೊಂಡೆ ಯಿಂತಿವಱಿೞೊಳ್ ಸಂ ||
ರಕ್ಷಿತ ನೃಪತರುಚೂರ್ಣಮ |
ನೀಕ್ಷಿಸಿ ಮತ್ತೀಪ್ರಯೋಗಮಂ ಮಾಱ್ಕೆ ಬುಧಂ || ೯೧ ||

ಮ|| ಎರಡುಂ ಪೋೞ[14]ಳಮಾಡಿ ಕೌಡೆ(ಟೆ)ಯೆಳ ಗಾಯಂ ತೀವಿ ತಚ್ಚೂರ್ಣಮಂ |
ತರದಿಂದೊಂದಱಿೞೊಳೊಂದನಂತರೆದಿವಂ [15]ಮಾಡುಂಡೆಯಂ ವಾಮದಾ ||
ಚರಣಕ್ಕಂ ನೃಪಭೂಜಯುಕ್ತ[16]ಮನೆ ಮತ್ತಾ ದಕ್ಷಿಣಕ್ಕಾಚ ಸಂ |
ಕರಮಂ ಪೂಸೆ ತದಂಘ್ರಿಯುಗ್ಮಮನಣಂ ಪ್ರಕ್ಷಾಳಿಸಾ ವಾರಿಯಿಂ || ೯೨ ||

ಕಂ|| ವಿಹಿತಮದಂ [17]ಕುಡಿಸುಗೆ ಜನ |
ಮಹಿತಂ [18]ವಾಸುಗಿ ವಿಷಾಪಹಂ ತಾಮಿನಿತ ||
ರ್ಕಹಿದಷ್ಟಂಗಂ ಭಾವಿಸೆ |
ಮಹದಪಘನರಕ್ಷಣಂ ಸಮಂ ಪೆಱತುಂಟೇ || ೯೩ ||

ತೊಱಿಮಲ್ಲಿಗೆ ಪುನ್ನಾಗಂ |
ತೊಱಿ ಮಾದಲಮಮೃತವಳ್ಳಿ ಗಿಣಿಮೂಗನ [19]ಬೇರ್ ||
ತೊಱಿದವನ ತೊಟ್ಟೆ ಮುಸ್ತೆಯ |
[20]ನುಱಿ ಚೂರ್ಣಿಪುದುಲಿಗ ಹೊನ್ನಗನ್ನೆ ಸಮೇತಂ || ೯೪ ||

1. ಬೆರಸೆಲಹದಹಗಿ (ಕ) ಸೆಲವದಹಗಿನಿಂಗೆಲಹುರಿ (ಖ) 2. ಸಮುಂದುಗ್ಧದೊಳಂ (ಖ) 3. ಪಾನದೆ ವಿ....ರವಿಷಮಱಿಗುಂ (ಕ) 4. ಲಾಚ್ಚಕಕ್ಕೆ (ಕ) 5. ಬೇರಿವನೊಪ್ಪಿರೆ ತಂದನೊಂದ (ಖ) 6. ಕಳವಲು (ಕ) 7. ನಿಲ್ಲಿ (ಕ) ಯೆನಲ್ಕುರುಟಗೆಯಿಂ (ಖ) 8. ಯೆರಲ್ಕುರುಟರಂ (ಕ) 9. ಳೀಂಟರ (ಖ) 10. ನೊಳಟರಿಪಂತೆಯುಂ (ಕ) 11. ಯೆನಿಪ್ಪಯೊಂದದಾನಿರೆ (ಖ) 12. ನಪ್ಪಯಿಮೂಲ (ಖ) 13. ದೊಂಡೆಯುಂ ಇಂತಿವಱಿೞೊಳೆ || (ಕ) ವೊಂದೇ (ಖ) 14. ೞ್ಗಳವಾಗೆ ಕಾಡೆಯೆರೆ (ಕ) ಕೌಡೆಯೊಳೆಗಾಯಂ (ಖ) 15. ಮಾಡಂದೆಯುಂದಾದದೊ (ಖ) 16. ಮೆನೆ (ಕ) 17. ಕುಡಿಯಿಸೆ(ಖ) 18. ಪೂಸಲ್ಕೆಸುಗಿ ವಿಷಾಪಹಂ (ಕ) ಕಂಡೆಸುಗೆ ಸಜ್ಜನಮುಹಿತಂ ವಾಸುಗೆ (ಘ) 19. ಬೇರ್ಗಳ್ತೊರೆದವನ (ಕ) 20. ನಱಿ (ಖ) ನುಱಿಚೂರ್ಣಿಸಿದುಲಿಗ.

ಕಂ|| [1]ಮತ್ತಂ ಕಾಂಜಿ(ಕ)ರ ಯುಕ್ತಮ |
ನಿತ್ತೊಡೆ ತಚ್ಚೂರ್ಣಮಂ ಮಹೋರಗವಿಷಮಂ ||
ನಿತ್ತಱಿಸಲೀಯದಿದುವೆ ಬು |
[2]ಧೋತ್ತಮನ ಮತಂ ಖಗೇಂದ್ರಮಣಿದರ್ಪಣದೊಳ್ || ೯೫ ||

ನೆಲದಾಳ್ [3]ದಾಗುಡಿ ಹೇರೀ |
ಚಲು ವಾಳಂ ತರಣಿ ತೊಟ್ಟ ಹುರುವಳ್ಳಿ ಸದು ||
ತ್ಪಲಕಾಗೆದೊಂಡೆ ಸರ್ಷಪ |
[4]ವಿಲಸಚ್ಛಂದನ ಸತಕ್ರಪಾನಂ ವಿಷಹಂ || ೯೬ ||

ಗಿರಿ[5]ಕನ್ಯಕೇಂದ್ರವಾರುಣಿ |
ವೆರಸರೆದಂಬಿಲದೊಳೀಂಟೆಸಂತಲ್ಲದೊಡಂ ||
ತಿರೆ ಸಹದೇವಿಯನಿಂಬಿಂ |
ದರೆ ನೀರೊಳ್ ನಿಂಬೆಯಂ ವಿಷಾಪಹಮಕ್ಕುಂ || ೯೭ ||

ಕುರುಟಗೆ [6]ಮಗ್ಗಾರೆಗಳೀ |
ಶ್ವರಿವೆರಸು ಕುಮಾರಿ ಯೆರ್ಕ್ಕೆ ಗಿಣಿಮೂಗನುಮಂ ||
ಬೆರಸರೆ [7]ದೀಂಟಲ್ ಕಲಿಸಿಯಿಂ |
ದುರಗವಿಷಾಪ[8]ಹಮುದಪ್ಪುದಮ(ಚ)ಳಚರಿತಾ || ೯೮ ||

ಕನಕಾಖ್ಯಮೆಕ್ಕೆ ಗಿಣಿಮೂ |
ಗನ [9]ಗೆಡ್ಡೆಯನಕ್ಕೆ ಕಲಿಸಿಯೊ[10]ಳರೆದೀಂಟಲೊಡಂ ||
ಮನು[11]ಮುನಿಮತದಿಂ ಸರ್ಪನ |
ಘನವಿಷಮುಱಿಗುಂ ಖಗೇಂದ್ರಮಣಿದರ್ಪಣದೊಳ್ || ೯೯ ||

ವರಮೆನಿಸಿದಿಪ್ಪೆಯಾ [12]ಬಲು |
ಕುರುಟಗೆ ಹೆಮ್ಮಿಟಲು ಹುಲಿಗಿಲುಂ ತುಱುಚೆಯು [13]ಮೊಂ ||
ದಿರಲಾ ಹೆಗ್ಗಟ ವತ್ತಿ(ಗೆ) |
ಯರೆದಂಬಿಲದಿಂದೆ ಕುಡಿಸೆ ಫಣಿವಿಷಮುಱಿಗುಂ || ೧೦೦ ||

ಮಡುವಾಗಲ್ [14]ತ್ವಚ ಪತ್ರಕ |
ವಿಡಂಗ ಖರ್ಜೂರ [15]ಯಷ್ಟಿ ತುಱುಚಂಗಳೊಳಂ ||
[16]ತೊಡನೇಲಾದ್ರಾಕ್ಷಿಗಳಂ |
[17]ಕುಡುವುದು ಮಧು[18]ದುಗ್ಧದೊಡನೆ ಫಣಿವಿಷಮುಱಿಗುಂ || ೧೦೧ ||

---

1. ಮತ್ತಂ ಕಾಂಜೀರಕಯುಕ್ತಮ (ಕ) ನೆಲದಾಳ್ದುಗುಡೆ ॥ ಮತ್ತಂಕಾ (ಖ) 2. ಧೋತ್ತಮ ಮತಂ (ಖ) 3. ದಾಳ್ಗಾಗುಡಿಹಿ (ಗ) (ಖ) ಹರಿಬೆಲುತರದಿಮೆಟ (ಚ) 4. ಸರ್ವಫಲವಿಲಸಚ್ಛಂದನ ಪಾನವಿಷಘ್ನಂ (ಖ) ವಿಲಸದ್ಬಂಧನ ಸುತಕ್ರ (ಕ) 5. ಕರ್ಣಿಕೇಂದ್ರ (ಚ) 6. ಮೇಹ್ನೊರಟಿಗಳೀ (ಚ) 7. ದೀಂಟುಗೆ (ಕ) 8. ಪಹರಣಮಪ್ಪು (ಘ) 9. ಗೆಂಡೆಯ (ಕ) 10. ಯೊಗರದೀಂಟ (ಚ) 11. ಮಾನಿತದಿಂ (ಚ) ಮುವೊಂದಿರಲು ಹೆಗ್ಗಟ್ಟ (ಎಂದು ಎರಡುಕಂದಗಳು ಒಂದಾಗಿವೆ) (ಘ) 12. ದಿಪ್ಪೆಯಂಬಿಲು (ಕ) ದಿಪ್ಪೆಯಾಗಲು (ಘ) 13. ನೊಂದಿರಲು ಹೆಗ್ಗಟ್ಟವತ್ತಿಗೆ ಇರದಂ (ಖ) ಮೊಂದಿರು(ಹೆ) ಹೆಗ್ಗಟ್ಟ (ಕ) 14. ತಚಪತ್ರಕ (ಕ) ತ್ವತ್ಪತ್ರ (ಖ) 15. ಯಷ್ಟಿಮರಿಚಂಗಳೊಳಂ (ಚ) (ಘ) 16. ತೊಡನೆನೆಲಾದ್ರಾಕ್ಷಿ (ಚ) 17. ಕುಡಿವುದು (ಕ) 18. ತುತ್ಥದೊಡನೆ (ಚ)



ಕಂ|| ಜಾಲಂ ಕತ್ತುರಿ ಕಾಮನ |
ಮೂಲಂ ನಸುಗುನ್ನಿ ಭೃಂಗ ಕರ್ಕೋಟಕಮು[1] ||
ನ್ಮೂಲಿಸುಗುಂ ಫಣಿವಿಷಮಂ |
ಪಾಲೊಳ್ ಕುಡಿಸವನಧೋ[2]ಮುಖಾನ್ವಿತಮಾಗಲ್ || ೧೦೨ ||

[3]ನೆಲಬೇವು ಬೇವು ಮುಸ್ತೆಯು |
ಯಲಹುರಿ ಕುಡಿ ಕಕ್ಕೆ ಮುಸ್ತೆ ರವಿಭಕ್ತಂ ಪಿ ||
ಪ್ಪಲಿ ಕಾಮನೆಂಬಿವಂ ಮ |
ತ್ತುಲಸದೆ ಕಾಂಜಿಕದೊಳೀಂಟೆ ಫಣಿವಿಷಮುಱಿಗುಂ || ೧೦೩ ||

[4]ನಱುವಲ್ ಮಗ್ಗಾರೆಯ ಕಾಯ್ |
ತೊಱಿಗಣಿ(ಜಿ)ಗಿಲೆ ದೇವದಾಳಿ ಪಾಠಿಯುಮೆಸಗಂ ||
ಮೆಱೆವರುಡಾಳದ [5]ಪಣ್ಣಿವ |
ನರೆಯಲ್ ಜಲದಿಂದೆ ಫಣಿಯ ವಿಷನಿರ್ಹರಣಂ || ೧೦೪ ||

ಎಸೆವ ವನಲತೆಯ ಮೂಲಮ |
ನಸಿತಾಂಗಾರಕ ಚತುರ್ದಶೀದಿವಸದೊಳೊಂ ||
ದಿಸಿ [6]ಮೋಚರಸದೊಳೀಂಟೆ |
ಲ್ಕಸಮಾನಮೆನಿಪ್ಪ ವಿಷಮನದು ಸಂಹರಿಕುಂ || ೧೦೫ ||

ದಿನಕರಭಕ್ತಂ ದಾಂಗುಡಿ |
ಘನನಾದಂ ಶೃಂಗವೇರ ಪಿಪ್ಪಲಿ ಕಾಮಂ ||
ವಿನುತಪುನರ್ನವಿ ಮಧುವೆಂ |
ಬಿನಿತಂ[7]ಪಾಲಿಂ ಕೊಳಲ್ ವಿಷಾಪಹಮಕ್ಕುಂ || ೧೦೬ ||

ವರಮೇಘನಾದಿ ಕೊತ್ತುಂ |
ಬರಿಗಳ್ ಸಮನಾಗೆ ಕೊಂಡು ತಂಡುಲಜಲದಿಂ ||
ದರೆದಾಜ್ಯದಿ(ದೆ) ಕುಡಿಸು |
ತ್ತಿರಲುರಗವಿಷಾಪಹಂ ಭಿಷಗ್ವರಮತದಿಂ || ೧೦೭ ||

---

1. ಮನಲಳಿಸುಗುಂ ಪಾಲೊಳುದಿಸನನದಾಮುಖಮಾಗಲ್(ಕ) 2. ಕುಡಿಸವನಧೋಮುಖಮಾಗಲ್ (ಗ) ಮುಖಸ್ಥಿತನಾಗಲ್ (ಘ) (ಚ) 3. ನೆಲಬೇವುಮುಸ್ತೆಯುಫಲಂ ಹುಳಿಕುಡಿಕಕ್ಕೆ (ಕ) 4. ನಱುವಲ್ಮಂಗಾಱಿಯು. 5. ಪಣ್ಣಿನ ನೆಱಿಯುಲ್ಲಲದಿಂದೆ (ಕ) ಪಣ್ಣಿನರುಹ ಯುಲ್ಲಲದಿಂದೆ (ಚ) ನೆಱಿಯುಜ್ಜಲದಿಂದೆ. ನೆಱಿಯುಲ್ಜಲದಿಂದೆ (ಗ) 6. ಮೋಚಾರಸದೊ (ಖ) 7. ಪಾಲಿಂದೆಮಿಾಂಟೆ (ಘ) ಪಾಲಿಂಕುಡಿ (ಗ)

ಕಂ|| [1]ಪಿರಿಯಿಾಚಲಪಣ್ಣಂ ಕಾ |
ಸರಿಕನ ಬಿತ್ತಮ[2]ದೂರ್ವಳ್ಳಿ ಮೂಲಂಗಿಯ ಬೇ ||
ರರಿಸಿನ ಮಡುವಾಗಲ್ ವಿಷ |
ಹರಮಕ್ಕುಂ ಬೇಱೆವೇಱೆ ಕಱಿಯಿಂದೀಂಟಲ್ || ೧೦೮ ||

[3]ಕರಕರ್ಣಿಯೊಂದನಿಂಬಿಂ |
ದರೆದಂಬಿಲದಿಂದಮಿಾಂಟೆ ನಿರ್ವಿಷಮಕ್ಕುಂ ||
ನಿರುತಂ ಸರ್ಪಂಗಳ ವಿಷ |
ವರಿದೇಂ ವಿಭುಮಂಗರಾಜನನುಮತದಿಂದಂ || ೧೦೯ ||

ಅರಿಸಿನಮುಂ ಸೈಂಧವಮುಂ |
ಪರಿಮರ್ದಿತ ಪಾಗಲೆಲೆಯ ರಸ[4]ಮುಂ ಮೂತ್ರಂ ||
ಬೆರಸೀಂಟೆ ಬೇಱೆವೇಱವು |
ಪರಿಹ[5]ರಿಸುಗುಮುಗ್ರಫಣಿವಿಷಂಗಳನಿಳೆಯೊಳ್ || ೧೧೦ ||

ಝುಟಿತೆಯೊಳೆ ನಿಂಬಬೀಜಂ |
ಕುಟಜದ ಬೇರ್ವೆರಸಿ ಯರೆದು ನೇಱಿಲ ತಿಗುಡಿಂ ||
ಸ್ಫುಟಮಾದ ರಸದೊ[6]ಳೆಱೆಗು |
ತ್ಕಟದಹಿವಿಷಮೞಿಗುಮಖಿಳ ಬುಧಜನಮಿತ್ರಾ || ೧೧೧ ||

ಗಿರಿಕರ್ಣಿಕೆಯಂಕೊಲೆ ಸೂ |
ಕರಕಂದಂ ಪುತ್ರಜೀವಿಯೆಂಬಿನಿತಱೊಳಂ ||
ದೊರಕಿದುದೊಂದೊಂದಂ ಪಾ |
ಲ್ವೆರಸಿ ಕುಡಲ್ಕುರಗವಿಷಹರಂ ಬುಧಬಂಧೂ || ೧೧೨ ||

ಮರಿಚಾಮೃತಲತೆ ಘನರವ |
ಹರಿದ್ರ ಸಾಮುದ್ರಲವಣ[8]ಮೆಂಬಿಂತಿವಱೊಳ್ ||
ದೊರಕಿದು[9]ದೊಂದಂ ತುಪ್ಪಂ |
ಬೆರಸರೆದು[10]ಕೊಡಲ್ ವಿಷಾಪಹಾರಮದಕ್ಕುಂ || ೧೧೩ ||

1. ಹಿರಿಯಿಾಚಲು ಪೊವಂಕಾ |
ಸರಿಕ ಸುಧಾಲತೆಯ ಮೂಲಮಂ ನೀಲಿಯಬೇ ||
ರರಿಸಿನ ಮಡುವಾಗ...........(ಘ)
ಪಿರಿಯೆಚಿಲ——ವಳಿಯ ಮೂಲಂಗಿಯೆಂಬೆರಡರಿಸಿನ (ಕ)
2. ದರ್ಧ್ವವಳ್ಳಿ (ಖ)
3. ಕವಿಕರ್ಣಿ....ಮಕ್ಕುಂ ||
ಸ್ಮರರಿಪು ಜಿನೇಂದ್ರಚರಣ |
ಸ್ಮರಣಾಂತಃಕರಣಶುದ್ಧ ನಭಿಮತದಿಂದಂ (ಘ)
ಗಿರಿಕರ್ಣಿ, ಖರಕರ್ಣಿ (ಖ) ಕರಕರ್ಣಿ (ಗ) 4. ನರಮೂತ್ರಂ (ಗ) 5. ಹರಿಕುಂ ಉಗ್ರ (ಖ) ಗಳನೆವಲಂ (ಘ) 6. ಳರೆದುತ್ಕಟ (ಕ) 7. ಯಂತುಲೆ ಸೂಕರಕಂದಂ (ಖ) 8. ಮೆಂಬಿನಿತಱೊಳ್ (ಖ) 9. ದೊಂದೊಂದಂಪ್ಪಂ ಬೆರಸರೆದು (ಖ) 10. ಕುಡಿಸಲ್.



ಕಂ|| ತಿಲಜಯುತಂ [1]ಕುಡಿವುದು ಕಣಿ |
ಗಿಲ ಬೇರ್ ಕರ್ಪೂರವೆಂಬಿವಂ ಮೇಣ್ ಮಡುವಾ ||
ಗಲನೆ ಫಲರಹಿತಮಂ [2]ಕೊಂ |
ಡಲಸದೆ ಕುಡಿಸಲ್ಕೆ ನಿರ್ವಿಷಂ ಪ್ರತ್ಯೇಕಂ || ೧೧೪ ||

[3]ಮಡುವಾಗಲು ಮಾದಲದೊಳ್ |
ಪಡೆದಿರ್ದುದನೊಂದನಳೆಯೊಳರೆದು ಬೞಿಕ್ಕಂ ||
ಕುಡಿಸುಗೆ ಫಣಿಯ ವಿಷಂಗಳ್ |
[4]ಕಿಡುಗುಂ ವಿಭುಮಂಗರಾಜನನುಮತದಿಂದಂ || ೧೧೫ ||

*ನಂಜುಗ್ರಮೆಂದು ನೀಂ ಕರ |
[5]ಮಂಜಲದೇಕಣ್ಣಾ ತಂಡುಲೋದಕದಿಂದಂ ||
ಬಂಜೆ ಮಡುವಾಗಲಂ [ಕುಡಿ |
ಸಿಂ] ಜಿನಮತವಾರ್ಧಿಚಂದ್ರ[6]ನಭಿಮತದಿಂದಂ || ೧೧೬ ||

ಇನದಿನದೊಳಿಂದ್ರವಾರುಣಿ |
ಯನೆ ನೀಂ ಮೋನದೊಳೆ ತಂದು ಮಡಗಿ ಬೞಿಕ್ಕಂ ||
ಕನಲ್ದಹಿಕೊಂಡಂಗೀವುದು |
ವಿನುತಂ ಸತ್ತಂಡು[7]ಲೋದಕದೊಳೆ ವಿಷಘ್ನಂ || ೧೧೭ ||

ಗರುಗದ ಬೇರ್ ಗಣಜಿಲೆ ಯೆಂ |
ಬೆರಡರೊಳೊಂದಾವುದಾದೊಡಂ ದೊರಕಲದಂ ||
ಭರದಿಂದಮಕ್ಕಿಗರ್ಚಿಂ |
ದರೆದೀ[8]ವುದು ವಿಷಮನಂತದೞಿಗುಮವಶ್ಯಂ || ೧೧೮ ||

ಸಾಲದೆ ಫಣಿಯ[9]ವಿಷಕ್ಕಂ |
ನೀಲಿಯ ಬೇರೊಂದೆ [10]ಪುಳಿಯೊಳರೆದೀಂಟುಗದಂ ||
[11]ಬಾಲಾಬಲಾದಿಯಱಿಯಲ್ |
ಭೂಲೋಕದೊಳಱಿಪಿದಂ ಬುಧಂ ಮಂಗರಸಂ || ೧೧೯ ||

ಅರೆದೀಶ್ವರಿಯಂ ಪುಳಿಯಿಂ |
ದಿರದೀಂ[12]ಟಲ್ಕೆ ಫಣಿಯ ವಿಷಮುದಾಗಳೆ ಕಿಡುಗುಂ ||
ಸ್ಮರರಿಪು ಜಿನೇಂದ್ರಚರಣ |
ಸ್ಮರಣಾಂತಃಕರಣ ಶುದ್ಧನಭಿಮತದಿಂದಂ || ೧೨೦ ||

1. ಕುಡುವುದು ಕಣಜಿಲ (ಕ) 2. ಕುಡುಗಲಸದಿರದಮೋಘ ನಿರ್ವಿಷಂ (ಕ) ವಾಗಲ ಸದರಿದ ಮೋಟ ನಿರ್ವಿಷಂ (ಖ) 3. ಈ ಪದ್ಯವು ಕ. ಖ. ಪ್ರತಿಗಳಲ್ಲಿಲ್ಲ. 4. ಕಿಡುಗುಂ ತಾಂ ವಿಭುಮಂಗರಾಜನ ಮತದಿಂ (ಘ) 5. ಮಂಜುವುದೇಕಣ್ಣ (ಖ) ಮಂಜೂದೇಕಣ್ಣ (ಕ) 6. ನನುಮತದಿಂದಂ (ಕ) 7. ತತ್ತಂಡುಲೋದಳೆ ವಿಷಘ್ನಂ (ಕ) 8. ದೀಂಟಿಸೆ ಫಣಿವಿಷಾಪಹಮಕ್ಕುಂ (ಘ) 9. ವಿಷಘ್ನಂ (ಕ) 10. ಪಳಿಯೊಳರೆ (ಖ) ಕಱಿಯೊಳ? 11. ಬಾಲಾಬಾಲಕರಱಿಯಲ್ (ಘ) 12. ದೀಂಟಲ್ಕುರಗ ವಿಷಮುದಾಗಳ್ (ಖ) ಟುಗೆ ಫಣಿಯ (ಗ)

* ಇದು ಖ. ಪ್ರತಿಯಲ್ಲಿ ಕನಲ್ದಹಿ ಎಂಬ ಉತ್ತರಾರ್ಧದೊಡನೆ ಮುಗಿಸಿದೆ (ಖ)

ಕಂ|| ಗೋಜಿಹ್ವೆ ವಿಷ್ಣುಕ್ರಾಂತೆ ವಿ |
ರಾಜಿತ ನಿರ್ಗುಂಡಿ ಮೊಲ್ಲೆ [1]ಯ(ರೆ)ರ ಹೂಲಿಗಳಂ ||
ಯೋಜಿಸಿ ಜಲದಿಂ [2]ಕುಡಿಸೆ ಮ |
ನೋಜವದಿಂ ವಿಷಮನ[3]ಱಿಕುಂ ಪ್ರತ್ಯೇಕಂ || ೧೨೧ ||

ಭಿನ್ನ ಗುಣಪ್ರದಮಿಂತಿವು |
ಸನ್ನುತಮೆನಿಪರ್ಜುನಂ ಕುಮಾರಿಯುಮಂ ತಾಂ ||
ಬನ್ನಿ[4]ಯಿವೊಂದೊಂದಂ ಸಂ |
ಪನ್ನಗುಣಂ ನೀರೊಳರೆದು ಕುಡಿಸೆ ವಿಷಘ್ನಂ || ೧೨೨ ||

ತೊಱೆ[3] ಮಲ್ಲಿಗೆಯ ಸಮೂಲಮ |
ನರೆವುದು ನೀರಿಂದೆ ಮೇಣ್ ಸುನಿಂಬೆಯ ಬೇರಿಂ ||
ಪಱಿಪಡುಗುಂ ಸರ್ಪವಿಷಂ |
ಪೆಱತೇಂ [5]ಮದ್ದುಗಳಿವರ್ಕೆ ದೊರೆಯೆನಿಸುಗುಮೇ || ೧೨೩ ||

ಇಂಗುಳಮಂ ದಾಂಗುಡಿಯುಮ |
ನಂಗುರಮಂ ನೀಲಿ [6]ಶೈಲಕರ್ಣಿಕೆ ಯೋರೊಂ ||
ದಂ ಗುಣನಿಧಾನ ಕೊಡು ಪಾ |
ನಂಗೊಳೆ ನೀರಿಂದ[7]ಮುರಗವಿಷಹರಮಕ್ಕುಂ || ೧೨೪ ||

ಟಂಕಣ ಸಹದೇವಿಗಳುಂ |
ಪಂಕ[8]ರುಹದ ಕಂದಮಿಂದ್ರವಾರುಣಿಯಿವಱೊಳ್ ||
ಸಂಕಿಸದೋರೊಂದಂ ನೀ |
ರಿಂ ಕುಡಿವುದು[9] ಸರ್ಪದುಗ್ರವಿಷಹರಮಕ್ಕುಂ || ೧೨೫ ||

ಸುಗಮಮೆನಿಸಿರ್ಪ ಹೆಗ್ಗುರು |
ಟಿಗೆಯಂ ಮೇಣ್[10]ಚುಂಚಿನೆಸೆವ ಬೀಜಂಗಳುಮಂ ||
ಸೊಗಯಿಪ ಜಲದಿಂ ಕುಡಿಸಲ್ |
ವಿಗತವಿಷಂ ತಪ್ಪದಕ್ಕುಮಿದು [11]ಪರಮಾರ್ಥಂ || ೧೨೬ ||

[12]ಮುದದಿಂದೆ ನೆಲಾವರೆಯಂ |
ಸದಯಂ ನೀರಿಂದೆ ಕುಡಿಸೆ ನಿರ್ವಿಷಮ[13]ಕ್ಕೊಂ ||
ದುದಧಿರವಂ ಪೇಳ್ದನಿದಂ |
ಸದಮಳಗುಣ ನಿಧಿಯೆನಿಪ್ಪ ಮಂಗಕವೀಂದ್ರಂ || ೧೨೭ ||

1. ಯಲಹೂಲಿ (ಘ) ಯರೆಹೂಲಿ ಫಳಂ (ಖ) 2. ಕುಡಿಯೆ (ಕ) 3. ವಿಷಮನದಱಿಗುಂ (ಕ) ಮಿಷಮನಱಿಗಿವಂ ಪ್ರತ್ಯೇಕಂ (ಘ) 4. ಯಿವೊಂದೊಂದೇ (ಕ) 5. ಮದ್ದುಗಳು ದೊರೆಯೊ ಮದ್ದುಗಳವಱೊಳ್ (ಕ) 6. ಶೈಲಕನ್ಯಕಿ (ಕ) ತೈಲಕನ್ಯಂನಿಲೆ (ಖ) 7. ದಮಂಗ (ಖ) 8. ಪಂಕಜಬೇರಿಂದ್ರ (ಕ) 9. ದುರಗನುಗ್ರವಿಷ (ಖ) ಸರ್ಪದುಗ್ರವಿಷಮೆನಿಸಿರ್ಕುಂ (ಕ) ಮದುಗ್ರ ಸರ್ಪವಿಷಘ್ನಂ (ಗ) 10. ಮೇಣ್ ಮುಂಚಿಲೆಸೆವ (ಘ) 11. ಸಿದ್ಧಾಂತಂ (ಖ) 12. ಮುದದಿಂ ನೆಲಾವರೆಯುಮಂ (ಖ) 13. ಕ್ಕೊಂದುದದೀವಿಷಂ ಪೆರ....ದಂ (ಕ) ಕ್ಕೊಂದುದಿದೆವರಂ ಪೇಳ್ದನಿದಂ (ಖ) ಕ್ಕುಂದದಿವಂ ಪೇಳ್ದ (ಗ)



ಮಾಲಿನೀವೃತ್ತಂ—ಪುರುಜಿನಪತಿಮುಖ್ಯರ್ ಪೇಳ್ದ ವಿದ್ಯಾಸಮುದ್ರಾಂ |
ತರದೊ[1]ಳೊಗೆದುದಿಂತೀ ಬಿಂದುಮಾತ್ರಪ್ರಮಾಣಂ ||
ವಿರಚಿತಮಿದು ವೈದ್ಯಂ ಪೂಜ್ಯಪಾದಾಖ್ಯರಿ(ದಿ)ಂದಂ |
ಪರಹಿತಕರತಂತ್ರಂ ತತ್ಪ್ರಪಂಚಂ ಮದೀಯಂ || ೧೨೮ ||

ಮ|| ಸ್ರ|| ಘನಮಪ್ಪೀ ಜನ್ಮಕಾಂತಾರದ ನಡುವೆ ಮಹಾಘೋರದುಃಖಂಗಳಿಂ ಕೆ |
ಮ್ಮನೆ ಕಣ್ಗೆಟ್ಟಣ್ಬ [2]ಜೀವಂಗಳಿಗೆ ಮನುಜತಾಪ್ರಾಪ್ತಿಯೇ ದುರ್ಲಭಂ ತ ||
ನ್ಮನುಜತ್ವಂ ಮುಖ್ಯಮೆಲ್ಲಾ ಪುರುಷರ ಪುರುಷಾರ್ಥಂಗಳೊಳ್ [4]ತಾನಿದೆಂದಾ |
ತನುಗಂ ಸಂರಕ್ಷಣಾರ್ಥಂ ವಿರಚಿಸಿದ ಗುಣೋ[5]ತ್ತುಂಗನೆಂ ಮಂಗರಾಜಂ || ೧೨೯ ||

— ಗದ್ಯ —

[6]ಇದು

ಸಕಲವಿದಮಲ ಜಿನೇಂದ್ರೋಕ್ತಸಿದ್ಧಾಂತಪಯಃಪಯೋನಿಧಿಪಾರಗ
ಶ್ರೀಪೂಜ್ಯಪಾದಮುನೀಂದ್ರ ಚಾರುಚರಣಾರವಿಂದ
ಗಂಧಗುಣಾನಂದಿತಮಾನಸಂ
ಶ್ರೀ ಮದಖಿಲಕಲಾಗಮೋತ್ತುಂಗ
**ಮಂಗವಿಭು**
ವಿರಚಿತಮಪ್ಪ

## ಖಗೇಂದ್ರ ಮಣಿದರ್ಪಣದೊಳ್

ನಿರ್ವಿಷಪಾನಾಧಿಕಾರಂ
ಪಂಚಮಂ
ಮಂಗಳಮಹಾಶ್ರೀ.

---

1. ಳೊಗೆದುದೀಬಿಂದು (ಕ) ಳೆಸೆದುದೀಬಿಂದು (ಖ) ಳೊರೆದುದಿಂತೀ (ಘ) 2. ಜೀವಂಗಱಿಯೆ ?
3. ಮನುಜಸತ್ತಾಪ್ರಾಪ್ತಿ (ಘ) 4. ತಾನಿದೆಂತಾತನುಗಂ (ಕ) 5. ತ್ತುಂಗನೀಮಂಗರಾಜಂ (ಖ)
6. ಇದು ಶ್ರೀಮದಖಿಲಗುಣಾಗಳಾಗಮೋತ್ತುಂಗ
ಮಂಗವಿಭು ವಿರಚಿತಮಪ್ಪ ಖಗೇಂದ್ರ—
ಪಂಚಮಂ. ಮಂಗಳಮಹಾ ಶ್ರೀ (ಖ)

ಸಕಲಜಿನೇಂದ್ರೋಕ್ತ ಸಿದ್ಧಾಂತ ಪಯಃಪಯೋಧಿಪಾರಗ
ಶ್ರೀಪೂಜ್ಯಪಾದಮುನೀಂದ್ರೋಕ್ತ ಚಾರು ಚರಣಾರವಿಂದ
ಗುಣಾನಂದಿತ ಮಾನಸಂ ಶ್ರೀಮದಖಿಳಕಳಾಗಮೋ-
—ನಿರ್ವಿಷಾಧಿಕಾರಂ ಪಂಚಮಂ. (ಗ)

# ಷಷ್ಠಾಧಿಕಾರಂ

## [1]ಅಂಜನಪ್ರಕರಣಂ.

ಕಂ|| ಶ್ರೀವಿದ್ಯಾಪ್ರಕೃತಿಯೆನಿ |
ಪ್ಪಾವಿಭುವಂ ಪಾರ್ಶ್ವನಾಥನಂ ವಂದಿಸಿ ಸ ||
ದ್ಭಾವಂ ಸಕಳಸಮಾಶ್ರಿತ |
ಪಾವನ[2]ನೆನಿಪಂ ಸರಸ್ವತೀ[3]ಮುಖತಿಳಕಂ || ೧ ||

[4]ಕಂಜಾಸನೆಯಂ ವಿಷಭಯ |
ಭಂಜನೆ ಯೆನಿಸಿರ್ದ ದೇವಿ ಪದ್ಮೆಯ ನಯದಿಂ ||
ದಂ ಜಾನಿಸಿ ಫಣಿದಷ್ಟಂ |
ಗಂಜನ [5]ದಿವ್ಯೌಷಧಂಗಳಂ ವಿರಚಿಸುವೆಂ || ೨ ||

ಮ|| ಕವಿತಾಕಾಮಿತ ಕಾಮಧೇನುವನದಂ [6]ವಿದ್ಯಾಮದವ್ಯಾಪ್ರುನಿಂ |
ದೆ ವಿಘಾತಂ ಸ್ಫುಟಮಾಗದಂತೆ [7]ಸುಧೆಯಂ (ತಾಂ) ಮಾಡಿ ಮಂತ್ರಜ್ಞರ ||
ಪ್ಪವರನ್ಯರ್ಗೆ ಹಿತಾರ್ಥಮಾಗದಿತ [8]ಸದ್ಧ್ಯಾನೈಕನಿಷ್ಠರ್ ದಿಟಂ |
[9]ಸುವಿನಿಷ್ಟಾಮೃತ ಮಂತ್ರಮಂ ಕುಡುಗೆ ಪೇೞ್ದಂತೀ ಪ್ರಯೋ[10]ಗಂಗಳಿಂ || ೩ ||

ಮ|| ತನುವಿಂದಾನನಮಲ್ಲಿಯುಂ [11]ಶುಭಕರಂ ಮತ್ತಲ್ಲಿ[12]ತೋರ್ಪೀವಿಲೋ |
ಚನಮೆಂಬಂತಿರೆ ಲೇಸು ಲೇಪನ ಮದರ್ಕ್ಕಂ ಪಾನ ಮಾಪಾನದಿಂ ||
ವಿನುತಂ ತನ್ನಯನಾಂಜನಂ [12]ಬಲುಹೆನಿಪ್ಪಾ ತಾರತಮ್ಯಂಗಳಿಂ |
ಜನತಾಸ್ತುತ್ಯದೃಗಂಜನಂ (ಜನ)ಹಿತಂ [13]ವಕ್ತವ್ಯಮಿನ್ನಂತಱಿಂ || ೪ ||

ವ|| ಅದೆಂತೆಂದೊಡೆ—

ಕಂ|| ಪಿಪ್ಪಲಿ ಚಿತ್ರಕ ಶಿವೆ ಲೇ |
ಸಪ್ಪ ರಸಂ ಮೆಱಿಸು ಪೆರ್ಗ್ಗರುಂಟಿಗೆ ಯಿವನಿಂ ||
[14]ತೊಪ್ಪವ ಸೈಂಧವಯುತಮಂ |
ತುಪ್ಪದೊಳೆಸೆ ನಿಮಿಷದಿಂ ವಿಷಘ್ನಮೆನಿಕ್ಕುಂ || ೫ ||

---

1. ದಷ್ಟಂಗಂಜನ(ಕ) 2. ಪಾವನಮೆನಿಪಂ (ಕ)(ಗ) 3. ಮಣಿಹಾರಂ(ಘ) ಮಣಿಮುಣಿಮುಕುರಂ (ಗ) 4. ಕಂಜಾನನೆಯ (ಕ) ಸನೆಯಂ ವಿಷಭಯಭಂಜನಮೆನಿ (ಗ) 5. ದಿವ್ಯೌಷಧಿಯಂ. 6. ಮಿಥ್ಯಾಮದ (ಕ) ಕಾಮಿತಧೇನುವನರಂ ಮಿಥ್ಯಾ (ಗ) 7. ಸುವಿದ್ದೆಯಂ (ಕ) ಸುವಿದ್ಯೆಯಂ (ಗ) 8. ಸಂಧ್ಯಾನೈಕ (ಕ) 9. ಸವಿಶ್ರೇಷ್ಠಾ (ಕ) ಸವಿನಿಷ್ಟಾ (ಖ) ಸವಿಶೇಷಾಮೃತ ಮಂತ್ರಕಂ (ಗ) 10. ಯೋಗಂಗಳಂ (ಕ) ಬಾಯಿಶುಭಂ (ಗ) 11. ಶುಭಜನಂ (ಖ) ಬಲುಪಿನಿಪ್ಪಂ (ಗ) 12. ತೊರ್ವಿದಿವಿಲೋ (ಖ) ತೋರ್ಪೀವಿರೋ (ಗ) 13. ಕರ್ತವ್ಯಮಿನ್ನಂತಱಿಂ (ಘ) 14. ತೋರ್ಪವ (ಖ) ದೊಪ್ಪವ(ಗ)



ಕಂ|| ರಸಗಂಧಕಮಾಕ್ಷಿಕಯುತ |
[1]ಮೆಸೆವಾ ವಾಕುಚಿಯ ಬೀಜ ನೀಲಿಗಳಂ ಮ ||
ರ್ದಿಸಿ ನಿರ್ಗುಂಡಿಯ ಕಕ್ಕೆಯ |
ರಸದಿಂ[2]ದೆಚ್ಚಹಿಯ ವಿಷಹರಂ ಗುಣನಿಲಯಾ || ೬ ||

ಪಾತಾಳಗರುಡನೆಲವಂ |
[3]ಸೂತಂ ಸತ್ಪುತ್ರಜೀವಿ ಕುನಟಿ ವಿಳಂಗಂ ||
ಭೂತಳಮಱಿಯೆ(ಗೆ) ವಿಷಘ್ನಮಿ |
[4]ದೇತೊದಳೆಚ್ಚಲ್ಕೆ ಪುಳಿಯೊಳಿವಱ ಸು(ನು)ಯೋಗಂ || ೭ ||

ಮ|| ಇಲಿಪಾಷಾಣ ಮಯೂರತುತ್ಥಮಮೃತಂ | ಪಾಷಾಣ[5]ಭೃತ್ಕಲ್ಲ ಪೂ |
ವಿಲಸದ್ಗಂಧಕ ಪುತ್ರಜೀವಿ ಯಗಿಲುಂ ಕರ್ಪೂರತೈಲಾಹ್ವ[6]ಮಿಂ ||
ಗುಲಿಕಂ ನಾಗರಮಿಪ್ಪೆ [7]ಕಪ್ಪರಿಗಳಂ ತನ್ಮೂತ್ರದಿಂ ಮರ್ದಿಸಿ |
ಟ್ಟೊಲಿದೆಚ್ಚುತ್ತಮಮ[8]ಪ್ಪ ಜೇನ ಘೃತದಿಂದವ್ಯಾಕುಳಂ ನಿರ್ವಿಷಂ || ೮ ||

ಉ|| ಅಂಜಿಕೆ ಯೆಂಬುದೇಕೆ ಫಣಿಕೊಂಡೊಡೆ ಸಾವಡಸಿರ್ಪು[9]ದೇ ಕರಂ |
ರಂಜಿತಪುತ್ರಜೀವಿಯನೆ ಗೋವಿನ ದುಗ್ಧದೊ[10]ಳೀಂಟಿ ಪೂಸೆ ಮ ||
ತ್ತಂಜನನಸ್ಯದಿಂದಡರ್ದ ನಂಜಿೞಿದೋಡುಗುಮೆಂತೆನಲ್ ಮಹಾ |
ಮಂಜಿನ[11]ಪುಂಜಮರ್ಕಕರದಿಂದೞಿವಂತೞಿಗುಂ ಧರಿತ್ರಿಯೊಳ್ || ೯ ||

ಕಂ|| ಪಿಪ್ಪಲಿ ತುತ್ಥಂ ಸೈಂಧವ |
[12]ಖಪ್ಪರಿಯುಂ ವಿಶ್ವಮಿಾಶ್ವ[13]ರಿಯುಮೆಂಬಿನಿತಂ ||
ತಪ್ಪದೆ ಕಣ್ಗೆಸೆ ವಿಷಮೇ |
ನಿಪ್ಪುದೆ[14]ಪುಳಿಯಿಂ ನೃಮೂತ್ರದಿಂ ಭೂತಳದೊಳ್ || ೧೦ ||

ಶಾ|| ಮೂಱುಂವತ್ಸರಮಪ್ಪಿನಂ ಬೆಳೆದುದಂ ಪರ್ವಿದ್ದುದಂ ನೋಡಿ ಬೇ |
ರೂಱಿದಾ ಪುಳಿಹೀರೆಯಂ ನಯದೊಳಂ ತಂದಿರ್ದು[15]ದಂ ಮತ್ತಮಿಂ ||
ಪೇೞಲ್ಕಾವಿಕಗವ್ಯಮಾಹಿಷಮೆನಿಪ್ಪೀ ಕ್ಷೀರದಿಂದಟ್ಟು ಮೆ |
ಯ್ದೋಱಲ್ [16]ತದ್ವಿಷಹಂ ಜಲಾಂಜನಲಸನ್ನಸ್ಯಪ್ರಯೋಗಂ ಹಿತಂ || ೧೧ ||

---

1. ನಿವಿಗ್ಗಳಂ ತಾಮರ್ದಿಸಿ (ಖ) ಮಿಸವಿತಾಕುಟಿಯಬೀಜ (ಗ) 2. ದೆಚ್ಚಲಹಿಯ (ಖ) 3. ತ್ವಕ್ಪತ್ರತಜೀವಿ (ಖ) ಗೂತಂ ತತ್ಪುತ್ರ (ಗ) 4. ವೇತೇದೆಚ್ಚಲ್ಕೆ ಪುಳಿಯೊಳಿವ (ಘ) 5. ಭಿತ್ಕಲ್ಲಪೂ(ಗ) 6. ಹ್ವಮಿನಿಕುಂನಾಗರ (ಗ) 7. ತಪ್ಪಲಿಗಳಂ (ಗ) ಖಪ್ಪಲಿ(ಘ) 8. ಮಪ್ಪಂಜನ ಘೃತದಿಂದವ್ಯಕಳಂ (ಖ) ದಿಂದನ್ಯಾಮಳಂ (ಘ) 9. ದೇತೆರಂ (ಗ) 10. ದೊಳಿಂ ಪೂಸಂನನ ಬದಿಡರ್ದವಜಿಳಿ (ಖ) 11. ಪುಂಜಮುಂ ರವಿಕರಂಗಳಿನೆಂತೞಿಗುಂ ಧರಿ (ಘ) ಪುಂಜಮಂ ರವರಿವಿಕರಂ ಕಳೆಗುಂ (ಖ) 12. ತಪ್ಪಲಿಯಂ. 13. ರಿಗಳೆಂಬಿನಿತಂ (ಘ) 14. ಪುಳಿಯುಂ (ಗ) 15. ದಂದುತ್ತಮಂ (ಘ) 16. ತದ್ವಿಷಭಂಜನಾಂಜನಲ(ಕ) ತದ್ವಿಷಹಂ ಜನನಂಜನಲ (ಖ) ಮೆಯ್ಯಾರಲದ್ವಿಷಂ ಜನಂ ಜಲಸಲ್ಲಸ್ಯಪ್ರ (ಗ)

ಕಂ|| ರಸಮುರುತಾಳದ [1]ಪಣ್ಗಳ |
ರಸಮಂಬುಧಿಫಳಮುಮಿಟ್ಟಯಂಕೊಲೆಬೀ ||
ಜಸಮೇತಂ ನಸ್ಯಾಂಜನ |
ಮೆಸೆವ ನೃಮೂತ್ರದೊಳೆ ತದ್ವಿಷಾಪಹಮಕ್ಕುಂ || ೧೨ ||

ಚಂ|| ಹುಲಿಗಿಲಬೀಜ ಸೈಂಧವ ಕಟುತ್ರಯ ಬಿಲ್ವಫಲಂ [2]ನಿಶಾದ್ವಯಂ |
ಜಲಧಿತರಂಗ ಮರ್ಕ [3]ಕತಕಾಸ್ಥಿಗಳೆಂಬಿವನೊಂದುಗೂಡಿ ಸಂ ||
ಚಲಿಸದೆ ನಿಂಬೆಯೊಳ್ಪುಳಿಯೊಳೀಂಟಿಸೆ ನಸ್ಯಮನಂತೆ ಮಾಡಲಾ |
[4]ಬಲುಗರಳಂ ಮಹೋರಗವಿಷಂ ಕಿಡುಗುಂ ಧರೆಯೊಳ್ ಬುಧೋತ್ತಮಾ || ೧೩ ||

*ಕಂ|| ಬೆರಸಿಂದ್ರವಾರುಣಿಯೊಳೊಂ |
ದಿರೆ ಬೆಳುಗಾರಮನೆ ಸಣ್ಣಮಾಗರೆದುದನಂ ||
ತಿರಿಸಿ ಪೊಗೆಯೊಳ್ ಬೞಿಕ್ಕಂ |
ನರಮೂತ್ರದೊಳೆಚ್ಚೆ ಸರ್ವವಿಷಮಿರದೞಿಗುಂ || ೧೪ ||

ವಾರಿಧಿಫಳಮುಂ ಬಜೆ ಕಾ |
ಱ್ಸೀರೆಯ ಬಿತ್ತುಂ ಸಮಾನಮಾಗಲ್ಕಂ ಜಂ ||
ಭೀರದ ರಸದಿಂದೆಚ್ಚೆ ನಿ |
ವಾರಿಸುಗುಂ [5]ನಸ್ಯದಿಂ ಮಹೋರಗವಿಷಮಂ || ೧೫ ||

ಮಣಿರಂಗಂ—ಪುತ್ರಜೀವಿಯು ದಾಂಗುಡಿ ನೆಗ್ಗಿಲ್ |
ಪತ್ರಕಂ ಅಜಮೋದ ಸಮೇತಂ ||
ಮೂತ್ರದಿಂದಹಿ ಕೊಂಡ [6]ನರಂಗಂ |
ನೇತ್ರಯುಗ್ಮದೊಳೆಚ್ಚೆ ವಿಷಘ್ನಂ || ೧೬ ||

ಕಂ|| ನೆಲ್ಲಿಯ ಬೀಜಂ [7]ಗುಂಜಿಯು |
ಮಲ್ಲಂ ಕರ್ಕೋಟಿ ವಜ್ರಲತೆ ಖರ್ಜೂರ ಮಿ ||
ವೆಲ್ಲವನಾಮ್ರದಿ ಮರ್ದಿಸಿ |
ನಿಲ್ಲದೆ ಕಂಗುಂಗೆ [8]ಯೆಣ್ಣೆಯಿಂದೆಸೆ ವಿಷಹಂ || ೧೭ ||

1. ಪಣ್ಗಳುಸಮುದ್ರ ಫಳಂಗಳಿಟ್ಟಯಂಕೊಡ ಬೀಜ (ಖ) ಪಣ್ಗಳ್ಸಮುದ್ರ—ಯಂಕೊಲದ ಬೀಜ (ಗ) 2. ನಿಶಿದ್ವಯಂ (ಖ) ಶಿದ್ವಯಂ ತಲಧಿತದಂಗಮತ್ಕತದಕಾಸ್ಥಿ (ಗ) 3. ಕತ್ತಕಾಸಿಗಳೆಂಬಿವನೊಳುಸ ಗೂಡಿ—ನಿಂಜಿಲಿಯು ಬೆಳೊಳ್ಪುಳಿಯೊಳಂದಿಸೆ (ಖ) ಯೊಳ್ಪುಳಿಯುರಂತೆಸೆ ನಸ್ಯಮನಂತೆಮಾಡಲಾ ಉಳು ಗರಳಮುಮಂ ಮಹೋರಗವಿಷಂ ಬಿಡುಗುಂ ಪರೆಗುಂ (ಗ) ಪುಳಿಯುನಿಟ್ಟಸಿ ನಸ್ಯ (ಘ) 4. ಬಲುಗರಮುಂ (ಖ) 5. ನಸ್ಯದಿಂದೆ(ಗ) 6. ನರಾಂಗಂ (ಗ) 7. ಗುಂಜಿಯುಮೂಲಂ ಕರ್ಕೋಟಕಿ—ಮಿವೆಲ್ಲಂ ತಾಮ್ರದಿಯುಂದಿ ವಿಷಘ್ನಂ (ಖ) 8. ಯೆಣ್ಣೆಯಿಂದೆಚ್ಚೆ ವಿಷಹರಂ. (ಗ)

* ಇದು (ಖ) ಪ್ರತಿಯಲ್ಲಿಲ್ಲ.



*ಚಂ|| ಬಲಿದುದು [1]ತದ್ವಿಷೂಚಿ ಯಹಿಕೊಂಡ ವಿಷಂ ಪಿರಿದಾದುದೆಂದು ಮ |
ಮ್ಮಲ ಮಱುಗಲ್ಕದೇಕೆ ಬೆಳೆದಿಂಗುಳದೊಳ್ ಗುೞಿಮಂ [2]ಪುನರ್ನವೀ ||
ವಿಲಸಿತ ಮೂಲಸೈಂಧವಯುತಂ ಮರಿಚಾನ್ವಿತಮೆಚ್ಚೆ ಕಣ್ಗೆ ನಿ |
ರ್ಮಲಮಿನಿಸಿರ್ದು ನಿಂಬೆಯ ರಸಂಗಳೊಳಂತವರ್ಗಂ ಸುಖಾವಹಂ || ೧೮ ||

ಕಂ|| ಏಪಡೆಮಾತೋ ಸರ್ವ ವಿ |
ಷಾಪಹಮಿದೆ ಸಾಲ್ಗು [3]ಮಗಧರುಹ ಮರಿಚಮುಮಂ ||
ಜೇಪಾಳಮಿವಂ ಸಮಮು |
[4]ಪ್ಪಾ ಪಾಂಗಿಂದಜಸು(ನ)ಮೂತ್ರದಿಂದರೆವುದಿದಂ || ೧೯ ||

ಸುಲಲಿತಮೆನಿಸಿದ ನಿಂಬೆಯ |
[5]ಪುಳಿಯೊಳ್ ತೊಯ್ದಟ್ಟು ಪೊಗೆಯೊಳಂ ಕಟ್ಟೆ ಬೞಿ ||
ಕ್ಕಲಸದೆ ನೃಮೂತ್ರದಿಂದೆಸೆ |
ಪಲವಱೊಳೀಂ ಫಣಿವಿಷಘ್ನಮಿಂತಿದುಮಿಳೆಯೊಳ್ || ೨೦ ||

ಕುರುಟಿಗೆ ಯೆಲೆಯಂ ಕೞಿಯಿಂ |
ದರೆದೀಂಟಿಸೆ ಬೞಿಕೆ ಪೆರ್ಗುರಂಟಿಗೆ ಯೊಂದಂ ||
[6]ನರಮೂತ್ರದೆ ಕಣ್ಗೆಸೆಯ |
ಲ್ಕುರಗನ ವಿಷಮುೞಿಗುಮೆಂಬುದೇಂ ಕೇವಳಮೇ || ೨೧ ||

ಉ|| ಸಾರಮೆನಿಪ್ಪ ಬಂಜೆ ಮಡುವಾಗಲ ವಿಟ್ಟ [7]ಪುನರ್ನವಾಖ್ಯೆ ಖ (ಕ) |
ರ್ಜೂರಫಲಂ ಸಮುದ್ರಫಲದಾಂಗುಡಿಯುಂ[8] ಕತಕಾಸ್ಥಿಯುಂ ತ್ವಚಂ ||
ಚಾರುಸುದುಗ್ಧ ಕಂಚುಕನುಮಂ [9]ಮಧುವಿಂದೆ ವಿಮರ್ದಿತಂ ವಲಂ |
ವಾರಿ[10]ಯೊಳೆಚ್ಚೆ ತೇಡು ಫಣಿದಷ್ಟವಿಷಾಪಹವೊಂದೆ ಸಾಲದೇ || ೨೨ ||

ಕಂ|| ವರಪದ್ಮಕೇಸರಂ ನಾ |
ಗರ[11]ಮಿಂಗುಳದೆಸೆವ ಪಣ್ ಪುನರ್ನವಿ ಯಿವಱೊಳ್ ||
ಬೆರಸಿರೆ ಮುಸ್ತೆಯುಮಂ ಕೊಂ |
ಡರೆವುದು ಜಂಭೀರರಸದೊಳಂ ಭಾವಯುತಂ || ೨೩ ||

1. ತಟಶೂಚಿ (ಖ) 2. ಸುವರ್ಣನೀವಿಲಸಿತ. 3. ಮಗದಭವಮಾರಿಚಂ ಜೇಪಾಳಮುಮಿವಂ ಸದು ಮಪ್ಪಾನಿಂದಜ (ಖ) ಏಪದೆಮಾತೊ ಸರ್ವವಿಷಾಪಹನಾಲ್ಕುಮಗದ (ಗ) 4. ಪ್ಪಾಪಾಲಿಂದಂಜನಮೂತ್ರ ದಿಂದರೆವುದವಂ (ಗ) 5. ಫಲದೊಳ್ತೋಡಿಟ್ಟು ಪೊಗೆಯೊಳಂ ಕಟ್ಟಿಟ್ಟು (ಖ) ನಿಂಬೆಯ ಫಲದೊಳ್ ತೋಡಿಟ್ಟು ಪೊಗೆಯೊಳಂ ಕಟ್ಟಿಟ್ಟು ——ದಿಂದೆಚ್ಚೆ ಪಲವರೊಳೀಂ ಫಣಿವಿಷಘ್ನಮಿಂತೀಯೋಗಂ (ಗ) ಸರ್ವವಿಷಹರಂ ಗುಣನಿಳಯಾ (ಘ) 6. ನರಮೂತ್ರದಿ ಕಣ್ಗೆಚ್ಚಲ್ಕುರಗನ. (ಖ) 7. ಲುಯೆಟ್ಟೆಪುನರ್ನವಾಖ್ಯ (ಖ) 8. ಯುಂ ತ್ವಚಂಚರುಸದುಗ್ಧಕಂಚುಕ—ತಂತರಂವಾ. 9. ಧುವೆಂದಿವಿಮರ್ದಿತಂ ವಾರುಳಿ (ಖ), 10. ರುಧಿಯೊಳ್ತೀದೆಚ್ಚಲ್ ಫಣಿದಷ್ಟವಿಷಕ್ಕವೊಂದೆ (ಗ) 10. ಮಿಂಗಣದೆಸೆವ.

* ಈ ಪದ್ಯವು (ಗ) ಪ್ರತಿಯಲ್ಲಿಲ್ಲ.

ಕಂ|| [1]ವಱಿಗೆಗಳಂ ಮಾಱ್ಪುದವಂ |
ಘೞಿಲನೆ ಫಣಿ ಕೊಂಡವಂಗೆ ಕಣ್ಗಳೊಳಂ ಸಂ ||
[2]ಚಳಿಸದ ಮಾಱ್ಕೆಯೊಳೆಸಲಾ |
ಗಳೆ [3]ಪಱಿಗುಂ ಫಣಿವಿಷಂಗಳುಂ ಗುಣನಿಲಯಾ || ೨೪ ||

ಶಶಿಕಾಂತ ವೃತ್ತಂ—ಬಂಜೆ ಮಡುವಾಗ |
ಲ್ಕಂಜರಸದಿಂ [4]ಕ ||
ಣ್ಗಂಜನ ಮದಾಗಲ್ |
ನಂಜಿಱಿದು ಪೋಕುಂ || ೨೫ ||

ಕಂ|| ಬಱುವದಣೆ ತುಱುಚಿ ಯಾಸಡಿ |
ಯೆರನ ಫಳಂ ನಾಗಚಂಪಕಂ ನೆಲ್ಲಿಯ ಬಿ ||
ತ್ತಿರಲರೆದು [5]ಪೂಗರಸದಿಂ |
ದುರಗಂ[6]ಕೊಂಡಂಗೆ ಕಣ್ಗೆಸಲ್ ವಿಷಮುಱಿಗುಂ || ೨೬ ||

ಸ್ರ|| ವ್ಯೋಷಂ ಸಪ್ತಾಕ್ಷಿ ನಿರ್ಗುಂಡಿಲಸುನ ಗಿರಿಕನ್ಯಾಭಿಧಾನಂ ಲವಂ[7]ಗೋ |
ರೋಷಾಶೇಷಾರ್ಥ ಸಿದ್ಧಿಪ್ರದಮೆನಿಪ ಲಸತ್ಪಾರದಂ ಗೂಡಿ ಪೇೞ್ದಂ ||
ತೀ[8]ಷಟ್ಕಂ ಮರ್ದಿತಂ ಯೋಗದೊಳಿದುವೆ ವಿಶಿಷ್ಟಾಂಜನಂ [9]ಕಣ್ಗೆಸಲ್ ನಿ |
ಶ್ಶೇಷಂ ತಾಮಾಗಲೆಲ್ಲಾ ಫಣಿ[10]ವಿಷಮನದೇ ತೀರ್ಚುಗುಂ ಭವ್ಯಬಂಧೂ || ೨೭ ||

ಮಲ್ಲಿಕಾಮಾಲೆ— [11]ನೀಲಿ ಮಾದಲ ಮಾಕ್ಷಿಕಂ ಬಜೆ ಮುಂಡಿ ಟಂಕಣ ತಿ(ಸಿ)ಂದುಕಂ |
ಬಾ(ಬೋ)ಳಮುಂ ಕಟುಕತ್ರಯಂ ತಗರಂ ಪುನರ್ನವಿ ಯಿಪ್ಪೆಯೊ ||
ಳ್ಮೊಲವೊಪ್ಪುವ ಲಕ್ಷ್ಮಿ ಲೊಕ್ಕಿ ಖ(ಸಿ)ಚೋರ ಪುಷ್ಕರಮೂಲ ವಿ(ನಿ) |
ರ್ವಾಳಮಪ್ಪ [13]ಕರಂಜಮುಂ ಮಧು ಕೂಡೆ ಅಂಜಿ(ಚಿ)ಗೆ ಯೆಂಬಿವಂ|| ೨೮ ||

ಕಂ|| ಬೆರಸ(ಸಿ)ರೆ ಗಾಂಧಾರಿ ಗುಣೋ |
ತ್ಕರಯುತ ಖರ್ಜೂರ ಯೋಗಮಂ ತೇದೆಚ್ಚ ||
ಲ್ಕುರಗ ವಿಷದಷ್ಟ[14]ನಕ್ಷಿಗಿ |
ದರರೇ ಕ್ಷಣಮಾತ್ರ[15]ದಿಂದೆ ನುಡಿಗುಂ ನಡೆಗುಂ || ೨೯ ||

ಪಾತಾಳ ಗರುಡ ಪಿಪ್ಪಲಿ |
[16]ಸೂತಾನ್ವಿತ ಪುತ್ರಜೀವಿಯಂ ಮರ್ದಿಸಿರ ||
ಲ್ಪೂತಾದ್ರ್ರಕರಸದಿಂ ಪಡೆ |
ಮಾತೇಂ [17] ನೀರಿಂದೆ ತೇದೆಸಲ್ ವಿಷಮುಱಿಗುಂ || ೩೦ ||

---

1. ಗುಳಿಗೆಗಳಂ (ಗ) 2. ಚಲಿಸದೆ (ಗ) 3. ಪರೆಗುಂ (ಗ) 4. ಕು (ಕ) ಡಂಜನ (ಖ) ಕಣ್ಣಂ ಚಿತವಮಾಡಲ್ ನಂಜಱಿದು (ಘ) 5. ಪೂರರಸದಿಂ (ಖ) 6. ಕೊಂಡಗ್ರತಂಗೆಸಲ್ವಿಷ. 7. ಗೊತ್ತಾ ಷಾರ್ಥಾಸಿದ್ಧಿ (ಗ) ಗೋತ್ತೋೕಷಾ (ಖ) 8. ಷಟ್ಕಮರ್ದಿತಂ (ಗ) 9. ಕಂಗೆಸೆಯಲ್ (ಗ) ವಿಶಿಷ್ಟಾಂಜನಂ ಕಂಗೆಸಲ್(ಖ) 10. ವಿಷದದೆ ತಿರ್ಚುಗೆಂ (ಗ) 11. ನೀಲ——ಬಜೆಟಂಕಣತಿಂದುಕಂ ಕಟುಕಟುಕತ್ರ (ಖ) ನೀಲ——ಬಜೆಮುಂದಿರ್ದ ಬಜೆಟಂಕಣದಿಂದಕುಂಬಾಳಮುಂ–ವಿರ್ನಾಮಳ (ಗ) ಗಿರಿಮಾಗಧ ಮಾಕ್ಷಿಕ (ಘ) 12. ಲಕ್ಷ್ಮಿವುಕ್ಕಿಸಿಚೋರ (ಖ) 13. ಕರಂಜಮುಂಮಡುಗೂಡೆ ಅಂಜಿಗೆ ಎಂಬಿವಂ (ಗ) 14. ನಕ್ಷಿಗಳ್ಗಿರದೆ (ಘ) ನಕ್ಷಿಗಿದನರೆ ದೆಚ್ಚಲುಕ್ಷಣ (ಗ) ನಕ್ಷಿಗದೆರದಾಕ್ಷಣ (ಘ) 15. ಮೂತ್ರ ದಿಂದೆನಾಡೆ....ಂ....ಡಿಗುಂ (ಖ) 16. ಸೂತಂವರ (ಘ) 17. ಗಿರಿಂದತೇದೆಸಲ್ವಿ (ಖ) ನೀರಿಂದತೇದೆಸಲೆವಿಷ (ಗ)



ಕಂ|| ಮಾಗಧಮಯೂರಶಿಖಿಯುಂ |
ದಾಗುಡಿ ಸರ್ಪಾಕ್ಷಿ ತುತ್ಥ ಪರ್ಪಾಟಕವೊಂ ||
[1]ದಾಗಿ ಬಜೆ ಯಾಟರೂಷಕ |
ಯೋಗಮಿದಂಜನದೊಳಹಿವಿಷಂಗಳನಱಿಗುಂ || ೩೧ ||

ಮ|| [2]ತರದಿಂದಿಂಗುಳಮಗ್ನಿವಳ್ಳಿ ಮಗಧೋದ್ಭೂತಾನಲಂ [3]ಸಿಂಹಿ ಕೇ |
ಸರಿಬೀಜಂ ಹಯಗಂಧಿ ನೀ[4]ರಸನಿ ಭದ್ರಾಕ್ಷಿಪ್ರಭೇದಂಗಳೊಳ್ ||
ಬೆರಸಿರ್ದಾ ಬಜೆ ಕೃಷ್ಣಗುಂಜಿಗಳುಮಂ ಕೂಡಗ್ನಿವಕ್ತ್ರಾಖ್ಯದೊಳ್ |
[5]ಖರಮೂತ್ರ ಪ್ರವಿಮರ್ದಿತಾಂಜನಮಿದಂ ತೇದೆಚ್ಚು ನೇತ್ರಂಗಳೊಳ್|| ೩೨ ||

ಕಂ|| [6]ನರಮೂತ್ರದೊಳಂ ತೇದೆ |
ಚ್ಚರಿದೆನಸುವ] ಸರ್ಪವಿಷಮವಿಷಮಾಕ್ಷಣದೊಳ್(ದಿಂ) ||
ಪರಿಹರಿಕು[7]ಮತ್ತೆ ಮುಗುಳೀ |
ಪುರವಿಭು ಮಂಗರಸನಭಿಮತಂ ತಪ್ಪುಗುಮೇ || ೩೩ ||

ಚಂ|| ಕೊಡಸಿಗೆ ನಾಗದಾಳಿ ವರಚಂಪಕ ನಾಂಗುಲಿ ಪೆರ್ಗುರಂಟೆಗಂ |
[8]ಸೊಡರಿಪ(ಸ)ನಾಗಸರ್ಪಮೆಸೆವೀಶ್ವರಿ [9]ಕನ್ನೆ ಕುಮಾರಿ ಪುಟ್ಟಪಣ್ ||
ಪೊಡವಿಗೆ [10]ಗಂಧಯುಕ್ತ ಮರುಗಂ ದವನೋದ್ಭವಬೀಜ ಮೆಂಬಿವಂ |
ಬಿಡದರೆ ಗವ್ಯಮೂತ್ರದೊಳೆ ತದ್ವಟಕಂಗಳುಮಂ ಪ್ರಯತ್ನದಿಂ || ೩೪ ||

ಕಂ|| [11]ಇರಿಸಿ ಮೊಲೆವಾಯೊಳೆಚ್ಚುಗೆ |
ನರರ್ಗಂ ಪಲತೆಱದ ಸರ್ಪ [12]ವಿಷಮ ವಿಷಂಗಳ್ ||
[13]ಪರಿಹರಿಕುಂ ತನುರಕ್ಷಣ |
ಕರಯೋಗಮಿದೊಂದೆ ಮಂಗರಾಜನ ಮತದಿಂ || ೩೫ ||

*[14]ಹುಲಿಗಿಲೇರಂಡ ವೃಕ್ಷೋ |
ತ್ಪಳ ಬಂಧೂಕಂ ಪಟೋಲ ಪಥ್ಯಯುತಂ ಪಿ ||
ಪ್ಪಲಿಯಂ ನರಮೂತ್ರದೊಳಿಂ |
[15]ತಲಸದೆ ತೇದೆಚ್ಚಲಹಿಕುಲಂಗಳ ವಿಷಮುಂ || ೩೬ ||

---

1. ದಾಗಿರೆ ಬಜೆಯಾಟರೂಷಕ (ಘ) ರೂಷಯೋಗಮಿದುಂ ಜಗದೊಳ (ಖ) 2. ಥರದಿಂದಂ ಗುಳಮಗ್ನಿವಳ್ಳಿ ಮಗದೋಳ್ಭೂ (ಗ) 3. ಸಿಂಗಕೇಚರಿ (ಖ) ಸಿಂಗಕೇಸರಿ ಬೀಜಂಹಯನಂದಿ (ಗ) 4. ನೀರುಶನಿ (ಖ) ನಿರಸನಿ (ಗ) 5. ನರಮೂತ್ರ (ಖ) 6. ನರಮೂ........ದೆಚ್ಚ (ಗ) 7. ಹರಿಕು ಮತ್ತೆ ಮುಗುಳಿಯ (ಖ) ಮತ್ತಿಂಗುಳೀಪುರ (ಗ) 8. ಸೊಡರಿಸನಾಗ (ಘ) 9. ಕನ್ನೆಪುಟ್ಟಪಣ್ (ಗ) 10. ಕಾದಯುಕ್ತ ಮುರುಗಂಧವನೋ (ಗ) 11- ಯಿ....ಮೊಲೆ )ಗ) 12. ಕುಲದುಗ್ರವಿಷಂ (ಘ) 13. ಹರಿಕುಂ........ಕರಯೋಗ (ಖ) 14. ಮುರಿಗಿಲೆರಡವೃಕ್ಷೋಪಪಟೋಲ (ಖ) 15. ತಲಸದೆಚ್ಚಲಹಿ ವಿಷಂಗಳವಱಿಗುಂ (ಕ)

* ಈ ಪದ್ಯವು (ಗ) ಪ್ರತಿಯಲ್ಲಿಲ್ಲ. " ಮಂಗರಾಜನಮತದಿಂ ಯೆರಡರಿಸಿನ ಮಂತೇದೆಚ್ಚಲ್ಪೂತಲದೊಳು ........ತನ್ನಹಿತಂ ವಿಷಘ್ನಮಿದು ಕೇವಳಮೇ (ಎಂದು ಗ್ರಂಥಪಾತದೊಡನೆ ನಿರಂತರವಾಗಿದೆ.)

ಕಂ|| ಎರಡರಿಸಿನಮಂ ಬಿಲ್ವಂ |
[1]ಸಿರಿಸದ ಕುಸುಮಂ ರಸಾಂಜನಂ ತ್ರಿಕಟುಕಮಂ ||
ಬೆರಸಿ ಕರಂಜದ ಬಿತ್ತಮ |
ನರೆ ನರಮೂತ್ರದೊಳೆಸಲ್ ವಿಷಾಪಹಮಕ್ಕುಂ || ೩೭ ||

ಮಾತೇಂ ನೃಮೂತ್ರದಿಂದಂ |
ಶ್ವೇತಪುನರ್ನವಿಯ ಮೂಲಮಂ ತೇದೆಚ್ಚಲ್ ||
[2]ಭೂತಳದೊಳ್ ಫಣಿಕುಲವಿಷ |
ಭೀತರ್ಗೆ ಹಿತಂ [3]ವಿಷಘ್ನಮಿದು ಕೇವಳಮೇ || ೩೮ ||

ಮರಿಚಂ[4]ನಾಗರಮುಂ ಬಜೆ |
ಯರುತಾಳದ ಪಣ್ ಸಮುದ್ರಫಳಮೆಂಬಿವಱೊಳ್ ||
ದೊರಕಿದುದೊಂದಂ ಪುಳಿಯಿಂ |
ದಿರದೆಚ್ಚಲ್ಕುರಗ [5]ವಿಷಮನದು ಸಂಹರಿಕುಂ || ೩೯ ||

ಉ|| [6]ರಾಸಭ ಗೋಮಹಿಷ್ಯಜನೃಮೂತ್ರದೊಳಂ[7]ತಿಲಿಮಿಚ್ಚಿ ನೆಲ್ಲಿಯೆಂ |
ಬೀ ಸುಲಭಂಗಳಪ್ಪ ಕುಜಪಕ್ವ[8]ಫಲಸ್ಥರಸ ಪ್ರಯುಕ್ತಮಂ ||
ಕಾಸುವುದಿಂತಿದಂ ಸಮಮೆನಲ್ ವಿಧಿಯಿಂ [9]ಗುೞಪಾಕಮಪ್ಪಿನಂ |
ಬೇಸುವುದಿಂತಿವಂ ತೞಿಗೆಯೊಳ್ ಬಿಸಿಯಾಱದ ಮನ್ನಪೊಯ್ದು ನೀಂ || ೪೦ ||

ಮ|| ಬೆರಸಂತಲ್ಲಿ [10]ಕಟುತ್ರಿಕಂ ತ್ರಿಫಳೆಯುಂ ತುತ್ಥಂ ಶಿಲಾಧಾತು ಖ |
ಪ್ಪರಿ ಯೆಂಬಿಂತಿವುಮಂ ಪೞಾರ್ಧದನಿತಂ ತಚ್ಚೂರ್ಣಮಂ ಕೂಡಿ ನೀಂ ||
ಭರದಿಂ ಮರ್ದಿಸಿದಂತದಂ ಮಡಗಿರಲ್ ಸಂರಕ್ಷಿತಂ [11]ತೆಂಗಿನೊಳ್ |
ನಿರುತಂ ಪೊಂಬೆಸಱ ಪ್ರಮಾಣದನಿತಂ ಕಣ್ಗೆಚ್ಚಲಂತಾ ಕ್ಷಣಂ || ೪೧ ||

ಕಂ|| ಸ್ವಲ್ಪಮನಂತಾ[12]ಗುಳಿಗೆಯ |
ನಲ್ಪೋರಗವಿಷದಿನೞಿದ ಮಱುದಿನ[13]ಮವನುಂ ||
ಜಲ್ಪಿಸದೆ ಕಣ್ಗೆ ಸಲ್ಕದು |
[14]ತಲ್ಪಿತಮಂ ಕೞಿವುದುೞಿದ [15]ಮರ್ದುಗಳೊಳವೇ || ೪೨ ||

[16]ಬಾದೇಂ ನಿಂಬೆಯ ಪುಳಿಯಿಂ |
ತೇದೆಚ್ಚು ಸಮುದ್ರಫಲಮ ನಕ್ಷಿಗಳೊಳ್ ಕೆಂ ||
ಪಾದೊಡೆ ಸಾಯಂ ದಷ್ಟಂ |
[17]ಭೇದಿಸದಿರ್ ಜೀವಿಕುಂ ಶಿರಃ ಕಂಪನದಿಂ || ೪೩ ||

1. ಶಿರೀಷಕುಸುಮಂ (ಖ) 2. ಭೂತಳದೊಳುಳ್ಳ ಫಣಿವಿಷಭೀತಂಗೆ (ಖ) 3. ಸರಸ್ವತೀಮಣಿಹಾರಾ (ಕ) 4. ನಾಗರಮಂ (ಗ) 5. ವಿಷಹರಂ ಬುಧಬಂಧೂ (ಕ) (ಘ) 6. ರಸಭಾಗೋ (ಗ) 7. ತಿಲುಮುಚ್ಚಿ (ಖ) ತಿಲಂ ಮುಚ್ಚಿ (ಗ) ತಿಲಮುಂಚಿ (ಘ) 8. ಫಲಸ್ವರಸ (ಗ) 9. ಪಾಕಪಾಕಮಪ್ಪಿನಂ ಬೆರಸದಂ....ಳಿಗೆಯೋಳ್ (ಗ) 10. ತ್ರಿಕಟುಕಂ ತ್ರಿಫಳೆ (ಖ) ಕಟುತ್ರಯಂ (ಗ) 11. ತೇನಿನೊಳ್ (ಘ) 12. ಗುಳಮನನಲ್ಪೋರಗ (ಖ) (ಗ) 13. ಮದನಿಂ ಜಲ್ಪಿಸಲುಂ (ಖ) ಜಲ್ಪಿಸುಗುಂ ಕಣ್ಗೆಸಲದು ಕಲ್ಪಿತಮಂ (ಗ) 14. ಕಲ್ಪಿತಮಂ(ಖ) 15. ಮದ್ದುಗಳಳವೇ (ಗ) 16. ಬಾಧೆಯ ನಿಂಬಿಯ ಸುಳಿಯಿಂ (ಗ) 17. ಬೈದಿಪ್ಪ (ಗ) ದಷ್ಟರಭೇಸದಿಜೀರ್ವಿಕುಂ ಳಿರಂಕಂಪನದಿಂ (ಇದುಮುಂದಣ ಅಧ್ಯಾಯದ ಆದಿಯಲ್ಲಿದೆ). (ಖ)



ಮ|| ಸ್ರ|| ಇದು ಸಿದ್ಧಂ ಸಾರಮಪ್ಪಾಪಲವು ಮತದೊಳಂ ನೋಡಿ ಪೇೞ್ದೌಷಧಂಗಳ್ |
ಸುದಯಾರ್ದ್ರಸ್ವಾಂತ ಮಂಗಂಗಳವಡೆ ನುಡಿದೀ[1]ಯಂಜನಾಂಗಾಧಿಕಾರಂ ||
ವಿದಿತಂ ತಾನಾಗೆ ಭವ್ಯಾವಳಿಗ[2]ೞಿಪಿದ ಮರ್ತ್ಯೈಕನಾನ್ಯಂ ಸವಿಘ್ನಾ |
ಸ್ಪದ ಕರ್ಮಂ ಕೆಟ್ಟು ದಿವ್ಯಾಂಗನೆ ವಲಮೆನಿಪಂ ವಿಶ್ವವಿದ್ಯಾ[3]ವಿನೋದಂ || ೪೪ ||*

— ಗದ್ಯ —

ಇದು

[4]ಸಕಲವಿದಮಲ ಜಿನೇಂದ್ರೋಕ್ತಸಿದ್ಧಾಂತಪಯಃಪಯೋನಿಧಿಪಾರಗ
ಶ್ರೀಪೂಜ್ಯಪಾದಮುನೀಂದ್ರ ಚಾರುಚರಣಾರವಿಂದ
ಗಂಧಗುಣಾನಂದಿತಮಾನಸಂ
ಶ್ರೀಮದಖಿಲಕಳಾಗಮೋತ್ತುಂಗ
**ಮಂಗವಿಭು**
ವಿರಚಿತಮಪ್ಪ

## ಖಗೇಂದ್ರ ಮಣಿದರ್ಪಣದೊಳ್

[5]ಅಂಜನಾಧಿಕಾರಂ
ಷಷ್ಠಂ.

1. ಯಂಬಿನಾಂಗಾಧಿ (ಖ) ನಡೆದೀಗಂಜನಾದಿ (ಗ) ಯಂಜನಕ್ಕಾದಿಕಾರಂ (ಘ) 2. ಗಳಱಿಪಿದ (ಖ) ವಳಿಗರಿಪೀಮರ್ತ್ಯೈಕ (ಗ) 3. ವಿದ್ಯಾವಿಳಾಸಂ (ಕ) ವಲವನಿಪಂ ವಿಶ್ವವಿದ್ಯಾವಿಲಾಸಂ (ಗ) 4. ಇದು ಶ್ರೀಮದಖಿಳಾಗಮೋತ್ತುಂಗ ಮಂಗವಿಭು ವಿರಚಿತ. 5. ಅಂಜನಾಧಿಕಾರಂನಾಮ ಷಷ್ಠಾಶ್ವಾಸಂ (ಗ)

* ಈ ಆಶ್ವಾಸದ ಕೊನೆಯಲ್ಲಿಮಾತ್ರ ಹಿಂದಣ ಆಶ್ವಾಸಗಳಂತೆ ಮಾಲಿನೀವೃತ್ತವಿಲ್ಲ.

# ಸಪ್ತಮಾಧಿಕಾರಂ

## ನಸ್ಯಪ್ರಕರಣಂ.

ಕಂ|| ಶ್ರೀನಿಳೆಯನೆನಿಪನಂ ನೆನೆ |
ದಾ ನಮಿತಸುರಾಧಿನಾಥ [1]ಜಿನಪತಿಯಂ ಮ ||
ನ್ಮಾನಸದೊಳಿರಿಸಿ ನಯದಿಂ |
ಭೂನುತಮಂ ನಸ್ಯಕರ್ಮಮಂ ವಿರಚಿಸುವೆಂ || ೧ ||

ನಸ್ಯಂಗಳಿಂದೆ ತನುಸಾ |
ರಸ್ಯಂ ಪಿರಿದಕ್ಕುಮಖಿಲವಿಷಮುಱಿಗುಂ ತ ||
ನ್ನಸ್ಯಮಿದೆ ಮುಖ್ಯಮಿಂ "ಸ |
ರ್ವಸ್ಯೈವ ಶಿರಃ ಪ್ರಧಾನ" ಮೆಂಬುದಱಿಂದಂ || ೨ ||

ವ|| ಅದೆಂತೆಂದೊಡೆ—

ಮ|| ಸ್ರ|| ಅರಿದಾಳಂ ಗಂಧಕಂ ರಾಮಠ ಲಶು[2]ನಯುಗಂಗೂಡಿ ತತ್ಸೂತದೊಳ್ ತ |
ಳ್ತಿ(ಳ್ತ)ರೆ ಮೂತ್ರಂ ದೇವದಾಳಿಪ್ರಥಿತರಸದೊಳೊಂದಾಗೆ ಮೂಗಿಂಗೆ ನಸ್ಯಂ ||
ದೊರೆಕೊಂಡಾ[3]ನಾಗದಷ್ಟಂಗರರೆ ನಯನದೊಳ್ [4]ತೀವಲಂತಾ ವಿಧಿಜ್ಞಂ |
ಸ್ಮರಣಂ [5]ಮಾತಾಟನೋಟಂ ಗತಿಮತಿಗಳವಂಗಕ್ಕುಮಾ [6]ಮುನ್ನಿನಂದಂ || ೩ ||

ಮಂ|| ಮಿಸುಗುತ್ತಿರ್ಪ ರಸಂ ಸಮುದ್ರಫಲಮುಂ ಜೇಪಾಳ [7]ಮಂಕೋಲಬೀ |
ಜ[8]ಸಮಂತಾನರುಠಾಳದೊಪ್ಪುವ ಫಲಂ ಸಂದಿಟ್ಟಿಯೊಳ್ಬೀಜದಿಂ ||
ಪೆಸರ್ಗೊಂಡಂತವನೊಂದುಗೂಡಿ(ಡ)ರೆ ನೃಮೂತ್ರಾಕಲ್ಪಿತಂ ನಸ್ಯಮಿಾ |
ಕ್ಷಿಸಲೆಲ್ಲಾ ವಿಷಮಂ ಗಡಂ ಕಿಡಿಸುಗುಂ[9] ಶಿಷ್ಟೇಷ್ಟಕಲ್ಪದ್ರುಮಾ || ೪ ||

ಉ|| ನಾಗರ ತುಪ್ಪಕೀರೆ ಲಶುನಂ ರಸರಾಮಠಮೆಂಬಿವೆಲ್ಲಮಂ |
ರಾಗದೊಳೊಂದು ಗೂಡಿ[10]ಜಲದಿಂ ನೆಱೆ ಮಾಡಿದ ನಸ್ಯದಿಂದೆ ತ ||
ನ್ನಾಗಕುಲಂ[11]ಕೊಳಲ್ ಮೃತಕನಾದವನಂದಿರದೆೞ್ದು ನೋಡಿ ತಾ |
ನಾಗಳೆ ಮಾತನಾಡಿಸಲವಂ ನುಡಿಗುಂ [12]ಲಪಿತಾನುರೂಪದಿಂ || ೫ ||

---

1. ಜಿನಮುನಿಯಂ ಸನ್ಮಾನಸದೊಳಿರಿಸಿನಯನಂ (ಗ) ಖೇಚರಪ(ಖ) 2. ಲಶುನಂ....ಗೂಡಿ (ಖ) ಲಶುನಯುತಂ(ಕ) ಲಶುನಯುಗಂಗೂಡಿ(ಗ) 3. ನಾಗದಷ್ಟ....ರೆನಯನ (ಗ) ಗರನೆಲೆ (ಕ) 4. ನೀವಲಂತಾ (ಘ) 5. ಮಾತಾಡನೋಡಂಗತಿ (ಗ) 6. ಮುನ್ನಿನಿಂದಂ (ಗ) 7. ಮಂಕೊಲದ ಬೀಜ (ಖ) ಮಂಕೊಲೆಯಾ ಬೀಜ (ಕ) ಮಂಕೊಲೆಬೀಜ (ಗ) 8. ಸಮಂತರುಠಾಳದೊಳೊಪ್ಪುವ (ಕ) ಸಮಂಮರುಟಾಳದಳೊಪ್ಪು (ಗ) 9. ಕಿಡಿಸುಗುಂ ತಿಷ್ಟೆಕಲ್ಪದ್ರುಮಂ (ಖ) ಶೇಷೇಷ್ಟಕಲ್ಪದ್ರುಮಂ (ಗ) ಶ್ರೀಶೇಷ್ಟ (ಘ) 10. ಜಲದಿಂಮಿಗೆ (ಘ) ಜಲದಿಂನೆಲೆ (ಖ) ಜಲದಿಂನಿರೆ (ಕ) ಜಲದಿಂನಿಲೆ (ಗ) 11. ಕೊಲ್ಮೃತಕನಾದ ನರಂದಿರದೆದ್ದು (ಖ) ಕೊಳಲ್ಮೃತಕನಾದನವಂ (ಕ) ಕೊಳಲ್ಕುರಗನಾದವನಂದಿತದೆದ್ದು (ಗ) 12. ಲಸಿತಾವಮನುರೂಪದಿಂ (ಕ)



ಕಂ|| ಅರಿತಾ(ದಾ)ಳಸೂತ ಟಂಕಣ |
ವರರಾಮಠ ಸಿಂಧುಜಂಗಳಂ ಕೂಡಿರೆ [1]ಕೊಂ ||
ಡರೆ ಕಾೞ್ಪೀರೆಯ ರಸದಿಂ |
[2]ದಿರೆ ಮಡಗಿ ಬೞಿಕ್ಕೆ ಸರ್ಪದಷ್ಟನರಂಗಂ || ೬ ||

ನರಮೂತ್ರದಿಂದೆ ನಸ್ಯಮ |
[3]ನಿರದಾಗಿಸೆ ಕಣ್ಗೆ ತೀದೆಸಲ್ ತದ್ವಿಷಮುಂ ||
[4]ಪರಿಗುಂ ಝುಂಝಾಮಾರುತ |
ನುರವಣೆಯಿಂ ದೀಪ[5]ಕುಲಮನೞಿವಂತೆ ವಲಂ || ೭ ||

ನರಮೂತ್ರದೊಳರುಠಾಳದ |
ಪರಿಪಕ್ವಫಲಂ ಸಮುದ್ರಫಳಮೆಂಬೆರಡಂ ||
[6]ಬೆರಸರೆದು ಪನಿಸು ಮೂಗಿನೊ |
ಳುರಗಕುಳೋಗ್ರೋಗ್ರತರ ವಿಷಂಗಳ್ ಕಿಡುಗುಂ || ೮ ||

ಚಂ|| ಅರಿಸಿನಮಂ ಸಮುದ್ರಫಳಮುಂ ಸರಿಗೂಡಿ(ಡೆ) ನೃಮೂತ್ರ[7]ದಿಂದೆ ಚಿ |
ಚ್ಚರಮರೆದೊಪ್ಪೆ ಮಾಡುವುದು ನಸ್ಯಮನಲ್ಲದೊಡಂತವಂ ಸಮಂ ||
ತಿರೆ ಪೊಸದಿಕ್ಕಿ ಪಿಂಡಿ ಪೊಸಲೊಕ್ಕಿಯ ಪತ್ರಮನಾ ರಸಾಂಬುವಿಂ |
[8]ಪರಿಕಿಸೆ ನಾಸಿಕಾಂತರದೊಳಂ ಪನಿಸಲ್ ವಿಷಮೆಯ್ದೆ ಪಿಂಗುಗುಂ || ೯ ||

ಕಂ|| ಸಿರಿಸದ ಪೂ[9]ಹುಲಿಗಿಲ ಕಾ |
ಯ್ವೆರಸಿದ ಮಡುವಾಗಲೆಂಬಿವಂ ಗೋಮೂತ್ರಂ ||
ಬೆರಸರೆದು ನಸ್ಯಮಂ ತಾ ||
ವಿರಚಿಸಲುರಗೋಗ್ರವಿಷಮನದು ಸಂಹರಿಕುಂ || ೧೦ ||

*ಬಜೆ[10]ಮಡುವಾಗಲ್ಗಳನಿಂ |
ತಜಮೂತ್ರದೊಳರೆದು ನಸ್ಯಮಂ ಮಾಡಲೊಡಂ ||
ಭುಜಗೋಗ್ರವಿಷಂ ಕಿಡುಗುಂ |
[11]ನಿಜತನುವಂ ಪೂಸಲುಂ ವಿದಗ್ಧಾಭರಣಾ || ೧೧ ||

---

1. ಕೊಂಡಿರೆ (ಕ) 2. ದೆ ಮರ್ದಿಸಿ ಸರ್ಪದಷ್ಟ(ಗ) ಮದನಿಬಳಿಕ್ಕ(ಘ) 3. ನಿರದೋ(ಗಿಸು)ಕಣ್ಗೆತೀದೆಸೆಲ್ವಿಷ(ಗ) 4. ಪರೆಗುಂ (ಕ) (ಗ) 5. ಕುಲಮಳಿವಂತೆವಲಂ (ಘ) 6. ಬೆರಸರೆದಂ ಪನಿಯಿಸು ಮೂಗಿಲೊಳುರಗ ಕುಲೋಗ್ರಕರವಿಷಮುಱಿಗುಂ (ಗ) 7. ದಿಂದೆಚ್ಚರ (ಖ) ದಿಂಬೆಚ್ಚರಮುದದೊಪ್ಪೆ (ಗ) 8. ಪರಿಕಿಸಿ (ಖ) 9. ಬಿವಂಸಮಂತಿರೆ ಎಂದು ಹಿಂದಣ ಅರ್ಧಸೇರಿದೆ. (ಖ) ಪೂನೆಲ್ಲಿಯ ಕಾ| ಯ್ವೆರಸಿರೆ (ಘ) 10. ಬಜೆಹುಲಿಗಿಲಿ ವೆರಡುವನಜ (ಘ) 11. ತ್ರಿಜಗದ್ಭೂಷಣ ಜಿನೇಂದ್ರ ನಭಿಮತದಿಂದಂ (ಘ)

* ಈ ಪದ್ಯವಾದಮೇಲೆ (ಗ) ಪ್ರತಿಯಲ್ಲಿ ಮರಿಚಯುತಂ ಎಂಬ ಪದ್ಯವಿದೆ—

ಮ॥ ಸ್ರ॥ [1]ಅರುಣಾಭಂ ಪುಷ್ಪಮಪ್ಪೊಂದಗಸೆಯನೆ[2] ವಲಂ ನೋಡಿ ತನ್ಮೂಲಮಂ ಕೊಂ |
[3]ಡರೆ ನೀಂ ಬೆಳ್ಳುಳ್ಳಿಯಂ ಕಗ್ಗೊರಲೆಯ ರಸದಿಂ [4]ಭಾವಿಸಂತಿರ್ದ ಮರ್ದಂ ||
ನರಮೂತ್ರಂಗೂಡಿ ನಸ್ಯಂ ವಿರಚಿತಮದು ತತ್ಸರ್ಪದಷ್ಟಂಗಮಾಗಳ್ |
ನಿರುತಂ ಸಂಹಾರಿಕುಂ ತದ್ವಿಷಮನಖಿಳಭವ್ಯಪ್ರಜಾಸಂಗ ಮಂಗಾ || ೧೨ ||

ಕಂ॥ ಮರಿಚಯುತಂ ಗುರುಗುಂಜಿಯ |
ನರೆಗುಳ್ಳದ ಪಣ್ಣ ರಸದೊಳಂ ಮಡಗಿ[5]ಬಱಿ ||
ಕ್ಕುರಗಂ ಕೊಂಡ ನರಂಗಂ |
ವಿರಚಿಸು ನಸ್ಯದೊಳೆ [6]ಪಾನದಿಂ ಹಿತಮಕ್ಕುಂ || ೧೩ ||

ಅರಿಸಿನಮಂ [7]ನೀಲಿಯುಮಂ |
ಬೆರಸಲ್ಲದ ರಸದೊಳರೆದು ನಸ್ಯಂಗೆಯ್ಯು ||
[8]ಲ್ಕುರಗೋಗ್ರವಿಷಂ ಕಿಡುಗುಂ |
ತರತರದೌ[9]ಷಧಿಗಳಿವಱ ದೊರೆಯೆನಿಸುಗುಮೇ || ೧೪ ||

ಚಂ॥ ಬಜೆ ಕಟುಕತ್ರಯಂ ವರಸಮುದ್ರಫಳಂ ಅರುತಾಳಮೆಂಬ ಸ |
ತ್ಕುಜಫಲರಾಜಿಯೆಂಬಿವನೆ[10] ಕೂಡುಗೆ ಬೊಮ್ಮಿಯ ಸೊಪ್ಪನೊಪ್ಪದಿಂ ||
ಗಜಬಜೆ ಯಿಲ್ಲ[11]ದಂತರೆದು ತದ್ರಸದಿಂದುಱಿ ಮಾಡಿ ನಸ್ಯಮಂ |
ವೃಜಿನಹರಂ ವಿಷಘ್ನಮಪಭೂತಪಿಶಾಚಮಿದೊಂದೆ ಸಾಲದೇ || ೧೫ ||

ಕಂ॥ ಅರುತಾಳದ [12]ಪಣ್ ನೆಲ್ಲಿಯ |
ನರೆದುರಗಂ ಕೊಂಡವಂಗೆ ನಸ್ಯಂಗೆಯ್ಯು ||
[13]ಲ್ಕಿರದು ವಿಷಂ ಗ್ರಹ ಭೂತೋ |
ತ್ಕರದ ಭಯಂ ಪಿಂಗುಗುಂ ವಿದಗ್ಧಾಭರಣಾ || ೧೬ ||

ಏಱಿಸದಿಲುಮಿಚ್ಚೆಯ [14]ಹುಳಿ |
ಬೇಱಿಯ ದಳ ಲಶುನ ಮರಿಚಮೆಂಬಿವನಿಂಬಿಂ ||
ಮೇಳಯ್ಸಿ ನಸ್ಯ [15]ಮಿಾಯಲ್ |
ಜಾಳಿಸುಗುಂ ಸರ್ಪವಿಷಮನಮಳಿನಚರಿತಾ || ೧೭ ||

1. ಅರುಣಾಂಭಂ (ಖ) ಮಪ್ಪಂದವ ನಗಸೆಯನೆವಲಂ (ಘ) 2. ನೆಲನಂ (ಖ) 3. ಡಳೆನೀರಿಂ ಬೆಳ್ಳುಳ್ಳಿ (ಖ) 4. ಭಾವಿಸಿಟ್ಟಿರ್ದಮರ್ದಂ (ಕ) 5. ಮಡಗಿಲಳಿಕ್ಕುರಗಂ (ಗ) 6. ಮಾನದೇಹಿಕ ನಕ್ಕುಂ (ಗ) ಮಾನದಿಂ ಹಿತಮಕ್ಕುಂ (ಖ) 7. ನಿಪಯುಮಂ (ಖ) 8. ವಿಷಂಗಳ್‌ಕಿಡು [illegible]ಂ (ಕ) 9. ದೌಷಧಗಳಿವರ್ಕೆದೊರೆ (ಘ) 10. ನೋಱುಗೆ (ಕ) 11. ದಂದರೆದು (ಗ) 12. ಪಣ್ಣೆನೆಲ್ಲಿಯ (ಗ) 13. ಲ್ಕುರದವಿಷ[illegible]ಹಭೂತಕ್ಕೊರದಭಯಂ (ಗ) ಲ್ಕುರಗವಿಷಂ ಗ್ರಹ (ಕ) 14. ಹಳಿಬೇಳೆಯದಳಶುನ ಮರಿಚ (ಖ) ಪುಳಿಬೇಳೆಯದಳಲಸುಣ ಮರಿಚ (ಕ) ಬೇಳೆಯಬಲುಸುಣ್ಣ ಮರಿಚಮೆಂ (ಘ) ಘಳಿ ಬೆಳೆಯದಳನಶುನಮರಿಚ(ಗ) 15. ನಾಳಿಸು—ನಮಳಚರಿತಾ (ಕ) ಮಿಾಯಲ್ಕಱಿಗುಂ ಸರ್ವವಿಷಮ (ಗ)



ಕಂ॥ *ಮರಿಚಂ ಬಜೆ ಪತ್ರಕ ಶ |
ರ್ಕರೆ ಪಥ್ಯಂ ಹಿಂಗು ಮಧುಗಳಂ ಜಲದಿಂದಂ ||
ದರೆದೀಯೆ ನಸ್ಯದೊಳ್ ಸಂ |
ಹರಿಕುಂ ಫಣಿವಿಷಮ[1]ನಲ್ತೆ ವಿಭುಕುಳತಿಲಕಾ || ೧೮ ||

†ಮ॥ ಮರಿಚಂ ಮಾಗಧಿ ಯಿಂದ್ರವಾರುಣಿ ಯೆನಿಪ್ಪೀ ಮೂಱಱೊಳ್ ವಿಶ್ವಮಂ |
ಬೆರಸೀ ನಾಲ್ಕಱೊಳಂತೆ ಕೂಡಿ(ಡು) ಬಱಿಯಂ ಕಾಱ್ವೀರೆಯೊಳ್ಬೀಜಮಂ ||
ನಿರುತಂ ಸ್ವಲ್ಪಮನಿಂತಿವೈದೆ ಧರೆಯೊಳ್ [2]ನಸ್ಯಂ ಪ್ರಧಾನಂ ಮಹಾ |
ಪುರುಷರ್ ಪೇೞ್ದರಿದಂ ಪ್ರಯೋಗಿಸು ಗಡಿಂ [3]ಸತ್ಸಂಗಮಂಗಪ್ರಭೂ || ೧೯ ||

ಕಂ॥ ‡ಅಲಸದೆ [4]ನಾಯ್ವೆಱ(ಱ) ತೊಱಗಣಿ |
ಗಿಲ ಕತ್ತರಿ ಯೆಸೆವ ಮೂಲಮಂ [5]ಕತಕಕುಜಾ ||
ವಳಿಯ ಪರಿಪಕ್ವಫಲರಸ |
ಜಳದಿಂದರೆದುದ[6] ಱೊಳಲುಬಿ ತೊಯಿದಾ ಪಟಮಂ || ೨೦ ||

[7]ಪಱಿದಿಬ್ಬೆರಳನಿತಂ ತೊ |
ಯ್ದಱಿ(ಱು)ವೆಯನೆ ನೃಮೂತ್ರದಿಂದೆ ನಸ್ಯಂ ಗೆಯ್ ಮೆ ||
ಯ್ಮಱಿದಹಿದಷ್ಟಂ ತಿಳಿದೆ |
ೞ್ಚಱುಗುಂ ವಿಷಮಱಿಗುಮೆಂದ ನುಭಯಕವೀಂದ್ರಂ || ೨೧ ||

ಗೋಮೂತ್ರದಿಂದಮ(ಲ)ರೆವುದು |
ಭೂಮಹಿತಂ ಪುತ್ರಜೀವಿಯಂ ವಹ್ನಿ ಯ[8]ನಿಂ ||
ನೇ(ತೇ)ಮಾತೋ ದೀಪಿಕೆ ಯಿಂ |
ಬೀ ಮೂಱಱ ಯೋಗನಸ್ಯದಿಂ ವಿಷಮಱಿಗುಂ || ೨೨ ||

ಉ॥ ತರ್ಕಮದೇವು[9]ದಿಲ್ಲಿ ಕಿಱುಗುಳ್ಳ [10]ದೊಳುಳ್ಳ ಬೀಜಮಂ ಸಮಂ |
ತರ್ಕಸುಭೂಜದುಗ್ಧದೊಳೆ ಭಾವಿಸಿ ಚೂರ್ಣಮದಾಗೆ ಮಾಡಿದಂ ||
ತಿರ್ಕುಮೆನಲ್ [11]ಕಟುತ್ರಿಕದೊಳೊಂದಿಸಲಂತದೆ ನಸ್ಯಪಾನದಿಂ |
ಕರ್ಕಶಮಪ್ಪನೇಕವಿಷಸಂತತಿಯಂ ಕಿಡಿಕುಂ ಧರಿತ್ರಿಯೊಳ್ || ೨೩ ||

1. ಮೆನಲ್ಕೆ (ಕ) 2. ನಸ್ಯಪ್ರಧಾನಂ (ಗ) (ಖ) 3. ತತ್ಸಂಗ (ಗ) ಗಡಂ ಶ್ರೀಮಂಗ ನಿಷ್ಪೋಕ್ತಿಯಿಂ (ಕ) 4. ನಾಯಿವೆಱಳತೊಱಿ (ಖ) ನಾವೆದಾ ಅ (ಕ) ನಾಯ್ವೇಳಲ್ತೊರೆಗಣಗಿಲ (ಘ) 5. ಕರಕಕುಜಾ (ಕ) 6. ದುದಱಗಲುಬಿ (ಖ) 7. ಪಱಾದೀಬೆರಳ (ಖ) 8. ಯುಮಂ ! ಏಮಾತೊ (ಕ) 9. ದೇಲ್ಲಿ (ಗ) 10. ಶುಬೀಜಗಳಿಯೆ ಸಮಂತರ್ಕ. 11. ಕರೋತ್ರಿಕದೊತ್ರಿಕದೊಳೊಂದಿನೀಲಂಕದೆನಸ್ಯ (ಗ)

* ಈ ಪದ್ಯವು (ಗ) ಪ್ರತಿಯಲ್ಲಿಲ್ಲ. † (ಗ) ಪ್ರತಿಯಲ್ಲಿ ಈ ಪದ್ಯದ ಆದಿಯಲ್ಲಿ-

ವ॥ ಅದೆಂತೆಂದೊಡೆ—ಸರ್ವಭೂತವ್ರಾತಕ್ಕಂ ವಿಷಕ್ಕಂ ಸರ್ವಾಂಜನಮಂ ಪೇೞ್ವೆಂ—॥ ಮತ್ತೇಭ ವೃತ್ತ॥ ಮರಿಚಂಮಾಗಧ—

‡ ಇಲ್ಲಿಂದ ಮುಂದಣ ಮೂರು ಕಂದಗಳು (ಗ) ಪ್ರತಿಯಲ್ಲಿಲ್ಲ.

ಕಂ|| ದಾಗುಡಿಯ [1]ಕಾಗಿದೊಂಡೆಯ |
ಯೋಗದೊಳತಿಹಿತಮೆನಿಪ್ಪ ಹೆಮ್ಮಿಟಲದ ಬೇ ||
ರ್ಗಗಳ[2]ಕಾಸಱಿಕೆಯ ತರು |
ಗಾಗಿಹ ಬೀಜಮನೆ ಕೂಡಿ ಚೂರ್ಣಿಸಿ ಬಱಿಯಂ || ೨೪ ||

[3]ಅರೆದಿಂ ಪೂಸುಗೆ ದಷ್ಟನ |
ಶರೀರಮಂ [4]ನಸ್ಯಪಾನಮಂ ಮಾಳ್ಕಿತಿದು ||
ರ್ಧರಮೆನಿಪ ವಿಷಂ ಪಱಿಗುಂ |
ಪಱಿವಂತಿರೆ ಮೇಘಪಟಲ [5]ಮಾಶುಗನಿದಿರೊಳ್ || ೨೫ ||

ಉ|| ಒಕ್ಕಳಮಪ್ಪ [6]ಚಿಲ್ಲಳೆಯ ಕಾಯ್ಗಳೊಳಿಕ್ಕಿ ಸುರೇಂದ್ರಶಾಖೆಯಂ |
ಚಕ್ಕನೆ ಕೂಡಿರಲ್ ತುಱಿದು ತದ್ರಸದಿಂ ಪಟಮಾಱಿಲಾ[7]ಱಿಲಾ ||
ಲೆಕ್ಕಮದಿಪ್ಪತೊಂದುವರೆಗಂ ಬಿಡದೂ[8]ಡಿಯದಂತಿರಲ್ಕೆ ನೀಂ |
ಸಿಕ್ಕನೆ ಸೀಱ್ದು[9]ದಿಬ್ಬೆರಳನಿತ್ತುಮನರ್ದಿ ನೃಮೂತ್ರದೊಳ್ ಬುಧಂ || ೨೬ ||

ಕಂ|| ಚೀಲಮುಮಂ [10]ಪಿಂಡಿದುದೇಂ |
ಸಾಲದೆ ನಸ್ಯದೊಳಶೇಷವಿಷತತಿಯಂ ನಿ ||
ರ್ಮೂಲಿಸುಗುಂ ಪಡೆಮಾತೇಂ |
ಕಾಲೋರಗದಷ್ಟನಾದೊಡಂ ಜೀವಿಸುಗುಂ || ೨೭ ||

ಚಂ|| ಸರಸಮೆನಿಪ್ಪ ಕೈಪೆಸೊರೆಯೊಳ್ದಿರುಳಂ [11]ಬೆರಸಂತಿರಲ್ಕೆ ಕಾ |
ಸರಿಕನ ಬಿತ್ತುಮಂ ಭರದೊಳಂದರೆ ಕೂಡಿರೆ ದೇವದಾಳಿಯಂ ||
[12]ವರನರಮೂತ್ರದಿಂ ಪಿಱಿದು ನಸ್ಯಮನಾಗಿಸು ಪೆಣ್ಗೆ ಪೆಣ್ಗಳಿಂ |
ಬರಿಸಿದ ಮೂತ್ರದಿಂ [13]ನೃತನುಗಾದ ವಿಷಂ ಪಱಿಗುಂ ಧರಿತ್ರಿಯೊಳ್ || ೨೮ ||

ಕಂ|| *ಮರಿಚವಚಾಲವಣಂಗಳ್ |
ಬೆರಸರೆ[14]ದೌಡಲದ ಮೊಗ್ಗೆಯಂ ನಸ್ಯಂಗೆ ||
ಯ್ಯುರಗ[15]ವಿಷಂ ಸ್ಫುರಿಸದು ಸಂ |
ಚರದನಿಲಂ[16]ಗಿರದ ಮಾಱ್ಕಿಯಿಂ ಸೊಡರಿಳೆಯೊಳ್ || ೨೯ ||

---

1. ದಾಗುಡಿಯಂ (ಗ) 2. ಕಾತಱಿಕೆಯ (ಗ) ತಾತಱಿಕೆಯ (ಖ) 3. ಅರೆದುಂ (ಗ) (ಕ) 4. ನಸ್ಯಪಾನಾದಿಗಳಂ (ಗ) 5. ಮಾರುತನಿದಿರೊಳ್ (ಕ) 6. ಚಿಲ್ಲೆಳೆಯ (ಘ) ಚಿಳ್ಳೆಲೆಯ ಕಾಯೊಳಗಿಕ್ಕಿ (ಕ) ಒಕ್ಕಳತುಪ್ಪಟಿಲ್ಲೆಳೆಯ (ಗ) 7. ಲಾಱಿಲಾ (ಕ) ಪಟಚೂರ್ಣಲಾರಲಾ (ಗ) 8. ದೂಡಿದುದಂತಿರಲ್ಕೆ (ಕ) 9. ದಿಬ್ಬೆರಸಿಮನಿತ್ತುಮದ್ರಿರ್ಗ ನೃಮೂತ್ರದೊಳ್ವಾದಾ (ವಾ) (ಖ) ನದ್ದಿ ನೃಮೂತ್ರದೊಳ್ ಬುಧಾ (ಗ) 10. ಟಿಲ್ಲಮುಮಂ ಪಿಡಿದಡೇಂ ಸಾಲದೆ ನಶ್ಯದೊಳೆ ಶೇಷಂ (ಗ) 11. ಳ್ದಿರುಳಂ ಚಿರಲ್ಕೆ ಕಾಸರಿ ಗ) 12. ನರವರ (ಗ) 13. ನೃತನಗಾದ (ಗ) ಮೃತನುವಾ (ಘ) 14. ದೊಡಾಲದ (ಗ) 15. ವಿಷಂಗಳ್ ಪರೆಗುಂ | ಪರಮ ಶ್ರೀ ಪಂಚಗುರು ಪದಾಂಬುಜ ಮಧುಪಂ || (ಕ) (ಘ) 16. ಗಿದಿರಂಮಾಱಿ (ಘ) ಗಿದಿರಮಾಱ್ಕಿಯಿಂಸೊಡರಿಗೆವೋಲ್ (ಕ)

* ಈ ಮುಂದಣಕಂದಗ ಳೆರಡೂ (ಗ) ಪ್ರತಿಯಲ್ಲಿಲ್ಲ.



ಕಂ|| ದಾಗುಡಿಯಂ ಬಜೆಯಂ ಮಡು |
ವಾಗಲ್ ಸುರದುಂಬೆ ಕುನಟಿಯಂ ಭ್ರಾಮಕಮಂ ||
ತಾಗರುಳ ಮೆಂಬಿವೆಲ್ಲಂ |
ನಾಗಸುದಷ್ಟಂಗೆ ನಸ್ಯಮೆಂಬರ್ ಕಱಿಯಿಂ || ೩೦ ||

ಸ್ರ|| ಪುನ್ನಾಗಂ[1]ನೀಲಿ ಪಾತಾಳ ಗರುಡನೆಸೆವೀಲೊಕ್ಕಿ ಚಾಂಪೇಯ [2]ಮಪ್ರ |
ಚ್ಛನ್ನಂ ಜಂಬಾಳಸರ್ಪಾಕ್ಷಿಗಳೆಸೆವ ಸಿದ್ಧಾರ್ಥ[3]ಕಂಕೆಲ್ಲಿಗಳ್ ಸಾ ||
[4]ಲ್ಗುನ್ನಾಡೊಳ್ಪುಟ್ಟ ಸಂದೌಷಧಿ[5]ಗಳಿಗಿವೆ ಮುಖ್ಯಂಗಳಿಂತೆಲ್ಲ ಮೊಂದಿ |
ರ್ಪನ್ನಂ ನಸ್ಯಂ ಹಿತಂ ಮೂತ್ರದೊಳಹಿಕುಲದಷ್ಟಂಗಭೀಷ್ಟಂ [6]ಸಮಸ್ತಂ || ೩೧ ||

ಕಂ|| ಸುರದುಂಬೆ ಸಿಂಧುವಾರಂ |
ಮರಿಚಂ ಕಿಱಿದೇಗು ಗರ್ದುಗಿನೆಲೆ ಯೆಂಬಿವುಮಂ ||
ಬೆರಸಿ ನೆಲಾವರೆಯಂ [7]ಕೊಂ |
ಡರೆ ನಸ್ಯಂಗೆಯ್ ಸಮಸ್ತಫಣಿವಿಷಮಱಿಗುಂ || ೩೨ ||

ದಾಗುಡಿಯ ಬೇರ್ಗಳಂ ತ |
ತ್ಪೊಗದ ರಸದಿಂದೆ ನಸ್ಯಮಂ ಮಾಱ್ಕಿ ಬುಧಂ ||
ನಾಗಕುಲದಷ್ಟತನುವಿಷ |
ಮಾಗಳೆ ಪಿಂಗುಗುಮಶೇಷಬುಧಜನವಿನುತಾ || ೩೩ ||

ಮ|| ಸ್ರ|| ಬಜೆ ಮಂಜಿಷ್ಠಾಖ್ಯೆ ಲೋಧ್ರಂಗಳುಮೆಸೆವ ರುಜಾಂಕೋಲ [8]ಸತ್ಸಿಂಧುಜಾತಂ |
ರಜನೀ ಶ್ರೀ ಖಂಡಮುಂ ಗುಳ್ಳದ ಫಲ ತಗರಂಗೂಡಿದಿಂತೆಲ್ಲಮಂ ನೀಂ ||
ಭುಜಗಂ ಕೊಂಡಂಗೆ ನಸ್ಯಂ ಹಿತಮತಿಶಯದಿಂ ಕಣ್ಗೆಸಲ್ಕಾಕ್ಷಣಂ ತ |
ದ್ವೃಜಿನಂ ಬಿಟ್ಟೋಡುಗುಂ ಸತ್ಕವಿಕುಲಕಮಲಾದಿತ್ಯನಿಷ್ಟೋಕ್ತಿಯಿಂದಂ || ೩೪ ||

*ಕಂ|| ಶಿಂಬೆಯೆಲೆ ಲಶುನ [9]ವಚೆಗಳ್ |
"ಕಿಂ ಬಹುನಾ" ಭುಜಂಗಸಂಗತವಿಷದಾ ||
ಡಂಬರಮಂ ಪಿಂಗಿಸುಗುಮ |
ವಂಬಿಲದೊಡನರೆದು ನಸ್ಯಮಂ ಮಾಡಲೊಡಂ || ೩೫ ||

ಸುರದುಂಬೆ ಯೆಕ್ಕೆಯೆಲೆ ನಾ |
ಗರಮುಂ ಬಜೆ ಯುಳ್ಳಿ ಹಾಲಿವಾಣದ ಕೊನರುಂ ||
ಮರಿಚಂ ಬೆರಸರೆ ನಸ್ಯಂ |
ವರಮಿದುವೆ ನೃಮೂತ್ರದಿಂ ವಿಷಘ್ನಮೆನಿಕ್ಕುಂ || ೩೬ ||

---

1. ಪುನ್ನಾಗಂ ಪಾತಾಳ (ಗ) 2. ಮಪ್ರತ್ಯನ್ನಂ (ಕ) ಮಂಪ್ರೋತ್ಪನ್ನಂ (ಘ) 3. ಸಿದ್ಧಾರ್ಥಕ್ಕಂತೆಲ್ಲಿಗಳ್ಸಲ್ಗುಂ. 4. ಳ್ಸಲ್ಗುಂ ನಾಡೊಳ್ಪಟೆಸಂ (ಗ) 5. ಷಧಿಗಳಿಗಿವೇ (ಗ) 6. ಗಮಸ್ತಂ (ಗ) 7. ಕೂಡಿರೆ ನಸ್ಯಂಗೆಯಲ್(ಗ) 8. ಸಚ್ಛಿಂದುಜಾತಂ (ಖ) ಶಶೀಂದು (ಗ) 9. ಲಶುನಂಬಜೆ | ಯೆಂಬಿವು ತ್ವತ್ಕಣದೆಭುಜಗ (ಘ)

* ಈ ಪದ್ಯಗಳು (ಗ) ಪ್ರತಿಯಲ್ಲಿಲ್ಲ.

ಕಂ|| ವನಹಿಪ್ಪಲಿ ನಿರ್ಗುಂಡಿಗ |
ಳನುಪಮ[1]ಮುಪ್ಪಳ್ಳಿ ಲೋಧ್ರಮುಗ್ಗಾರೆಗಳುಂ ||
ವಿನುತಂ ಪೆರ್ಗುರುಟಿಗೆಯಂ |
ಬಿನ ಮೊಲಗಿವಿ ಯೆಂಬಿವಲ್ತೆ ನಸ್ಯದೊಳೆ ಹಿತಂ || ೩೭ ||

*ಚಂ|| ಅಭಯ ಕಟುತ್ರಿಕಂ ಬಜೆ[2]ಮನಶ್ಶಿಲೆ ರಾಮಠ ಪತ್ರಕಾರ್ದ್ರಕಂ |
ವಿಭವಸಮೇತಮಪ್ಪ ಹಯಗಂಧಿಯ ಬಂಧುರ[3]ಪಂಚಕಾಂಗಮಂ ||
ಶುಭ[4]ದಿನದಲ್ಲಿ ತಂದುವಜಮೂತ್ರವಿಮರ್ದಿತಮಾಗಲುಂಡೆಯಂ |
ವಿಭವಮೆನಲ್ಕೆ ಮಾಡುಗದ ನಸ್ಯಮನಿಂತಿದೆ [5]ತದ್ವಿಷಾಪಹಂ || ೩೮ ||

ಕಂ|| ದಾಗುಡಿ ಪಿಪ್ಪಲಿಯುಂ ಮಡು |
ವಾಗಲ್ ನಿರ್ಗುಂಡಿಗಳ್ ಸಮೇತಂ ನಸ್ಯಂ ||
ಬೇಗದೊಳಳವಡೆ [6]ಮಾಡಲ್ |
ಪೋಗದೆ ಫಣಿಕುಲದ ವಿಷಮದೇಂ ನಿಂದಪುದೇ || ೩೯ ||

†ಕರವೀರಲಶುನ ದಾಗುಡಿ |
ಗಿರಿಕರ್ಣಿಕೆ ನಾಗರಂಗಳುಂ ಸಮನಾಗಲ್ ||
ನರಮೂತ್ರದಿಂದೆ ನಸ್ಯಂ |
ವಿರಚಿತಮೆನಲುರಗಕುಲದ ವಿಷಮಿರ್ದಪುದೇ || ೪೦ ||

*ಬನ್ನಿಯುಮನಿಪ್ಪೆಯುಂ ತಾಂ |
ಹೊನ್ನೆಯುಮಂ ಮುಸ್ತೆ ಲೊಕ್ಕಿ ಲಾಂಗುಲಿಕಮುಮಂ ||
ಕನ್ನೆ ವರಪುತ್ರಜೀವಿಯು |
ಮನ್ನಯದಿಂ ನಸ್ಯಮಿತ್ತೊಡದುವೆ ವಿಷಘ್ನಂ || ೪೧ ||

ಅಣಿಲೆ ಬಜೆ ಹಿಂಗು ಲೋಧ್ರಂ |
ಮೆಣಸಿಗೆ ಯೆಲೆ ಯೆಂಬಿವಂ ಜಲಾನ್ವಿತಮಂ ತತ್ ||
ಕ್ಷಣದಿಂ ನಸ್ಯಂಗೆಯ್ಯಲ್ |
[7]ಫಣಿವಿಷಮಿರದೞಿಗುಮೆಂದಪಂ ಮಂಗಬುಧಂ || ೪೨ ||

*ಫಲಮಾ[8]ಗದ ಮಡುವಾಗಲ |
ನಲಸದೆ ಶತವಾರಮಪ್ಪಿನಂ ಮೂತ್ರದೊಳಂ ||
ಸುಲಲಿತಮಾಗಲ್ ಭಾವಿಸಿ |
ಜಲದಿಂ ನಸ್ಯಮನೊಡನೆಸೆ ನಿರ್ವಿಷಮಕ್ಕುಂ || ೪೩ ||

---

1. ಮುಪ್ಪಳಿ (ಗ) 2. ಮಣಿಚ್ಛಿಲೆ (ಖ) 3. ಪಂಚನಾಂಗಮಂ (ಖ) 4. ದಿನದಂದುತಂದು (ಕ) (ಘ) 5. ತಾಂ ವಿಷಾಪಹಂ (ಖ) 6. ಮಾಗಲಡಪೋಗದೆ (ಕ) ಮಾದೆಲ್ಪಾಗದೆ (ಖ) ಚೀಗದೊಳಳವಡೆ ಪೊಗದೆ (ಗ) 7. ಫಣಿಯವಿಷಂ ಅೞಿಗುಮೆಂದಪಂ ಮಂಗಬುಧಾ (ಗ) ದೞಿಗುಮೆಂದನುಭಯಕವೀಶಂ (ಕ) (ಘ) 8. ಗಡಮಡುವಾಗಲ ಕಲಸದೆ (ಕ)

† ಇದು (ಖ) ಪ್ರತಿಯಲ್ಲಿಲ್ಲ. * ಇವೆಲ್ಲವೂ (ಗ) ಪ್ರತಿಯಲ್ಲಿಲ್ಲ.



ಕಂ|| ಮರಿಚಮನುಳ್ಳಿಯನೊಂದಿಸಿ |
ಸುರದುಂಬೆಯ ರಸದಿನಂ[1]ತು ಮಲ್ಲದೆಯುಂ [2]ಮೇಣ್ ||
ಮರಿಚಂ ನಿರ್ಗುಂಡಿ[3]ಲಶುನ |
ಮಿರೆ ಕೊಂಡು ನಸ್ಯದೊಳೆ[4]ಫೞಿಲನಹಿವಿಷಮುೞಿಗುಂ || ೪೪ ||

ವಂಚಿಸಲೇಂ [5]ಹೊಮ್ಮುಗುಳಿನ |
ಪಂಚಾಂಗಸಮೇತಮಂ ಕಟುತ್ರಿಕಮಂ ತ ||
ತ್ಸಂಚಿತ ಚೂರ್ಣಮ[6]ನೂದುಗೆ |
[7]ಸಂಚಳನಾಸಿಕದೊಳಹಿವಿಷಾಪಹಮಕ್ಕುಂ || ೪೫ ||

ನರಮೂತ್ರದೆ ನಸ್ಯಂಗುಡು |
ಗುರುಗುಂಜಿಯ [8]ಬಕುಳಮರಿಚಯುಗ್ಮದ ಬಿತ್ತಂ ||
ಪರಿಹರಿಕುಂ ಗರಳಭಯಂ |
ನಿರುತಂ ಸಾಹಿತ್ಯನಿಳಯನನುಮತದಿಂದಂ || ೪೬ ||

ನೀರಿಂ ನಸ್ಯಂಗೆಯಿ ಮ |
ಗ್ಗಾರೆಯ ಪಂಚಾಂಗಚೂರ್ಣಮಂ ಫಣಿಕೊಂಡಂ ||
ಗೋರಂತೆ ಕುಡಿಸೆ ಕಣ್ಗೆಸ |
[9]ಲಾರಯ್ಯಲ್ ತದ್ವಿಷಾಪಹಂ [10]ಬುಧಮಿತ್ರಾ || ೪೭ ||

*ಒಮ್ಮಡಿ [11]ಹೆಮ್ಮಿಟ್ಟೆಯೊಳಂ |
ತಿಮ್ಮಡಿ ಕಾಳ್ಪೀ[12]ರೆಯೆಸೆವ ಬಿತ್ತತಿಬಜೆಯುಂ ||
[13]ಘಮ್ಮನೆ ಪಾನದೆ ನಸ್ಯದೊ |
ಳಮ್ಮಡಿದನೆನಿಪ್ಪ ಸರ್ಪದಷ್ಟಂ ಬಾೞ್ಗಂ || ೪೮ ||

[14]ಗುಣಸಮಸೈಂಧವ ಮಧುಕಂ |
[15]ಮಣಿಶಿಲೆ ಯೊಡಗೂಡಿ ನಸ್ಯಮಂ ಮಾಡಲದುಂ ||
ಫಣಿಕೊಂಡನ ವಿಷಮಂ [16]ತತ್ |
ಕ್ಷಣಮಾತ್ರದೊಳೞಿಗುಮೆಂಬುದೇಂ ಕೇವಳಮೋ || ೪೯ ||

---

1. ರಸದಿಮಂತು (ಖ) ರಸದಿಮಂತಂ ಮಲ್ಲ (ಗ) 2. ತನ್ಮರಿಚಂ (ಖ) (ಗ) 3. ಲಶುನಂ ನರೆ (ಗ) ತನ್ಮರಿಚ ನಿರ್ಗುಂಡಿ ಲಶುನಮನರೆ (ಖ) 4. ಪುಳಿಯನಹಿವಿಷ (ಖ) 5. ಹೊಮ್ಮುಗುಳಿಯ (ಗ) 6. ನೂದು (ಗ) ಮಾಡುಗ (ಕ) 7. ಚಂಚಳನಾಸಿ (ಗ) 8. ಬಕಳ (ಗ) 9. ಲಾರಯ್ಯಲು (ಗ) 10. ಬುಧಬಂಧೂ (ಖ) 11. ಹೆಮ್ಮುಸ್ತೆಯೊಳಂ (ಖ) ಹೆಮ್ಮುಟಿಯೊಳಂ (ಕ) 12. ರೆಯೆ....ತ್ತಿಬಜೆಯುಂ (ಖ) 13. ಗಮ್ಮನೆ ನಸ್ಯದೆ ಪಾನದೊಳಂ (ಕ) 14. ಗಣಸಮ (ಕ) ಗುಡಗಮು ಸೈಂಧವ (ಗ) 15. ಮಣಿಲೆಯು ಮೊಡಗೂಡಿ ನಸ್ಯಂಮಾಡಲು ಫಣಿಕೊಂಡನ ವಿಷಮವಿಷಂಗಳು ಕ್ಷಣಮಾತ್ರದೊಳೞಿಗುಮೆಂದ ಮಂಗಸುಸಂಗ (ಗ) 16. ತತ್ಕ್ಷಣದಿಂ ಪರಿಹರಿಕುಮೆಂಬುದೇಂ (ಕ)

* ಇದು (ಗ) ಪ್ರತಿಯಲ್ಲಿಲ್ಲ.

ಕಂ|| *[1]ಸಾಲದೆ ಮೆಣಸಿಮ್ಮಡಿ ಜೇ |
ಪಾಳದ ತಿರುಳೊಂದು ಭಾಗಮಾಗಿರೆ ಜಂಬೀ ||
ರಾಳಿಯ ಫಲರಸದಿಂ ಪ್ರ |
ಕ್ಷಾಲಿಸಿ ತದ್ರಸದೊಳಿರಿಸಿ ಮಡಗೆಂಟುದಿನಂ || ೫೦ ||

*ಅದನರೆದು ಗುೞಿಗೆಯಂ ಮಾ |
ಡಿದುದಂ ಫಣಿದಷ್ಟನೆಸೆವ ನಾಸಿಕದೊಳ್ ತಾಂ ||
ಪದನಱಿದು ಬಿಂದುವಂ ಪನಿ |
ಸಿದೊಡಂ [2]ಫಣಿಕುಳವಿಷಂಗಳಾಕ್ಷಣಮೞಿಗುಂ || ೫೧ ||

ಎಕ್ಕೆಯ ಪಣ್ಣೆಲೆಯಂ[3] ಸೆಖೆ |
ಗಿಕ್ಕಿ ರಸಂಗೊಳ್ ಸರಾಮಠಂ ನಾಸಿಕದೊಳ್ ||
ಘೊಕ್ಕನೆ [4]ಪನಿಸುಗೆ ವಿಷದಿಂ |
ದುಕ್ಕಲಿಕುಂ ಸರ್ಪದಷ್ಟನಮಳಚರಿತ್ರಾ || ೫೨ ||

†ನೆಲ್ಲಿ ಬೆಳುಹೂಲಿಗಳ ಬೇ |
ರಿಲ್ಲಣ ಮುಳುಗೊಗ್ಗಿ [5]ಯೆಂಬಿನಿತ್ತಱ ಪುಡಿಯಂ ||
ಚೆಲ್ಲನೆ ಮೂಗಿನೊಳೂಡಿದೊ |
ಡೆಲ್ಲಾ ಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ || ೫೩ ||

ಗೋರಕ್ಷನ ಮೂಲಿಕೆಯಾ |
ಕ್ಷೀರಮುಮಂ ಪೞ್ತಿಯಿಂದೆ ಯೋಜಿಸಿ ಮಡಗು ||
ಗ್ರೋರಗನಗಿದೊಡೆ ಮೂತ್ರದೊ |
ಳಾರುಂ ನಸ್ಯಮನೊಡರ್ಚಲದುವೆ ವಿಷಘ್ನಂ || ೫೪ ||

ರಜನೀದ್ವ್ಯೋಷಯುತಂ ಸಿಂ |
ಧುಜಗೋ [6]ಶೃಂಗಾಂಕ ದಂತಿ [7]ಮಂಜಿಷ್ಠೈಲಾ ||
ವ್ರಜಮಂ ತಿಗಡೆಯೊಳಂ [8]ಸ |
ರ್ಪಜವಿಷಮಂ ಕಳೆವೊಡಿವಱ ನಸ್ಯಮೆ ಸಾಲ್ಗುಂ || ೫೫ ||

ಸಿರಿಸದ ಪೂವಂ[9]ಹುಲಿಗಿಲ |
ವರಫಲ ಮಡುನಾಗ[10]ಲೆಲೆ(ಳೆ)ಯ ಫಲಮುಂ ಮೂತ್ರಂ ||
ಬೆರ[11]ಸರೆದು ನಸ್ಯಕರ್ಮ |
ಕ್ಕಿರದೊಡರಿಸಲಹಿಕುಳೋಗ್ರ ವಿಷಮಂ ಕಳೆಗುಂ || ೫೬ ||

1. ಸಾಲದೆ.... ಜೇ (ಖ) 2. ಫಣಿಕುಲದವಿಷಂಗಳ್ ಕ್ಷಣಮಿೞಿಗುಂ (ಖ) 3. ಸೆಕೆಗಿಕ್ಕಿರಸಂಗಳೊಳುರಾಮಠಂ (ಗ) 4. ಪನಿಸಲ್ ವಿಷಮೇನಿರ್ಕುಮೆ ಕವಿಕುಲಸರೋಜಭಾಸ್ಕರಮತದಿಂ (ಕ) (ಘ) 5. ಯೆಂಬಿವನಿತಂಪುಡಿಯಂ—ಡೆಲ್ಲಾವಿಷಮೞಿಗುಮೆಂದನುಭಯಕವೀಶಂ (ಕ) (ಘ) 6. ಶೃಂಗಾಂಗ (ಕ) 7. ಮಂಜಿಷ್ಠೈವಚಾ(ಜಾ)ದ್ರಜ (ಕ) 8. ಸರ್ಪನ ವಿಷಮಂ (ಖ) 9. ಪುರಿನೀಲವರಪುಲ (ಕ) 10. ಲೇಳೆಯಫಲಮಂ(ಕ)ಲೇೞಿಯಪಲಮಂ (ಖ) 11. ಸರೆಮಸ್ಯಕರ್ಮಕ್ಕಿರ (ಖ) ನಸ್ಯಕರ್ಮಮನಿರ(ಘ)

* ಇದು (ಗ) ಪ್ರತಿಯಲ್ಲಿಲ್ಲ. † ಈ ನಾಲ್ಕುಕಂದಗಳು (ಗ) ಪ್ರತಿಯಲ್ಲಿಲ್ಲ.



ಕಂ|| ಪಾಗಲ[1]ಬೇರ್ ತ್ರಿಕಟುಕಮೊಂ |
ದಾಗಲ್ [2]ನರಮೂತ್ರದಿಂದೆ ನಸ್ಯಂಗೆಯ್ದಂ ||
ತಾಗಳೆ ಪೂಸುಗೆ ಪುಣ್ಣೊಳ್ |
ನಾಗವಿಷಂ ಪರೆದು ಪೋಗದೇಂ ನಿಂದಪುದೇ || ೫೭ ||

ಚಿಕ್ಕಣಿಕೆಯ ಪುಲ್ಲ ರಸಂ |
ತೆ(ಚೆ)ಕ್ಕನೆ ತೀವಿರೆ [3]ಕಟುತ್ರಿಕಂ ಚೂರ್ಣಿತಮೇ ||
ನಿಕ್ಕುವ[4]ಮಿದು ನಸ್ಯದೊಳಂ |
ಚಕ್ಕನೆ ಕಳೆಗುಂ ಸಮಸ್ತ [5]ಫಣಿಗಳ ವಿಷಮಂ || ೫೮ ||

ಸಾಲಧೆ ಪಲವೌಷಧಗಳ |
ಲೋಲತ್ವಂ ದೇವದಾಳಿಯಪರಾಜಿತೆಯೊ ||
ಳ್ಮೂಲಂ ಸಮನಾಗಿರೆ ನಿ |
ರ್ಮೂಲಿಸುಗುಂ ವಿಷಮನವಱ [6]ನಸ್ಯಾಂಜನದಿಂ || ೫೯ ||

†ಎಂಜಲಿಸಿತ್ತಹಿಪತಿ ಯೆಂ |
ದಂಜಲೆ ಬೇಡಣ್ಣ ನಸ್ಯಕರ್ಮದೊ[7]ಳಂ ನೀಂ ||
ಬಂಜೆ ಮಡುವಾಗಲೊಂದನೆ |
ರಂಜಿಪ [8]ಜಲದಿಂದೆ ಕುಡುವುದಮಳಚರಿತ್ರಾ || ೬೦ ||

ಹೇರೀಚಲ ಪೂವೊಂದೆ ನಿ |
ವಾರಿಸುಗುಂ ಕೞಿಯೊಳರೆದು ನಸ್ಯಂಗೆಯ್ಯಲ್ ||
ಭೋರೆಂದು ಪೊಱಿವ ಸರ್ಪನ |
ಘೋರ[9]ವಿಷಂಗಳನಶೇಷಕವಿಕುಲತಿಲಕಾ || ೬೧ ||

ಎಕ್ಕೆಯ ಪತ್ರದ ರಸದಿಂ |
ಚಿಕ್ಕನೆ ತೇವುದು ಸಮುದ್ರಫಳಮಂ [10]ತಲೆಯಿಂ ||
ಪೊಕ್ಕಿರೆ ನಸ್ಯಂಗೆಯ್ಯಲ್ |
ತೆಕ್ಕನೆ ತೀವಿದ ವಿಷಂಗಳೆಲ್ಲಂ ಪೞಿಗುಂ || ೬೨ ||

*ಎಲೆ [11]ಮರುಳೆ ಮನುಜ ನೀಂ ಪಲ |
ಪಲವಂ ಪಂಬಲಿಸಲೇಕೆ ನೀರಿಂದರೆದಾ ||
[12]ಫಲಿಸೀ ಕಂದಮನೊಂದನೆ |
[12]ವಿಲಸನ್ನಸ್ಯದೊಳೆ ರಚಿಸು ಫಣಿವಿಷಮೞಿಗುಂ || ೬೩ ||

1. ಚಿತ್ರಕಟಕ (ಖ) (ಗ) 2. ನರನರಮೂತ್ರ (ಗ) 3. ಕಟುತ್ರಯಂ (ಖ) 4. ವಿಾನಸ್ಯ (ಕ) ಮೆನಿಕ್ಕು ವೈಮನಶ್ಯ (ಗ) 5. ಫಣಿಕುಳವಿಷಮಂ (ಗ) 6. ನಸ್ಯಂ ಜಲದಿಂ (ಕ) 7. ದೊಳಂಬಂಜೆ (ಖ) 8. ಜಲದಿಂದೆ ನಸ್ಯಪಾನಮೆ ವಿಷಹಂ (ಕ) (ಘ) 9. ವಿಷಂಗಳನೆ ಕಳೆಗು ಬುಧಕುಲತಿಲಕಾ (ಗ) 10. ಸಮುದ್ರಫಲಮನಿತಪೆ ನಸ್ಯಂ । ನರಮೂತ್ರ (ಖ) (ಗ್ರಂಥಪಾತವಿದೆ.) 11. ಎಲೆಮನುಜ ಮುಗ್ಧತನದಿಂ (ಕ) ಎಲೆಮರುಳೆಮನುಜನೀಂಗಳ । (ಘ) 12. ಹು(ರಿ)ಲಿಗಿಲ (ಗ) ವಿಲಸನ್ನಸ್ಯಮನೊಡರ್ಚಲಹಿ (ಘ)

* ಈ ಎರಡು ಕಂದಗಳು (ಖ) ಪ್ರತಿಯಲ್ಲಿಲ್ಲ.

† ಇಲ್ಲಿಂದ ಮುಂದಣ ೭ ಕಂದಗಳು "ಗ" ಪ್ರತಿಯಲ್ಲಿಲ್ಲ.

ಕಂ|| ಅರುತಾಳದ ಪಣ್ಗಳೊಳಂ |
ಬೆರಸರೆದು ಸಮುದ್ರಫಲಮನಿತ್ತೊಡೆ ನಸ್ಯಂ ||
ನರಮೂತ್ರದೊಳದಱಿಂ ಚಿ |
ಚ್ಚರಮುೞಿಗುಂ [1]ಫಣಿವಿಷಂಗಳೆನಿತೊಳವನಿತುಂ || || ೬೪ ||

ಭೂಮಿ(ವಿ)ನುತಮಪ್ಪ ಮುಗುಳೀ |
ಗ್ರಾಮದ ವಿಭು ಮಂಗರಾಜನಱಿಪಿದ ನಸ್ಯಂ ||
ರಾಮಠ ಮರಿಚಂಗಳವಿ |
ನ್ನೀಮಾತೊ ಸರ್ಪವಿಷಮನಾಕ್ಷಣಮುೞಿಗುಂ || ೬೫ ||

ದೊರೆಕೊಳೆ [2]ಚಕ್ರಾಂಕಿಯ ಬೇರ್ |
ಗುರುಪುಷ್ಯದೊಳಲ್ಲದಂದು ಹಸ್ತಾರ್ಕದೊಳಂ ||
ಪರಿಕಿಸಿ ನಸ್ಯಮನೀಯಲ್ |
ಪರೆಗುಂ ಫಣಿ ವೃಶ್ಚಿಕಂಗಳುಗ್ರವಿಷಂಗಳ್ || || ೬೬ ||

ಮದನಫಳಮೂತ್ರಯುತ ಲೇ ||
ಪದೊಳಂ ನಸ್ಯದೊಳಶೇಷವಿಷಮಿರದೆಂದಂ ||
ಸದಯನೆನಿಸಿರ್ಪ ಸಜ್ಜನ |
ಹೃದಯಾಂತರ್ಜ್ಯೋತಿರಂಗ [3]ಸುರತರು ಮಂಗಂ || ೬೭ ||

*ಸಾರತರತುಳಸಿಯುಂ ಮ |
ಗ್ಗಾರೆಯ ಫಲಮೆಸೆವ ವಿಮಲ(ದ) ಜೇಪಾಳಂ ಕಾ ||
ಱ್ಖೀರೆಯೆಲೆ ಮೂತ್ರದಿಂದರೆ |
ದೋರೊಂದಱ ನಸ್ಯಕರ್ಮದಿಂ ವಿಷಮುೞಿಗುಂ || ೬೮ ||

ಬಂಜೆ ಮಡುವಾಗಲಂ [4]ಮೇಣ್ |
ಅಂಜಣಿಗೆಯ [5]ಪುಲ್ಲನಕ್ಕೆ ನರಮೂ[6]ತ್ರದೊಳಂ ||
[7]ರಂಜಿಸೆ ನಸ್ಯಂಗೆಯ್ಯಲ್ |
ನಂಜುೞಿಗುಂ [8]ಕವಿಜನೈಕಮಿತ್ರನ ಮತದಿಂ || ೬೯ ||

*ಭುಜಗಂ ಕೊಂಡೊಡೆ [9]ಸಭಯಂ ||
ಗುಜುಗುಜುವೇಡಣ್ಣ ವಾರ್ಧಿಫಳಮಂ ಮತ್ತಂ ||
ತಜಮೂತ್ರಯುತಂ ನಸ್ಯಂ |
ವಿಜಯಂ ವಿಷವಿಕ್ರಮಾಬ್ಧಿ [10]ಬಾಡವನೆನಿಕುಂ || ೭೦ ||

1. ಫಣಿಕುಲೋಗ್ರ ವಿಷಮೆನಿತನಿತುಂ (ಘ) 2. ಚಕ್ರೋಕ್ತಿಯ (ಕ) ಚಕ್ರಾಂಗಿಯ (ಘ) 3. ಸುಂತರ ಮಂಗಂ (ಖ) 4. ಮೆಣುರೆಂಜಿಣಿಗೆ (ಗ) 5. ಪುಲ್ಲನಕ್ಕಿ (ಗ) (ಘ) 6. ಮೂತ್ರಯುತಂ. 7. ರಂಜಿಸಿ (ಗ) 8. ಬುಧಜನೈಕ (ಘ) 9. ಭಯದಿಂ ಗುಜಾಗುಜಾವೇಡಾಸಮುದ್ರ ಫಳಮನೆಮತ್ತಂ (ಖ) 10. ಬಾಡನೆನಿಕ್ಕುಂ (ಖ)

* (ಗ) ಪ್ರತಿಯಲ್ಲಿಲ್ಲ.



ಕಂ|| [1]ನಂಜಿದತಿವಿಷಮುಮೆಂಡೀ |
ಕಂಜುವಿರಂಜದಿರಿ ತರಿಸಿ[2]ಗೋಮೂತ್ರದೊಳಂ ||
ಬಂಜೆ [3]ಮಡುವಾಗಲೊಳ್ ವಿಷ |
ಭಂಜನ [4]ಮಾಕ್ಷಣದೆ ನಸ್ಯಮಂ ಮಾಡಲೊಡಂ || ೭೧ ||

* ಪಾಲಿಂದೆ ಪುತ್ರಜೀವಿಯ |
ನಾಲಸ್ಯಮನುೞಿದು ನಸ್ಯಮಂ [5]ಮಾಡೆ ಬುಧಂ ||
[6]ಸೋಲಿಸುಗುಮುಗ್ರವಿಷಮಂ |
ಶ್ರೀಲಲನಾಪತಿಯೆನಿಪ್ಪ [7]ಮಂಗನ ಮತದಿಂ || ೭೨ ||

ಏಮಾ[8]ತೆಲ್ಲಿಯದಿಂನೀ |
ಕ್ಷೇಮಂ ಫಣಿಕೊಂಡುದೆಂದು [9]ಬೆಂಬೀೞದೆ ಸು ||
ಪ್ರೇಮದೆ ಸಮುದ್ರಫಳಮಂ |
ಗೋಮೂ[10]ತ್ರದೊಳಿತ್ತ ನಸ್ಯಮದುವೆ ವಿಷಘ್ನಂ || ೭೩ ||

†ಎಸೆವಾ ಪಾಗಲ ತುಂಬೆಯ |
ರಸಮಂ ಗಣಜಿಲೆಯ [11]ರಸಮನಕ್ಕೆಮ ಮೂಗಿಂ ||
ಗೆಸೆಯಲ್ ನಸ್ಯಮನಾ |
ಗಿಸೆ ದೆಸೆಗಿಡುಗುಂ [12]ಫಣಿವಿಷಂಗಳಮಳಚರಿತ್ರಾ || ೭೪ ||

[13]ಮಿಕ್ಕಾ ವಿಷ[14]ವೈದ್ಯದೊಳಂ |
ಚುಕ್ಕಿಯ ಮಾತೇವುದಣ್ಣ ಫಣಿಕೊಂಡ ನರಂ ||
ಗೆಕ್ಕೆಯ ಪಾಲಿನ ನಸ್ಯಂ |
[15]ಚಿಕ್ಕನದಾಗಲ್ ವಿಷಾಪಹಂ ಗುಣನಿಲಯಾ || ೭೫ ||

[16]ಭುಜಗಂ ಕೊಂಡೊಡೆ ಭಯದಿಂ |
[17]ಗಜಬಜಿಸಲದೇಕೆ ನಸ್ಯಕರ್ಮದೊಳೊಂದಂ ||
ಬಜೆಯಂ ಪ್ರಯೋಗಿಸಲ್ಕದೆ |
[18]ವಿಜಯಪ್ರದನೆಂದನಲ್ತೆ ಮಂಗಶುಭಾಂಗಂ || ೭೬ ||

1. ನಂಜರಿಸೆ (ಖ) ನಂಜಿನತಿ ವಿಷಮುಮೆಂ (ಗ) 2. ಗೋಮೂತ್ರಮದಂ (ಖ) (ಗ) 3. ಮಡುವಾಗಲಂ (ಘ) 4. ಮಾಕ್ಷಣಮೆ (ಖ) (ಗ) 5. ಮಾಡಲೊಡಂ (ಖ) ಮಾಡುಬುಧಾ (ಘ) 6. ಸೋಲಿಸುಗುಂ ವಿಷತತಿಯಂ (ಖ) 7. ಜಿನಮುನಿಮತದಿಂ (ಘ) 8. ತಿನ್ನಿಲ್ಲಂ ಸುಕ್ಷೇಮ (ಕ) (ಘ) ತಿನ್ನೇಂ ಕ್ಷೇಮಂ (ಗ) 9. ಗಜಬಜಿಸದೆನೀಂ (ಘ) 10. ಮೂತ್ರದಿ ನಸ್ಯಮದುವೆ (ಗ) 11. ರಸಮುನೀಶ್ವರಿಯಂ ಕಣ್ಗೆಸೆಯಲ್(ಘ) 12. ಫಣಿಕುಲಂಗಳುಗ್ರವಿಷಂಗಳ್(ಘ) 13. ಮಿಕ್ಕೇಂ(ಖ) (ಗ) 14. ವೈದ್ಯಶತಂಗಳ (ಘ) 15. ಚಿಕ್ಕನೆತಾಗಲ್ (ಕ) 16. ಭುಜಗಂ ಕೊಂಡನರಂಗಂ (ಗ) ಬಜಿಸದೆನಸ್ಯ (ಗ) ಭಜಿಸಂದೋರೆ (ಖ) 17. ಗುಜುಗುಜುಬೇಡಣ್ಣ (ಘ) 18. ವಿಜಯಂ ವಿಷವಿಕ್ರಮಾಬ್ಧಿ ಬಾಡಬಮೆನಿಕುಂ (ಕ) (ಘ) ವಿಜಯಪ್ರದ........ಮಂಗ (ಗ)

* (ಗ) ಪ್ರತಿಯಲ್ಲಿಲ್ಲ.

† (ಘ) (ಗ) ಪ್ರತಿಗಳಲ್ಲಿಲ್ಲ.

ಕಂ|| *ಭೋಜ್ಯಮೆನಿಪಗುಳುಶುಂಠಿಯ |
ನಾಜ್ಯ[1]ದೊಳಂದ(ತ)ರೆದು ನಸ್ಯಮಂ ಮಾಡಲೊಡಂ ||
[2]ಭಾಜ್ಯಂ ಫಣಿವಿಷಮುದಱಿಂ |
ರಾಜ್ಯದೊಳಿಂತಱಿಯೆ ಪೇೞ್ದ ನಮಳಚರಿತ್ರಂ || ೭೭ ||

ಸಾಲದೆ ತಂಬುಲದೆಲೆಯಂ |
ತೈಲಾನ್ವಿತಮಾಗೆ ನಸ್ಯಮಂ ಮಾಡಲೊಡಂ ||
[3]ಸೋಲಿಸುಗುಂ ಫಣಿವಿಷಮಂ |
ಕಾಲೋರಗದಷ್ಟನಾದೊಡಂ ಜೀವಿಸುಗುಂ || ೭೮ ||

*ಅಗಸೆಯ ಬೇರಾಗಲಿ ಱಿಂ |
ಜಿಗೆಯ (ಯೆ)ಕ್ಕೆಮ ದೊರೆಕೊಳಲ್ಕೆ ನಿಂಬೆಯ[4]ರಸದಿಂ ||
ಬಗೆಗೊಳೆ ನಸ್ಯಮನೀವುದು |
ಪಗೆಯೆನಿಸಿದ ವಿಷಧರೋಗ್ರತರವಿಷವೞಿಗುಂ || ೭೯ ||

*ಸೊಗಯಿಪ ನುಗ್ಗೆಯ ಬೇರ್ ಹೊ |
ಮ್ಮುಗುಳಕ್ಕೆ [5]ಸಮುದ್ರಫಳಮನಕ್ಕಿಮ ಕೂಡಿ ||
ಟ್ಟು ಗಡರೆ ನಿಂಬೆಯ ರಸಬಿಂ |
ದುಗಳಿಂ ನಸ್ಯಮನೊಡರ್ಚಲಹಿವಿಷಮೞಿಗುಂ || ೮೦ ||

ಅಜಮೂತ್ರದಿಂದೆ ತೇವುದು |
ರಜನಿಯುಮಂ ದಷ್ಟನಾಸಿಕಕ್ಕೆಱೆಯಲೊಡಂ||
ಭುಜಗೋಗ್ರವಿಷಂ ಕಿಡುಗುಂ |
[6]ವೃಜಿನಾಂಗವಿದೂರಸಂಗಮಂಗನ ಮತದಿಂ || ೮೧ ||

*ಕಗ್ಗೊಱಲೆ ಬುಗುಡಿ [7]ಮಿಟಲೆಯ |
ನುಗ್ಗೆಯ ಪತ್ರಂಗಳೊಡನೆ ಮರಿಚದ ಚೂರ್ಣಂ||
ಅಗ್ಗಳಮೊಂದಿರೆ ನಸ್ಯದೊ |
ಳೆಗ್ಗಿಲ್ಲದೆ ವಿಷಹರಂ ವಲಂ ಪ್ರತ್ಯೇಕಂ || ೮೨ ||

ಅವುಹಿತಮಿವುಹಿತಮೆಂಬೀ |
ವಿವರಣೆಯ ವಿಕಲ್ಪಮೇಕೆ ಮೆಣಸಿನ ಚೂರ್ಣ ||
ಕ್ಕವರೆಯ ಪತ್ರದ ರಸಮೊಂ |
ದೆ ವಿಶೇಷಂ ನಸ್ಯದಿಂ ವಿಷಘ್ನಮಮೋಘಂ || ೮೩ ||

1. ದೊಳದನರೆದು (ಘ) 2. ತ್ಯಾಜ್ಯಂ ಫಣಿವಿಷಮೆಂದೀ । ರಾಜ್ಯದೊಳಂ ತಿಳಿಯಪೇೞ್ದ ಸುಭಯ ಕವೀಶಂ (ಘ) 3. ಲೋಲಿಸುಗುಂ ಫಣಿ....ಕಾಳೋ (ಖ) ಜಾಲಿಸುಗುಂ (ಕ) ಪೋಲಿಸುಗುಂ (ಗ) 4. ರಸಬಿಂದುಗಳಿಂ ನಸ್ಯಮನೊಡರ್ಚೆ (ಕ) 5. ಸಮುದ್ರ....ಪಾನಕ್ಕೆಮಕೂಡಿಟ್ಟುಗಡರೆ ನಿಂಬೆಯರಸದಿಂ ಬಿಂದುಗಳಿಂ (ಖ) ಸಮುದ್ರಫಳವಕೂಡಿಟ್ಟರೆನೀಂ । ಸೊಗಯಿಪ ನಿಂಬೆಯರಸದಿಂ (ಘ) 6. ತ್ರಿಜಗದ್ಭೂಷಣನೆನಿಪ್ಪ ಜಿನಮುನಿಮತದಿಂ (ಕ) 7. ಮಿಟುಣೆಯ (ಖ)

* (ಘ) (ಗ) ಪ್ರತಿಗಳಲ್ಲಿಲ್ಲ.



ಕಂ|| ವಶಮಲ್ಲಂ ವಿಷಮೆ ನಿರಂ |
ಕುಶಮೆಂಬ ಭಯಂ[1]ಗಡೇಕೆ ನಸ್ಯದೊಳಂತಾ ||
ಲಶುನದ್ವಯಮುಂ ಮರಿಚಂ |
ಪ್ರಶಸ್ತಮೆಂದಿಳಿಯೊಳಱಿ[2]ಪುವರ್ ಜಾಂಗುಳಿಕರ್ || ೮೪ ||

* ತೊಱೆಗಿರಿ[3]ಗಳೊಳೌಷಧಿಗಳ |
ನಱಸಲ್ವೇಡಣ್ಣ ಮೆಣಸಿನೊಡಮೆರಸಿರಲಾ ||
[4]ಕಿಱುದೆಂಗಿನ [5]ರಸಮೊಂದುಮ |
ನೆಱೆ ನಸ್ಯಮನಹಿವಿಷಂಗಳಂ ಭಂಜಿಸುಗುಂ || ೮೫ ||

[6]ಉ|| ಪಾಗಲು ಲೊಕ್ಕಿ ಚಿಕ್ಕಣಿಕೆ ಯಾವರೆ ನಾಗಲತಾಖ್ಯೆ ಕಾಕೆಯೊಳ್ |
[7]ಬೇಗಡೊಳೊಪ್ಪುವೆತ್ತದಳಮಂ ಬೆರಸೊಪ್ಪಿರೆ ಬೇಱೆ[8]ಬೇಱಿಂ ||
ಬಾಗಿರೆ ನಸ್ಯದೊಳ್ ಮರಿಚಮಂ ಪನಿಸಲ್ ದೆಸೆಗೆಟ್ಟು ಬಿಟ್ಟದೇಂ |
ಪೋಗದೆ ನಿಲ್ಕುಮೇ ಫಣಿವಿಷಂ [9]ಧರೆಯೊಳ್ ಕವಿಕಂಜಭಾಸ್ಕರಾ || || ೮೬ ||

ಕಂ|| ಗರ್ದುಗು ನೆಲಾವರೆ ತುಂಬೆಯೊ |
ಳೊದವಿದ ಪತ್ರಂಗಳಂ ಗಡಂ ದೊರಕಿದುದಂ ||
ಪದೆಪಿಂ ನಸ್ಯದೊಳಂದೀ |
ವುದು ಮರಿಚಂಗೂಡಿ [10]ನಿರ್ವಿಷಾಖ್ಯಮುದಕ್ಕುಂ || ೮೭ ||

ಎಸೆವೇರಂಡದ ಮೊಗ್ಗೆಯ |
ರಸಮಂ ಮೆಣಸಿನೊಳೆ ಕೂಡಿ ನಸ್ಯಮನಿತ್ತಂ ||
ದಸಮಾನಮೆನಿಪ ವಿಷಮುಂ |
ದೆಸೆಗಿಡುಗುಂ ಕವಿಕುಲಾಬ್ಜಮಿತ್ರನ ಮತದಿಂ || ೮೮ ||

ಮೋಟ ಪುರುವಳ್ಳಿ [11]ಎಲೆಯು |
ತ್ಪಾಟಿಸುಗುಂ ನಸ್ಯಕರ್ಮದೊಳ್ [12]ವಿಷಮನದುಂ ||
[13]ಪಾಟಿಸಿ ಮರಿಚದೊಳೀಯಲ್ |
[14]ಕೋಟಲತಾಕುಲಮದೇವುದಿಂತಿದಱಿದಿರೊಳ್ || ೮೯ ||

1. ಗದೇಕೆ (ಖ) ಮೆಂಬೀಭಯಮುದೇಕೆ (ಘ) 2. ಱಿಪಿದಂ ಮಂಗರಸಂ (ಘ) 3. ತೊಱೆಗಿರಿಕಲ್ಗಳೊಳೌಷಧಿಗಳ (ಕ) 4. ಕಿಱುದೇಗಿನ (ಕ) 5. ರಸಮೊಂದರ । ವರನಸ್ಯಂ ಸರ್ಪವಿಷಗಳಂ ಭಂಜಿಸುಗುಂ (ಘ) 6. ಚಂಪಕಮಾಲೆ (ಗ) 7. ಬೇಗದಿಮೊಪ್ಪುವೆತ್ತ (ಗ) 8. ಬೇಱೆಯಿಂಬಾಗಿರೆ (ಗ) 9. ಧರೆಯೊಳ್ ಕಂಜಭಾಸ್ಕರಾ (ಕ) ಧರೆಯೊಳ್ ಕವಿಪದ್ಮಭಾಸ್ಕರಾ || (ಘ) 10. ಸರ್ಪವಿಷಹರಮುಕ್ಕುಂ (ಘ) 11. ಯೆಲೆಯುಮಪಾರಿಸುಗುಂ. 12. ಬಿಸತತಿಯಂ (ಕ) 13. ಲೋಟಿಸಿ (ಕ) ಪಾರಿಸಿ (ಗ) 14. ಕೋಟವಿಷಾ(ಪ)ವ್ರಾತಮೆಲ್ಲಮಂ ಸಂಹರಿಕುಂ (ಗ)

* ಇಲ್ಲಿಯವರೆಗೆ (ಗ) ಪ್ರತಿಯಲ್ಲಿಲ್ಲ.

ಕಂ|| ದಾಗುಡಿಯಂ [1]ಜಲದಿಂದರೆ |
ದೋಗಡಿಸದೆ ನಾಸಿಕಾಂತದೊಳ್ [2]ಪಿೞಿಯಲೊಡಂ ||
ನಾಗಕುಲದುಗ್ರವಿಷವೇಂ |
ಪೋಗದೆ ನಿಂದಪುದೆ ಬುಧಸರೋರುಹ[3]ಮಿತ್ರಾ || ೯೦ ||

[4]ಮ||ಸ್ರ|| ವಂಧ್ಯಾಕರ್ಕೋಟಕೀ ಕಂದದೊಳೆೞೆ[3]ವುದಜಾಮೂತ್ರದಿಂ ಮೂಱುಸೂೞ್ ಭಾ[5] |
ವಂ ಧ್ಯೇಯಂ ತಾನದಾಗಲ್ [6]ಕಱಿವೆರಸು ಬೞಿಕಾಜ್ಯದಿಂ [7]ಕೂಡಿರಲ್ ಬೇ ||
ಱೇಂ ಧ್ಯಾನಂ ತದ್ವಿಷಕ್ಸೂರಿಗೆ ವಿಷಧರದಷ್ಟಂಗೆ [8]ನಸ್ಯಾಂಗವಾಗಲ್ |
ಸಂಧ್ಯಾಭ್ರಾರಕ್ತದಂತಾಗಳೆ ವಿಷಮಱಿಗುಂ ಮಂಗರಾಜೋಕ್ತಿಯಿಂದಂ || ೯೧ ||

[9]ಉ|| ಆಡಿನ ಮೂತ್ರದೊಳ್ [10]ಪೊರೆಯಲೊತ್ತುವುದೇ[11]ೞಿರುಳಿಪ್ಪೆಯ ದ್ರುಮಂ |
ತಾಡಿದ ಕೆಚ್ಚನಲ್ಲಿಯೆ ಕಟುತ್ರಯ [12]ಸೈಂಧವಮುಂ ವಚಾನ್ವಿತಂ ||
ಕೂಡಿರಲಂತದಂ ಪಿೞಿಯೆ ನಾಸಿಕದೊಳ್ ಖಳಸರ್ಪ [13]ವೃಶ್ಚಿಕೋ |
ತ್ಪೀಡನದುಗ್ರಮಪ್ಪ ವಿಷಮುಂ ಗ್ರಹಮುಂ ಮೊಲೆನಾಗನೋಡುಗುಂ || ೯೨ ||

ಚಂ|| ತ್ರಿಕಟುಕಮಂ ಸಮುದ್ರಫಳಮಂ ಮಡುವಾಗಲನಕ್ಕೆ [14]ಕೊಂಡು ನಾ |
ಸ್ತಿಕತನಮಿಲ್ಲದಂ[15]ತರೆದು ಮೂತ್ರದೊಳಂ[16]ತಿರೆ ನಸ್ಯಕರ್ಮದೊಳ್ ||
ಪ್ರಕಟಿಸೆ ಸರ್ಪನುಗ್ರವಿಷದಿಂದೞಿವಿಲ್ಲ ನರರ್ಗಮೆಂದು ಭಾ |
ವಕಕವಿ ಮಂಗನಿತ್ತಪನಿದಂ ಪ್ರಜೆಗೆಂದಭಯ[17]ಪ್ರಸಿದ್ಧಿಯಂ || ೯೩ ||

ಚಂ|| ತ್ರಿಕಟುಕ ಮಂಗುರುಂ [18]ಮುನಿ ಶಿಫಾರುಜೆ ಕೈಪೆಯೆನಿಪ್ಪಲಾಬು ಮೂ |
ಲ ಕುಟಜ ದೇವವಾಳಿ ಮಡುವಾಗಲುದಂಚಿತನ[19]ಸ್ಯಕರ್ಮದೊಳ್ ||
ಪ್ರಕಟಿತ ಪನ್ನಗೋಗ್ರವಿಷನಾಶನಮೆಂದಿಳೆಗೆಯ್ದೆ ಸಾಱಿದಂ |
ಸಕಳಕಳಾಬ್ಜನೀದಿನಕರಂ ವಿಭುಮಂಗರಸಂ ದಯಾರಸಂ || ೯೪ ||

*ಕಂ|| ಈ ಗ್ರಂಥ ಮಖಿಳಪು[20]ರುಷರ |
ವಿಗ್ರಹ ರಕ್ಷಣನಿಮಿತ್ತಮೆಂದುಸಿರ್ದೆಂ ನಿ ||
ರ್ವ್ಯಗ್ರತೆಯಿಂ ತಿಳಿವುದು ನರ |
ರುಗ್ರವಿಷಾಪಹ ಖಗೇಂದ್ರಮಣಿದರ್ಪಣ[21]ದೊಳ್ || ೯೫ ||

---

1. ಜಲದಿಂ....ಗಡಿಸದೆ (ಕ) 2. ಪುಳಿಯಲೊಡಂ (ಘ) 3. ದಿನಪಾ (ಗ) 4. ಶಾರ್ದೂಲವೃತ್ತ (ಗ) 5. ಪೋವಂದೇಯಂ (ಕ) ನೂಱುಸೂೞ್ ಭಾವಂದೇಯಂ (ಗ) 6. ಕೞಿವೆರಸೆ (ಗ) 7. ಜ್ಯದಿಂ ಱಿಂದ್ಯಾನುತದ್ವಿಷಕ್ಸೂಲಿಗೆ (ಕ) ಜ್ಯದಿಂಬೇರೆಂದ್ಯಾನತ (ಗ) 8. ನಸ್ಯಗವಾಗಲ್ (ಕ) 9. ಚಂಪಕ ಮಾಲೆ (ಗ) 10. ಪೊ....ಯಲೊತ್ತು (ಖ) 11. ತ್ರಯ....ಮಾಡಿರಲಂತದಂ (ಖ) (ಗ) 12. ದೇಗಳಿಪ್ಪೆಯ(ಕ) ಸೈಂಧವಮುಂದಜಾನಿತಂ (ಗ) 13. ವಿಶ್ಚಿಕಾಪೀಡನ (ಕ) ವೃಶ್ಚಿಕಾಪೀಡನ (ಗ) 14. ಕಕ್ಕೆ (ಕ) 15. ದಂದರೆದು (ಗ) 16. ತವೆ (ಗ) 17. ಪ್ರದಾನಮಂ (ಘ) ಪ್ರಸಿದ್ಧಮಂ. 18. ಮುಗಿಸಿದಾರುಜೆ (ಕ) 19. ನಸ್ಯಮುಖ್ಯದೊಳ್ (ಕ) (ಗ) ನಸ್ಯಮಾಲ್ಯದೊಳ್. 20. ಪೂರುಷ(ಖ) 21. ದರ್ಪಣಮಂ (ಖ)

* ಈ ಅಧಿಕಾರಾಂತ್ಯದಲ್ಲಿಯೂ ಮಾಲಿನೀವೃತ್ತವಿಲ್ಲ. ಈ ಪದ್ಯವು (ಘ) (ಕ) ಪ್ರತಿಗಳಲ್ಲಿಲ್ಲ.



ಶಾ|| [1]ಸುಜ್ಞಾನ ತ್ರಿತಯಾಬ್ಧಿಗಳ್ ಗಣಧರಶ್ರೀ ಗೌತಮಾಖ್ಯರ್ ಜಿನೋ |
ಪಜ್ಞಂ ಸರ್ವಜನೋಪಕಾರಕಮೆನಲ್ಕೀ ಲೋಕದೊಳ್ ಪೇೞ್ದುದುಂ ||
ಕುಜ್ಞಾನೋದಿತವಾಕ್ತಮೋರವಿಗಳಾ ಶ್ರೀಪೂಜ್ಯ[2]ಪಾದಾಖ್ಯರಿಂ |
ಪ್ರಜ್ಞಾಧಾರನೆನಿಪ್ಪ ಮಂಗವಿಭುವಿಂ ಸಂಕ್ಷೇಪದಿಂ ಸೂಚಿತಂ || ೯೬ ||

— ಗದ್ಯ —

ಇದು

ಸಕಲವಿದಮಲ ಜಿನೇಂದ್ರೋಕ್ತಸಿದ್ಧಾಂತಪಯಃಪಯೋನಿಧಿಪಾರಗ
ಶ್ರೀಪೂಜ್ಯಪಾದಮುನೀಂದ್ರ ಚಾರುಚರಣಾರವಿಂದ
ಗಂಧಗುಣಾನಂದಿತಮಾನಸಂ
ಶ್ರೀ ಮದಖಿಲಕಲಾಗಮೋತ್ತುಂಗ
ಮಂಗವಿಭು
ವಿರಚಿತಮಪ್ಪ

## ಖಗೇಂದ್ರ ಮಣಿದರ್ಪಣದೊಳ್

[3]ನಸ್ಯಾಧಿಕಾರಂ
ಸಪ್ತಮಂ
(ಮಂಗಳಮಹಾಶ್ರೀ.)

---

1. ಸದ್‌ಜ್ಞಾನ (ಕ) 2. ಪಾದಾದ್ಯರುಂ (ಖ) ಪಾದಾದ್ಯರಿಂ (ಖ) 3. ವಿಷಧರನಸ್ಯ ಕರ್ಮವಿಧಾನಂ (ಖ) ವಿಧಾನಮೆಂಬ ಸಪ್ತಮಾಶ್ವಾಸ ಮಂಗಳಮಹಾಶ್ರಿ (ಗ) ಸಪ್ತಮಾಧಿಕಾರಂ (ಘ) ನಸ್ಯಕರ್ಮ ಪ್ರಕರಣಂ ಸಪ್ತಮಾಶ್ವಾಸಂ (ಕ)

* ಈ ಪದ್ಯವು (ಘ) (ಕ) ಪ್ರತಿಗಳಲ್ಲಿಲ್ಲ.

# ಅಷ್ಟಮಾಧಿಕಾರಂ

## [1]ಲೇಪಪ್ರಕರಣಂ,

ಕಂ|| ಶ್ರೀದಮೆನಿಸಿರ್ದ ಜಿನಗಂ |
ಧೋದಕದಿಂ ಶುದ್ಧಮಾದ ದೇಹಿಗಳ ಭ[2]ವ ||
ಚ್ಛೇದನಮಕ್ಕುಂ [3]ವಿಷವಿ |
ಚ್ಛೇದನಮಂತೀ ಸಮಂತ್ರಕಾಂ[4]ಗಾರ್ದ್ರತೆಯಿಂ || ೧ ||

ಕೋಪಾ[5]ಟೋಪದೆ ಫಣಿ ಪಿಡಿ |
ದಾ ಪಲ್ಗಳ್ ನಟ್ಟ ತಾಣದೊಳ್ ಮದ್ದುಗಳಂ ||
ಲೇಪಿಸೆ ಸಮಂತ್ರಕಂಗಳ್ |
ಲೋಪಮನೆಯ್ದಿಸುಗುಮುಗ್ರವಿಷವಿಕ್ರಮಮಂ || ೨ ||

ಪಾನ[6]ಮದಕ್ಕಂಜನಮದ |
ಕ್ಕಾರ್ ನಸ್ಯಮದಕ್ಕೆ ಲೇಪನಕ್ರಿಯೆಯೊಂದ ||
ಕ್ಕೀನಾಲ್ಕಱೊಳೊಂದೆ ವಿಷ |
[7]ಗ್ಲಾನಿಯನೞಿಸುಗುಮೆಂದೊಡೇವಣ್ಣಿಪುದೋ || ೩ ||

ಚಂ|| ಸಿರಿಸದ ಪುಷ್ಪ ಮಂಜಿಟಿಗೆ [8]ಹಿಂಗು ಕರಂಜಬೀಜ ದೇವದಾ |
ರರಿಸಿನಮುಂ ಕಟುತ್ರಯ ಫಲತ್ರಿತಯಂ ಸಿತಶೈಲ ಕನ್ಯೆಯಂ ||
[9]ಬರಗರುಡೋಗ್ರಗಂಧಿ ಸಿತಸರ್ಷಪದೊಳ್ [10]ಕೊಱೆಯಕ್ಕಿ ದಾರ್ವಿಯುಂ |
ಬೆರಸಜಮೂತ್ರದಿಂದರೆವುದಕ್ಷಸಮಾನಮದಾಗಲುಂಡೆಯಂ || ೪ ||

ಕಂ|| [11]ಕೂಡಿ[ರೆ] ಚಾಯಾಶುಷ್ಕಂ |
ಮಾಡಿ ನೃಮೂತ್ರದೊಳೆ ನಸ್ಯಲೇಪನವಿಧಿಯಿಂ ||
ಪೀಡಿಸುವಖಿಲವಿಷಂ ಬಿ |
ಟ್ಟೋಡುಗುಮಾ[12]ಸೂಜ್ವರಂಗಳನಿತುಂ ವಿನುತಾ || ೫ ||

ಎರಡರಿಸಿನ ಕುಂಕುಮಮೆಸೆ |
ವರಿದಾಳಂ ಬಾಳ[13]ಯುಗ್ಮಮುತ್ಪಳ ತಗರಂ ||
ಬೆರಸಿಂತಿವೆಲ್ಲಮೊಂದಾ |
ಗಿರೆ [14]ಪದ್ಮಕಕೇಸರಂ ಲಸಜ್ಜಾಯಿಫಳಂ || ೬ ||

1. ಲೇಪವರ್ಗಂ (ಕ) 2. ಭವತ್ಸೇದನ (ಗ) 3. ವಿಚ್ಛೇಸನನುಂತಿ (ಗ) ವಿಚ್ಛೇದನಮಕ್ಕುಂ(ಕ) 4. ಗಾತ್ರ್ಯತೆಯಿಂ (ಕ) ಗಾರ್ದತೆಯಿಂ (ಗ) 5. ಟೋಪದಿನಹಿಪಿಡಿದಾ (ಘ) 6. ಮದಕ್ಕುಂಜನ (ಗ) 7. ಜ್ಞಾನಿಯನಳರಿಸುಗೆಮೆ (ಗ) 8. ಯಿಂಗು (ಗ) 9. ಬಡಗರುಡೋಗ್ರ. 10. ಕೊರೆಯಕ್ಕೆ (ಗ) 11. ಕೂಡೆಚ್ಛಾ (ಕ) 12. ಸೂದ್ವಿರಂಗಳನಿತುಂ (ಕ) ಸೂಳ್ವರಂಗಳುಮನಿತುಂ (ಖ) 13. ಯುಗ್ಮಂ ತ್ಪಲತಗರಂ (ಗ) 14. ಪದ್ಮಕ ಕೇಸರಲಸಜ್ಜಾಯಿಫಳಂ (ಘ)



ಕಂ|| ಸಾರತರಮೆನಿಪ ಚಂದನ |
ಗೋರೋಚನ ರೇಣುಕಂ [1]ಮಣಿಚ್ಛಿಲೆಯುಂ ಕ ||
ಸ್ತೂರಿ ವರಮಾಂಸಿ ಯೆಲೆಗಳೊ |
[2]ಳೋರನ್ನಮೆನಲ್ಕೆ ನಾಗಕೇಸರಮನದಂ || ೭ ||

ಕೂಡುವು[3]ದೆಲ್ಲವಱರ್ಧಮ |
[4]ನೀಡಿತದಕ್ಷಪ್ರಮಾಣವಟಕಂಗಳ ನೀಂ ||
ಕೂ(ಮಾ)ಡಿ ಕುಡು ಲೇಪನಾದಿಗೆ |
ನಾಡಾಡಿಯೆ ಮರ್ದಿವಕ್ಕೆ ದೊರೆ ಪೇೞ್ತುಂಟೇ || ೮ ||

ಇದಮೋಘಂ ಸರ್ಪಾದಿಗ |
ಳೊದವಿದ ವಿಷಮಂ ವಿರೋಧಿಮಾಪಾತಕರಿ ||
ಕ್ಕಿದ ವಿಷಮಂ ಪರಿಹರಿಕುಂ |
ಸದಮಳ [5]ಚಂದ್ರಪ್ರಭಾಖ್ಯಯೋಗಮಿದಕ್ಕುಂ || ೯ ||

*[6]ಇಂದು ಮಡುವಾಗಲೊಪ್ಪುವ |
ಕಂದಂ ಪಾತಾಳಗರುಡ ನೆಂಬಿವುಮಂ ಕೞಿಂ ||
ಯಿಂದಂ ಮರ್ದಿಸಿ ಪೂಸಲ್ |
ಸಂದೆಯಮೇಂ ನೆತ್ತಿಗೊತ್ತೆ ನಿರ್ವಿಷಮಕ್ಕುಂ || ೧೦ ||

ಬೆಲ್ಲದೊಡಗೂಡಿ ಸುಣ್ಣಮ |
ನಿಲ್ಲಣಮಂ ಮರಿಚ ಲಶುನಮಂ [7]ಕರಿಯೆಲೆಯಂ ||
ನಿಲ್ಲದೆ ಜಲದಿಂ ಮರ್ದಿಸಿ |
ತಲ್ಲಣಿಸದೆ [8]ಪೂಸೆ ಫಣಿ[9]ವಿಷಕ್ಷಯಮಕ್ಕುಂ || ೧೧ ||

*ಬೆಳುಹೂಲಿಯ ಬೇರಂ ಮಂ |
ಡಳಮಾರಿಯ ಬೇರನಕ್ಕೆ ಪುಳಿಯಿಂದರೆದಾ ||
ಖಳ[10]ಸರ್ಪ ಕಾಡಿದೆಡೆಗಾ |
ಗಳೆ ಪೂಸಲ್ ನಿರ್ವಿಷಂ ಪರಾರ್ಥಚರಿತ್ರಾ || ೧೨ ||

ಜೇನೊಳ್ ಗೋಜಿಹ್ವೆಯುಮಂ |
ಜಾನಿಸದೆ ಸಮಸ್ತಸರ್ಪ ಮೂಷಕ ದಷ್ಟ ||
ಸ್ಥಾನದೊಳೆ ಪೂಸೆ [11]ವಿಷದಭಿ |
ಧಾನಮದಾ(ನಾ)ಕ್ಷಣದೊಳೞಿಗುಮದು [12]ನಿಶ್ಚಯದಿಂ || ೧೩ ||

1. ಮಣಿಶಿಲೆಯುಂ ಕಸ್ತೂರಿ (ಗ) 2. ಳೋರೊಂದಮೆನಲ್ಕೆ ನಾಗಕೇಸರಮದನಂ (ಕ) 3. ದಿಲ್ಲವ (ಕ) ದೆಲ್ಲಮನೊಳ್ಪಿಂ ನೋಡಿಸದಕ್ಷ (ಗ) 4. ದೆಲ್ಲವುನರ್ಧಮ (ಘ) 5. ಚಂದ್ರಭಾಖ್ಯ (ಕ) 6. ವಂಧ್ಯಮಡುವಾಗ (ಖ) 7. ಕರಿಬಲೆಯಂ (ಕ) 8. ಪೊಸೆ (ಗ) 9. ವಿಷಂಕ್ಷಯ (ಖ) 10. ಸರ್ಪಂಕಡಿದೆ (ಘ) 11. ವಿಷದಭಿಧಾನಂ ಆಕ್ಷಣಮಳಿಗುಂ (ಘ) 12. ಸಿದ್ಧಾಂತಂ (ಕ) (ಖ)
* (ಗ) ಪ್ರತಿಯಲ್ಲಿಲ್ಲ.

ಕಂ|| ಬೆಲ್ಲದೊಡಗೂಡಿ ಸುಣ್ಣಮ |
ನಿಲ್ಲಣಮಂ ಪಾವು ಮುಟ್ಟಿದೆಡೆಯಂ ಸುತ್ತಲ್||
ನಿಲ್ಲದೆ ಪೂಸುಗೆ ವಾಣೀ[1] |
ವಲ್ಲಭನಿಷ್ಟಂ ವಿಷಾಪಹಂ ಸಱಿಯಕ್ಕುಂ || ೧೪ ||

ಕುಮುದಂ ಮಳಯಜ ಗೋಪಿ |
ತ್ತ ಮಾಂಸಿ ಸೈಂಧವ ರಸಾಂಜನಂ ಪಿಪ್ಪಲಿಯುಂ ||
ಕ್ರಮದಿಂದವೊಂದನೊಂದಿಸಿ |
ಸಮಂತ್ರಕಂ ಪೂಸೆ ಫಣಿ[2]ವಿಷಂಗಳ್ ಕಿಡುಗುಂ || ೧೫ ||

*[3]ಮಱಗಱಕೆ ಮೂಕೊಱ(ತಿ)ಭಾ |
ಸ್ಕರ ಚಿತ್ರಕ[4]ನುಗ್ಗಿ ತವಸೆ ಯಾರಗ್ವಧ ಕ[5] ||
ತ್ತರಿ ಬ್ರಹ್ಮದಂಡೆ ಬಿಲ್ವಂ |
ಗುರು ಮಂಡಲಮಾರಿ ಯೆಂಬಿವಂ ಕಲ್ಕಿಯಿಂದಂ || ೧೬ ||

*ಪರಿಮರ್ದಿಸಿ ಪೂಸಲ್ ಪಿಡಿ |
ದುರಗಂ[6]ಮೂಸಿದೆಡೆಗಂ ತಡೆಯದಾಕ್ಷಣ ಮು ||
ಬ್ಬರಿಸಿದ ಬಾವುಂ ತದ್ವಿಷ |
ದುರವಣೆಯುಂ ಕಿಡುಗು[7]ಮೆಂದಪಂ ಮಂಗಬುಧಂ || ೧೭ ||

ಉರಗಂ ಮೊದಲಾದ ಮಹಾ |
ಗರಳಂ ತದ್ವಿಷದ ಬಾವು ಜಳರೋಗಂ ಕಾ ||
ಸರಿಕೆಯ [8]ಬೆನ್ನೀರಿಂದಂ |
ಪರಿಹರಿಕುಂ ಪೂಸೆ ಕುಡಿಸೆಯುಂ ಗುಣನಿಲಯಾ || ೧೮ ||

ಸಾಲದೆ ಮಧುಘೃತ ಚಂದನ |
[9]ಚೀಲೈತಂ ಬಿಳಿಯ[10]ಬದ್ದವಂ ಮರ್ದಿಸಿ [11]ಪೂ ||
ಸಾಲಸ್ಯಮೇವುದಂತದು |
ಕಾಳೋರಗ [12]ವಿಷಮನಾದೊಡಂ ಸಂಹರಿಕುಂ || ೧೯ ||

---

1. ಸರಿಯಿಂದಂ. 2. ವಿಷಂಗುಣನಿಳಯಾ (ಕ) 3. ಮಂಗುಱಕೆ (ಕ) 4. ನುಗ್ಗಿಯಗಸೆ ಯಜ ಮೋದಂಕ || ಸ್ತುರಿದೇವದಾರು ಬಿಲ್ವಾಂ | ಗುರು(ಘ) 5. ಕತ್ತಗಿರಿ (ಖ) 6. ಮಿಡಿದೆಡೆಗೆತಡೆ(ಘ) ಮುರಿದೆಡೆಗೆ ತಡೆಯದಾಕ್ಷಣದೊಳಮು(ಖ) 7. ಮೆಂದನಪಗಚರಿತಂ(ಘ) ಮೆಂದನಪಗತದುರಿತಂ(ಖ) 8. ಬೇರಿಂದಂತಾಂ(ಘ) 9. ಟೀಲೈತಂ (ಗ) ಶೀಲೈತಂ ಶೈಲಕರ್ಣಿಯಂ (ಘ) ಚೀಲಯಿತಂ (ಖ) 10. ಬಿಳಿಯ ಬಡಮಣಿಯಂ ಮರ್ದಿಸಿ (ಖ) ಬಿಳಿಯಕಡಮ(ಘ) ಬಿಳಿಯ ಬಡಮೆ(ಮ್ಮ)ವರ್ಧ್ದಿಸಿ (ಕ) 11. ಪೂಸಾ(ಶಾ)ಲಸ್ಯ (ಗ) 12. ವಿಷಮುಹಾದರಂ (ಕ)

* (ಗ) ಪ್ರತಿಯಲ್ಲಿಲ್ಲ.



ಕಂ|| ಬಜೆ ಯತಿಬಜೆ ಯಂಕೋಲಂ |
ರುಜೆ ತಗರಂ [1]ಕಾಡೆಯುಂ ಹರಿದ್ರಮಿದೊಂದಲ್ ||
ವಿಜಯ[2]ಫಳಯೋಗಮಹಿವಿಷ |
ವೃಜಿನಮನಾಕ್ಷಣದೊಳಱಿಗುಮಿದು ಸಿದ್ಧಾಂತಂ || ೨೦ ||

ಪಿಪ್ಪಲಿ ಮೂಲಂ ಪಾಟಲಿ |
*ಯೊಪ್ಪುವ ಕಟುತ್ರಯಂ ಸಮಂ[3]ಗೊಂಡರೆ ಲೇ ||
ಸಪ್ಪ ಕಲ್ಕಿಯಿಂದೆ ಪೂಸ |
ಲ್ಕಿರ್ಪುದೆ ಫಣಿದಷ್ಟವಿಷಮದೇಂ ಕ್ಷಣಮಾತ್ರಂ || ೨೧ ||

ಕರ್ಕಟಕನ[4]ದರ ತಾಳಕ |
ಮರ್ಕನ ಸಿಫೆ ಕುನಟಿ ರಜನಿ ಕುಂಕುಮ [5]ಕಡಂದುಱು ||
ಹಿಕ್ಕೆಯ ಮಣ್ ಗೋಸುಂಬೆಯ |
ಹಿಕ್ಕೆಯ ನೊಂದಾಗಿ ಪೂಸಲಹಿವಿಷಮಱಿಗುಂ || ೨೨ ||

ಫಣಿಕೊಂಡ ತಾಣದೊಳಮಾ |
ಕ್ಷಣದೊಳ್ ಪೂಸುವುದು ಬೇಗದಿಂದೆಕ್ಕೆಯುಮಂ ||
ಕಣಿಗಿಲೆಯಂ [5]ಬೆರಸಿದೊಡದ |
ನಣುವಿಂ ಕಿಱಿದಾಗಿ ವಿಷಮದಱಿಗುಂ ಕ್ರಮದಿಂ || ೨೩ ||

ಚಂ|| ತರಿಸುವುದಿಂದ್ರವಾರುಣಿ ಸುಗಂಧಿಗಳಂ ಗಿರಿಕನ್ಯ(ರ್ಣಿ)ಕಾಖ್ಯಮಿಾ |
ಶ್ವರಿ ತಗರಂಗಳೆಂಬಿವನಹಸ್ಕರನೀಲಿ ಸುದೇವದಾಳಿಯಂ ||
ನಿರುಪಮಮಪ್ಪ ಕೈಪೆಸೊರೆಯಂ [6]ಭರದಿಂದರೆ(ವೆ) ಕಾಱುವೀರೆಯಂ |
ಬೆರಸವನೆಯ್ದೆ ಪೂಸುವುದು ಸರ್ಪವಿಷಾಪಹಮಿಾ ಧರಿತ್ರಿಯೊಳ್ || ೨೪ ||

ಕಂ|| ಎರಡರಿಸಿನ ತಿಲಸರ್ಷಪ |
[7]ಸುರಸಿ(ಗಿ) ಯ ಬೇರ್ ಸೋಮ[8]ರಾಜಿ ನಿಂಬದ ಬಿತ್ತಂ ||
ಪರಿಮರ್ದಿಸಿ ಪೂಸಲ್ ವಿಷ |
[9]ಧರಾದಿ ನಿಖಿಳೋಗ್ರತರವಿಷಂಗಳುಮಱಿಗುಂ || ೨೫ ||

†ಎರಡರಿಸಿನ ಮಿಾಶ್ವರಿ ಹ |
ತ್ತರಿಕೆ ಯಪಾಮಾರ್ಗ ಸೊಗಡೆ(ದೆ) ನೀಲಿ ಯಿವಂ ಶ ||
ರ್ಕರೆವೆರಸಿ ಪೂಸಲೊಡಮ |
ಚ್ಚರಿಯೇಂ ಫಣಿವೃಶ್ಚಿಕಾದಿ ವಿಷಮಿರಧ(ದಿ)ಱಿಗುಂ || ೨೬ ||

---

1. ಕಾಕೆಯುಂ (ಗ) ಕಾರೆಯುಂ(ಕ) ಕಾತೆಯುಂ (ಖ) 2. ವುಟಯೋಗಮಂವಿಷ (ಖ) ಫಲಯೋಗಮಹಿಕುಲ (ಘ) ಮಹಿವಿಷವೃಜನಮನಾಕ್ಷಣವೊಳಱುವುದಿದು ಸಿದ್ಧಾಂತಂ (ಗ) 3. ಗೊಂಡಿರೆ (ಗ) 4. ಕರವಾಳಕ ಮರ್ಕನ್ನ ಪೇರುರುಟಿಗ ಕುಂಕುಮಕಡದರಿಸಿಕ್ಕೆಯ ಮಣಿಸುಂಬೆಯ ಹಕ್ಕೆಯ (ಗ) ದರಕಾಳ 5. (ಖ) ಕಡದುರೆಗಿಕ್ಕೆಯ (ಘ) ದುರ್ವಿಕ್ಕೆ? 6. ಬೆರಸರದೊಡನಡುವಿಂ (ಕ) ಭರದಿಂದಲೆ ಕಾಳ್ವೀರೆಯಂ (ಗ) 7. ಸುರಶಿಯ (ಖ) 8. ರಂಜಿ (ಗ) ರಾಜನಿಂಬದ ಬಿತ್ತಂಮರಿಚಂ ಮರ್ದಿಸೆ (ಖ) 9. ಗಳನಖಿಳೋಗ್ರತರ (ಕ) ಧರವಿಷಮಳಿಗುಂ ವಿವೇಕ ಚೂಡಾರತ್ನಾ (ಘ)

* ಯೊಪ್ಪಂ ಮರ್ಕನಶೀಫಕುನಟಿರಜನಿ ಕುಂಕುಮ ಕಡಮಱುವಿಕ್ಕೆಯು ಮೇಱ್ ಗೋಸುಬೆಯೆಕ್ಕೆಯ (ಎಂದು ಗ್ರಂಥಪಾಠ ಎರಡುಕಂದಮಿಶ್ರ) (ಕ) † (ಗ) ಪ್ರತಿಯಲ್ಲಿಲ್ಲ.

ಕಂ|| ಗುರುಗುಂಜಿಯುಮಂ ಗುಡಮಂ |
ಪರಿಮರ್ದಿಸಿ [1]ಮಧುಘೃತಾನ್ವಿತಂ ಪೂಸುಗೆ[2]ಮೇ ||
ಣರೆದೀವುದು ಸಮುದ್ರಫಳವೊಂ |
ದಿರೆ[3]ಕುಳಿಮಾವಿನೊಳೆ ಕೞಿಯಿನಖಿಳವಿಷಘ್ನಂ || ೨೭ ||

ಎರಡರಿಸಿನಮೆರಡುಂ ಬಜೆ |
ವೆರಸಿರ್ದಭಯಂ ವಸಂತಪುಷ್ಪಂ [4]ರುಜೆಯಂ ||
ತರದೊಳಿರಲರೆದು ಪೂಸಲ್ |
ಗರುಡಮಿತಂ ವಿಷಧರಾದಿಗಳ ವಿಷಮೞಿಗುಂ || ೨೮ ||

*ವಿಳಸತ್ಸೈಂಧವ ಲೋಧ್ರಂ |
ಶಿಳೆ ಕುಂಕುಮರೋಚನಂಗಳೆಂಬಿವನಿಂಬಿಂ ||
[5]ದಲತಗೆಯ ರಸದೊಳರೆದಂ |
ತಲಸದೆ ಪೂಸುವುದಶೇಷವಿಷಮಿರದೞಿಗುಂ || ೨೯ ||

ಎರಡರಿಸಿನ ಕುಂಕುಮ ಶಿಲೆ |
ಯರಿದಾಳಂ ಕುಸುಬೆಯೆಂಬಿವಂ ನೀರಿಂದಂ ||
ಪರಿಮರ್ದಿಸಿ ಪೂಸಲೊಡಂ |
ಪರೆಗುಂ ಪಲತೆಱದ ಪಾವಿನುಗ್ರವಿಷಂಗಳ್ || ೩೦ ||

*ಗೃಹಧೂಮ ಮೇಘ[6]ನಾದಿಯು |
ಮಹಿಷಾಕ್ಷಿಯುಮಂಗುರೆಂಬಿವಂ ಗೋಮೂತ್ರಂ ||
ಸಹಿತಮೆನಲರೆದು ಪೂಸ |
ಲ್ಕಹಿಗಳ ಪಲತೆಱದ [7]ವಿಷಗಳೇಂ ನಿಂದಪುವೇ || ೩೧ ||

*ಸೆ(ಸಿ)ೕಗುಡಿತೆಯ ಮುಳ್ ಕೊಗ್ಗಿಯ |
ದಾಗುಡಿ ಚಿತ್ತರಟೆ [8]ಪಾಪಡಿಗಳೆಂಬವಱೊಳ್ ||
[9]ಪ್ರಾಗುಕ್ತ ಮೂಲಮಿರದರೆ |
ದಾಗಳ್ ಖರಮೂತ್ರಲೇಪಮಲ್ತೆ ವಿಷಘ್ನಂ || ೩೨ ||

*ವಿಲಸನ್ಮರಿಚಂ ಕಣ ನಾಂ |
ಗುಲಿಯೊಪ್ಪುವ ಕಂದ ಪಾಟಲಿಯ ಮೂಲಮನಂ ||
ಬಿಲದಿಂದಮರೆದು ಪೂಸಲ್ |
ತೊಲಗುಗುಮಾ [10]ಕಾಲದಷ್ಟವಿಷಮುಂ ಕ್ಷಣದಿಂ || ೩೩ ||

1. ಮಧುಗ್ರತಾನ್ವಿತಂ (ಗ) 2. ಮೇಣರೆವುದು ಸಮುದ್ರಫಳವೊಂದಿರೆಪುಳಿಮಾವಿ (ಕ) (ಘ) 3. ತುಳಿಮಾವಿನೊಳೆ ಕಳಿವುನಖಿಳ (ಗ) 4. ಬಜೆಯುಂ (ಗ) 5. ದಲತಗೆರಸದೊಳರೆದುದ ನಲಸದೆ—ದಶೇಷಫಣಿ ವಿಷಮಿೞಿಗುಂ (ಗ) 6. ನಾದಿಗಳ್ (ಖ) ಗೃಹಧೂಮಂ ಮೇಘುರವಂ | ಮಹಿಸಾಕ್ಷಿಯುಂಗುರೆಂಬಿವ (ಘ) ನಾದಳ್ಮ (ಕ) 7. ವಿಷಮುದೇಂ (ಕ) 8. ಪಾಟೆಯೆಂಬಿವಱ ಪ್ರಾಗುಸ್ಥ (ಖ) ವೆಪಲೆಯೆಂಬಿವರೀ (ಕ) 9. ಪ್ರಾಗ್ಗತಮೂಲಮನಿರದರೆದಾಗಳ್ ನರ (ಖ) 10. ಕಾಲಸರ್ಪವಿಷ ಮಾಕ್ಷಣ (ಘ)
* (ಗ) ಪ್ರತಿಯಲ್ಲಿಲ್ಲ.



ಕಂ|| *ಇನದುಗ್ಧದ ಮುತ್ತದ ಬಿ |
ತ್ತಿನ ತಿರುಳುಮನೇೞುಸೂೞ್ ಭಾವಿಸಿದುದನಿಂ ||
[1]ಬಿನೊಳುದಕದಿಂದೆ ಲೇಪಿಸೆ |
ಘನವೆನಿಸುವ ವಿಷಧರಾದಿಗಳ ವಿಷಮೞಿಗುಂ || ೩೪ ||

ಸೂರಣದ ಕಂದಮಂ ಜಂ |
ಬೀರರಸಂಗೂಡಿ ಯರೆವುದಿಲ್ಲಣಸಹಿತಂ ||
ಪಾರದೆ ಪೆಱವಂ ಲೇಪಿಸೆ |
[2]ಘೋರೋರಗವಿಷಮನೞಿಗುಮದು ನಿಶ್ಚಯದಿಂ || ೩೫ ||

*ರವಿಯೊಪ್ಪುವ [3]ಪಣ್ಣೆಲೆಯು |
ದ್ಭವರಸಮರುಠಾಳದೆಸೆವ ಬಿತ್ತುಂ ಮುಸ್ತಾ ||
ಲವಣಮಿದೊಂದಿರೆ ಲೇಪಿಸೆ |
ತವಕದೊಳಂ ಭವನ ಕೊರಳ ಗರಳಂ ಪರೆಗುಂ || ೩೬ ||

ಮ||ಸ್ರ|| ಮಡುವಾಗಲ್ [4]ನೀಲಿ ಪಾತಾಳ ಗರುಡಮೆಸೆವಂಕೋಲೆ ಚಾಂಪೇಯಮೊಂದಾ |
ದೊಡೆ ಧಾತ್ರೀಮೂಲಮುಂ[5]ಕಾಸರಿಕೆಯ ಫಲಮುಂ ಕೌಡೆಯುಂ ಮಾ(ಕೂ)ಡಿ[6]ಬಂದಂ|
ದೊಡಗೂಡಲ್ ಚಿನ್ನಧಾರಾಪ್ರಥಿತ[7]ದುಗುನೆಯೊಳ್ಪತ್ರಮಿಾ ಪತ್ತುಮಂ ಕೂ |
ಡಿಡು ಜಂಬೀರಾಂಬುವಿಂ ಲೇಪಿಸೆ ಬರ್ದುಕುಗುಮಾ ಕಾಲದಷ್ಟಂ ಬುಧೇಷ್ಟಾ|| ೩೭ ||

ಕಂ|| [8]ಬೆಱನೆರಡರ ಬೇರ್ಗಳುಮಂ |
[9]ಕೞಿಯಿಂದಿರದರೆದು ಪೂಸುಗಂತಲ್ಲದೊಡಂ ||
[10]ಬೆಱಲೊಪ್ಪುವ ಬಂದಣಿಕೆಯ |
ನಳವಡೆ ಪೂಸುವುದು ಜೀವಿಕುಂ ಫಣಿದಷ್ಟಂ || ೩೮ ||

[11]ಆವರೆಯೆಲೆಯಂ ಕೞಿಯಿಂ |
ಭಾವಿಸಿ [12]ದಷ್ಟಂಗೆ ಪುಣ್ಗೆ ಲೇಪಿಸಲೞಿಗುಂ ||
ಪಾವಿನ ವಿಷಮೆಂದಖಿಳಧ |
ರಾವಳಯದೊಳಱಿಯೆ ಪೇೞ್ದನುಭಯಕವೀಂದ್ರಂ || ೩೯ ||

ಸಿತಮೆನಿಸಿದ ತುಱುವೆಯನಾ |
ಹತ[13]ಮಿಲ್ಲದ ನೀರೊಳರೆದು ಪಾವಿನ ದಂತ ||
ಕ್ಷತದೆಡೆಯಂ [14]ಪೂಸುವುದೀ |
ಕ್ಷಿತಿಯೊಳಿದೊಂದಲ್ತೆ ನಿರ್ವಿಷಂ ಗುಣನಿಳಯಾ || ೪೦ ||

1. ಬಿನೊಳುದಕದಿಂ ಲೇಪಿಸೆ ಘುಮ್ಮನಿಸುವ (ಖ) 2. ತವಕದೊಳಂ ಭವನ ಕೊರಳಗಳಂ ಪರೆಗುಂ (ಖ) 3. ಪಣ್ಣೆಲೆಗಳ್ ಭವದವಸದರುಠಾಳಾದೇವಬಿತ್ತುಂ (ಖ) 4. ನಿಲೆತಾಳ (ಕ) 5. ಕಾರಸೆಯ ಕಾಯ್ಗಳುಂ ಕೌಟೆಯುಂ (ಗ) (ಕ) 6. ಬಂದೊಡ (ಕ) 7. ದುಗುವೆಯೊಳ್ ಪತ್ರಹೀಪತ್ತುಮಂ (ಕ) ಚಿನ್ನದಾರೆಪ್ರತಿತದುಗುನೆತಯೊಳಿತ್ತಮಂಚಿ ಮಿಪ್ಪತ್ತುಮಂ (ಗ) 8. ಬೆರನೆರಡರ (ಖ) ಬೆಱನೆರದರ (ಕ) ಬೇರಲೆರಡರ (ಗ) 9. ಕಳಿಯಿಂದರೆದು (ಖ) 10. ಬೆರಸೊಪ್ಪುವ (ಖ) ಡಾಬೆಳ (ಗ) ಯಿಂದರದೆಯ್ದ್ದ (ಗ) 11. ಯೆಲೆಯುಂ ಕಳಿಯುಂ (ಗ) 12. ದಷ್ಟಂಗೆಲೇಪಿಸೆ (ಖ) 13. ಮಿಲ್ಲನೀರೊಳ (ಗ) 14. ಪೂಸೂದೀ (ಕ) * (ಗ) ಪ್ರತಿಯಲ್ಲಿಲ್ಲ.

ಕಂ|| ದಿನಕರವಾರದೊಳಂ ಗರ್ದು |
ಗಿನ ಬೇರಂ ತಕ್ರದಿಂದೆ ಮರ್ದಿಸಿ ಪೂಸಲ್ ||
ದಿನಪಗಿ[1]ದಿರಾದ ಕೞ್ತಲೆ |
ಯನಿತುಂ ಪರೆವಂತೆ ಪರೆಗು [2]ಮಹಿಯುಗ್ರವಿಷಂ || ೪೧ ||

*ಪರಿಕಿಸಿ ನೀಂ ಮರ್ದುಗಳಂ |
[3]ಪರಿದಱಸಲದೇಕೆ(ನೊ) ಕಿವಿಯ [4]ಕೊಗ್ಗಿಯುಮಂ ಕೊಂ ||
ಡಿರದತಿವೇಗದೆ ಪೂಸಲ್ |
ಪರೆಗುಂ[5]ಫಣಿವಿಷಮುದಮಳಗುಣಗಣನಿಳಯಾ || ೪೨ ||

ಏನಣ್ಣ ಪಲವು ಮರ್ದಂ |
ಜಾನಿಸದತಿ[6]ಶೀಘ್ರಮೆಸೆವ ಪಲ್ಗಳೊಳಿರ್ದಾ ||
[7]ಕೀನಿಯುಮಂ ಪೂಸಲೊಡಂ |
[8]ಸೂನೃತಮಿದು ಸರ್ಪಕುಳದ ವಿಷಮಿರದೞಿಗುಂ || ೪೩ ||

[9]ಕೆಂಕರಿಸಿಯುಗುೞ್ದ ಮಣ್ಣಂ |
ತಾಂ ಕಲಸಿಯೆ ನಿರ್ವಿಷಾಮಿ(ದಿ)ದೆ(ಯೆ)ಂಬಕ್ಕರಮಂ ||
[10]ತ್ರಾಂಕದವುಷಧಿಯ ಪೂಸುಗೆ |
[11]ಮಾಂಕರಿಸದಿರಲ್ಕೆ ಸರ್ಪವಿಷಮಿರದೞಿಗುಂ || ೪೪ ||

ಚಂ|| ಮೊಲಕಿವಿ ಕಲ್ಲನಾರು ದಧಿಫೇನ ಸಣಂಬಿನ ಬೀಜ[12]ಕಾಚು ಕು(ಕೊ) |
ಗ್ಗಿಲ ವರ [13]ಛತ್ರಕಂಗಳನೆ ಮತ್ತೆ ಕುಱಂಟಗೆ ಯೊಳ್ಳಿದಪ್ಪ [14]ಸ |
ದ್ದಲರಸದಿಂದೆ ಮರ್ದಿಸಿರಲಂತು ಬೞಿಕ್ಕಹಿ[15]ದಷ್ಟನಾ ಕ್ಷತ |
ಕ್ಕಲಸದೆ ಮೂತ್ರಕಾಚಲವಣಂ ಬೆರಸಲ್ಕದೆ ಪೂಸೆ ನಿರ್ವಿಷಂ || || ೪೫ ||

ಕಂ|| ಮಳ[16]ಯರುಹ ರಸಾಂಜನಮು |
ತ್ಪಳಮಧುಕಂ ಮಾಂಸಿ [17]ಮಾಗಧಂ ಗೋಪಿತ್ತಂ ||
ನೆಲೆಗಿಡಿಕುಂ ಫಣಿವಿಷಮಂ |
ಜಲದಿಂ[18]ದರೆ ದೊಡನೆ [19]ಪೂಸಲಿವನಾಕ್ಷಣದಿಂ || ೪೬ ||

---

1. ನಿದಿರಾಗಿ (ಕ) 2. ಮಹಿವಿಷಮನಿತುಂ (ಕ) 3. ಪರಿದಱಸಲದೇನೊ (ಖ) 4. ತುಗ್ಗಿಯುಮಂ (ಗ) 5. ಫಣಿಯವಿಷಮುಮಳಗುಣ (ಕ) 6. ಶೀಘ್ರದಿಂದೆ. 7. ಕೀಣಿಯುಮಂ (ಕ) 8. ಸೂನೃತ ಮೆನೆ (ಘ) 9. ಕೇಕರಿಸಿ (ಗ) (ಖ) 10. ಲಾಂಕಟವುಷಧಿಯ (ಗ) ಮಂತ್ರಾಂಕದಿನೌಷಧಿಯ (ಖ) 11. ತೂಂಕಡಿಪನಿತ ಱೊಳೆ(ಘ) 12. ಕಾಕುತುಗ್ಗಿ(ಕ) ಸಂಕೊಂಬಿನಬೀಜ ಕಾಚುತುಗ್ಗಿಲ(ಗ) 13. ಪತ್ರಂ ಗಳನೆ (ಕ) 14. ಸುಜ್ಜಲರಸ (ಗ) 15. ದಷ್ಟನ ತತ್ ಕ್ಷತ (ಗ) 16. ಮಳಯರ್ಹ ರಸಾಂಜನಮುಪ ತ್ಪಳ (ಖ) 17. ಮಾಗಲದಂ (ಗ) 18. ದಿಂದ ಮರೆದುಪೂ (ಖ) 19. ಪೂಸಲಂತಾಕ್ಷಣದೊಳ್(ಖ)

* (ಘ) (ಕ) ಪ್ರತಿಗಳಲ್ಲಿಲ್ಲ.



ಕಂ|| *ಅಗುರೆಲವ ಮಧುಕ ಮಂಜಿ |
ಷ್ಠೆಗಳರಿಸನ ಮಾಂಸಿಯಂ ಜಲಾನ್ವಿತಮಂ ಮಾ ||
ಡುಗೆ ಲೇಪನ ನಸ್ಯಮುಮಂ |
[1]ಖಗರಾಜನ ಮಾೞ್ಕೆಯಿಂದಮಿೞಿಕುಂ ವಿಷಮಂ || ೪೭ ||

ಘೋರೆಂದು ಬಂದು ರೌದ್ರಾ |
ಕಾರದೊಳಂ ಪಿಡಿಯೆ ಸರ್ಪನಾಕ್ಷಣದೊಳ್ ತ ||
ಣ್ಣೀರಿಂದೆ ವೃಶ್ಚಿಕಾಳಿಯ |
ನೋರಂ[2]ತಿರದರೆದು ಪೂಸೆ ನಿರ್ವಿಷಮಕ್ಕುಂ || ೪೮ ||

*ನೀರಿಂ ಕಳ್ಳಂಗಡಲೆಯ |
ಬೇರಂ ತಂದರೆದು ಪೂಸೆ ನಿರ್ವಿಷಮಕ್ಕುಂ ||
ಪಾರದೆ ಪೆಱವಂ ಕೞಿಯಿಂ |
ಹೇರೀಚಲ ಪೂವನರೆದು ಪೂಸಲ[3]ವದ್ಯಂ || ೪೯ ||

ಆರಿಂದಮರಿದು ಬಾರಿಪ |
ರಾರೆಂದೆಲ್ಲರ್ಗೆ[4]ಬಾಯ ಬಿಡುತಿರದಾಗಳ್ ||
ನೀರಿಂ ಮಡುವಾಗಲ ನರೆ |
ದಾರಾನುಂ[5] ಲೇಪಿಸಲ್ಕೆ ಫಣಿವಿಷಮೞಿಗುಂ || ೫೦ ||

## ಶಿರೋದ್ವರ್ತನಂ

ಕಂ|| ಮರಿಚಮುಮಂ ಜೇಪಾಳದ |
ತಿರುಳಂ ಪ್ರತ್ಯೇಕ[6]ಮೇೞುಮಿಲಿಮಿಚ್ಚ್ಯ ಪ ||
ಣ್ಣರಿದೊಂದುಭಾಗದೊಳಗಿ |
ಟ್ಟಡಿಸುವುದತ್ಯುಗ್ರಮಪ್ಪ ಬಿಸಿಲೊಳ್ ಬೞಿಯಂ || ೫೧ ||

ಅನಿತು [7]ಪುಳಿಯೆಱೆಯಲೆಱೆವು |
ತ್ತನಿ[ತನಿ]ತನೆ [8]ಬರ್ಪುದೆಯ್ದಲೇೞ್ಪಣ್ಣ ರಸಂ ||
ಇನಿಸುೞಿಯದೆ ಪದನಱಿದಂ |
ತನಿತುಮನಜಪಿತ್ತದಿಂದೆ [9]ಮರ್ದಿಸಿ ವಿಧಿಯಿಂ || ೫೨ ||

---

1. ಖಗರಾಜ ಸಮಾನಲೇಪನಮಿಂತಿದು ಸಿದ್ಧಂ (ಖ) (ಘ) ಬಿಗರಾಜನ (ಗ) 2. ತಿರಲದುಪೂಸೆ (ಕ) 3. ಲವಂಧ್ಯಂ (ಖ) 4. ಬಾಯಬಿಡುವನಿತಱೊಳಂ (ಘ) ಬಾಯಬಿಡುತಿರಲಾಗಳ್ ನೀರಿಂದಮಡು (ಗ) 5. ಲೇಪನಕ್ಕೆ (ಖ) ಲೇಪಮಿಕ್ಕೆ ವಿಷಮಿರದೞಿಗುಂ (ಕ) 6. ಮೆಳನಿಲುನಿಲುಮುಚ್ಚ್ಯಯ (ಗ) ಮೆಳಗಿಲು ಮುಚ್ಚ್ಯಯ (ಕ) ಮೆಳು ಇಲುಮುಚ್ಚ್ಯಯ (ಖ) 7. ಪುಳಿಯೆರೆಯಲೆರೆಯುತ್ತನಿತನಿತನೆ (ಗ) ಲೆರೆಯಲೆರೆ ವುದು ಮತ್ತನಿ (ಖ) 8. ಬರ್ಪುದಂತುಮೇಶ್ ಪಣ್ಣರಸಂ (ಘ) ಬವುದೆಯ್ದಲೆಳ್ಸಂಣರಸಂ ಆಗಿಸುಳಿಯದೆ ಪದ (ಗ) ಬರ್ಪುದಿಯೆಲೆಪ್ಸರ್ಣಂಣರಸಂ (ಖ) 9. ಭಾವಿಸಿ (ಘ)

* ಈ ಪೂರ್ವಾರ್ಧ "ಗ" ಪ್ರತಿಯಲ್ಲಿಲ್ಲ.

ಕಂ॥ ಭಾವಿಪುದಜಪಿತ್ತದೊಳಂ |
[1]ಪಾವಡಿಯೊಳ್ ಕಟ್ಟಿ ಪೊಗೆಯೊ[2]ಳಿಟ್ಟುದನಿಂಬಿಂ ||
ಪಾವಡದರ್ಘ ಪಿಡಿಯೆ ಮಯ್ಮಱೆ[3] |
ದಾವಂಗಂ ಮಾಱ್ಪುದೊಂದು ಚೋದ್ಯಮನುಸಿರ್ವೆಂ || ೫೩ ||

ಸತ್ತನಿವನೆಂಬ ಪದದೊಳ್ |
ನೆತ್ತಿಯೊಳಂ ಶಸ್ತ್ರದಿಂದೆ ಸೊದೆ[3]ವೊಯ್ದೆಡೆಯೊಳ್ ||
[4]ನೆತ್ತರುಮುಣ್ಮೆ ನಮದನಿರ |
ದೊತ್ತುಗೆ ಪುಳಿಯಿಂದೆ ಮೂರ್ಛೆ[5]ವೋದಂ ಬಱಿಯಂ || ೫೪ ||

ನೋಡುವ[6]ನೆಲ್ಲರೊಳಂ ಮಾ |
ತಾಡುವ ನೆಟ್ಟನೆ ಱುವ [7]ನೇಱುವಂ ನಡೆವಂ ತಾಂ ||
ನೋಡಿರೆ ಚಿತ್ರ[8]ಮನೆಂಬರ್ |
ನಾಡೆಲ್ಲಂ ಮರ್ದಿದರ್ಕೆ ದೊರೆ ಪೇೞುತುಂಟೇ || ೫೫ ||

ಪಸಿಯದೆನಿಸಿರ್ಪ ಪೊಸಕ್ಕೈ |
ಪೆಸೊರೆಯ ಕಾಯೊಳಗೆ ಲವಣಮಂ ಬೆರಸಿಯದಂ ||
ಮಿಸುಪರ್ಕ [9]ದುಗ್ಧದಿಂ ಭಾ |
ವಿಸಿ ಮಡಗಿರಲಹಿ[10]ತಮಪ್ಪ ಮಹದಹಿ ಪಿಡಿಯಲ್ || ೫೬ ||

[11]ಸೊದೆ ವೊಯ್ದಾಮ್ರಸಮೇತಂ |
ವ್ಯಥಿತನ ನೆತ್ತಿಯೊಳಮೊತ್ತಲಂತಾ ವಿಷಮುಂ ||
[12]ವ್ಯಥೆಯಾಗಿಯೆ ಪೋಕುಂ ತ |
ತ್ಪೃಥುತರವಹ ಮೂರ್ಛೆ[13]ತಿಳಿವುದಂತಾಕ್ಷಣದೊಳ್ || ೫೭ ||

ಫಣಿಕೊಂಡು [14]ಬಿದ್ದ ನರನಾ |
ಕುಣಪನವೋಲಿರಲಮೋಘಮೊಪ್ಪುವ ಲಶುನಂ ||
ಮೆಣಸುಪ್ಪುಶುಂಠಿ ಗರ್ದುಗಿ |
ಲ್ಲಣ ಹುಲಿಗಿಲಿವಂ ಸರಾಗ[15]ಮರೆದಿರೆ ಕಱಿಯಿಂ || ೫೮ ||

ಅಲಸದಿರೊಯ್ಯನೆ ಪೊಯ್ವುದು |
ತಲೆಯೊಳ್ [16]ಶತೆಯಂ ಬಱಿಕ್ಕೆ ನೆತ್ತರ್ ಬರಲಾ ||
ವಿಲಚಿತ್ತನಾಗದಂತಾ |
ವಿಲಸದ್ಯೋಗಮನೆ ಪೂಸ[17]ಲಾತಂ ಬಾೞ್ಗಂ || ೫೯ ||

---

1. ಪಾವಟಿಯೊಳ್. 2. ಳಿಟ್ಟೊಡನಿಂಬಿಂ (ಖ) 3. ಹೊಯಿದೆಡೆಯೊಳ್ (ಗ) ಶತೆಹೊಯಿ (ಕ) 4. ನೆತ್ತರುಳ್ಮ ವಿನ(ಲ)ದಗಿಲ್ತೊತ್ತುಗೆ (ಕ) ಣ್ಮ ವಿನದನೀರದೊ (ಗ) ನೆತ್ತರುಣ್ಮ ವಿನದಮುದನಿರದೊತ್ತುಗೆ(ಘ) 5. ಯೋದಿಂಬಱಿಯಿಂ (ಕ) 6. ನೆಲ್ಲರೊಡಂ (ಗ) 7. ನೇಱುವಂತಾಂ ನೋಡಿರೆ (ಗ) 8. ಚಿತ್ರಮಿದೆಂಬರ್ (ಗ) (ಖ) 9. ದುಗ್ಧಯುತಭಾವಿಸಿ (ಗ) (ಖ) 10. ಲಹಿತಮುಹದಹಿ (ಗ) 11. ಶತೆ ವೊಯ್ದಾ (ಘ) ಸೊದೆ........ವ್ಯಥಿ (ಕ) ಸೋಥೆಹೊಯಿದಾಂಬ್ರಸ (ಗ) 12. ವಿಥಿಯಾಗಿಯೆ (ಖ) 13. ತಿಳಿಗುಮಂತಾ (ಕ) (ಗ) 14. ಬಿದ್ದ (ಗ) 15. ಮದೆಯ್ದಿರೆ (ಗ) 16. ಸೊಥೆಯಂ (ಕ) ಸೋದೆಯಂ (ಗ) ಸೆಡೆಯಂ (ಖ) 17. ಲಂತವನೇೞ್ಗಂ (ಘ)



ಕಂ॥ ಸತ್ತನಹಿಕೊಂಡು [1]ದೆಂದಾ |
ಪೊತ್ತೊಯ್ದು ಚಿತಾಗ್ನಿಯಲ್ಲಿ ಸಂಧಿ[2]ಸುವೆಡೆಯೊಳ್ ||
[3]ಮತ್ತಿನಿಸದೊಂದು ನಯಮಂ |
ಬಿತ್ತರಿಸುವೆನವನ ತಲೆಗೆ [4]ಶತೆವೊಯ್ದೊಲವಿಂ || ೬೦ ||

[5]ರಸಮಂ ಪೆರ್ಬೂಲಿಯ ತನಿ |
ರಸದಿಂ ಮರ್ದಿಸಿ ಬಱಿಕ್ಕ ದಷ್ಟನ[6]ಸಿರದೊಳ್ ||
ಬಿಸುಪೆಸೆಯೆ ತೇದು ಸಗಣದೊ |
ಳಿಸೆವಿನೆಗಂ ಕಟ್ಟುಗಟ್ಟಿ ಭಾವಿಸಿ ಬಱಿಯಂ || ೬೧ ||

ಸಾಸಿವೆ ಮೆಣಸುಳ್ಳಿಯ ನರೆ |
[7]ದಾಸಗಣದ ಕಟ್ಟಿಯೊಳಗೆ ಮೂತ್ರಯು[8]ತಂ ಪೊಯ್ ||
ಕಾಸಿದ ಕುಬ್ಬುರ್ನಮಂ ತಂ |
ದಾ ಸರಿಸದೊಳೊಪ್ಪೆ ಪಿಡಿಯಲಂತವ ನೇ[9]ೞ್ಗಂ || ೬೨ ||*

[10]ತಪ್ಪುವೊಡೆ ರಾಮಬಾಣಂ |
[11]ತಪ್ಪುವೊಡಾ ಭರತನಾಜ್ಞೆ ಗಣಧರಸೂಕ್ತಂ ||
ತಪ್ಪುವೊಡಂ ತಪ್ಪದೆ ತಾ |
ನಪ್ಪುದು ಗರುಡಾಧಿಪಕ್ರಿಯಾಖ್ಯಮಿದಿಳೆಯೊಳ್ || ೬೩ ||

---

1. ದೆಂದುಂ. (ಕ) 2. ಸಿದೆಡೆ. (ಕ) ಪುದೆಡೆ (ಖ) 3. ಮತ್ತೆಸೆವುದೊಂದು ನಯಮಂ ಬಿತ್ತರಿಸುವುದವನ (ಕ) 4. ಸೊಥೆವೊಯ್ದೊಲವಿಂ (ಖ) ಸೊಥೆಹೊಯಿದೊಲವಿಂ (ಗ) 5. ಸರಮಂ ಪೆರ್ಬಲಿಯ (ಖ) ರಸಮುಂಪೆರ್ಬೂಲಿಯ (ಗ) 6. ಶರೀರದೊಳಿಸುಪೆಸೆಯ ತೇದು. 7. ದಾಸನಗಣದ ಕಲೆಯೊ (ಕ) ದಾಶಗಣದ (ಘ) 8. ಯುತಂಪೊಯಿಸಿದ ಕಬ್ಬುರ್ನಮಂ (ಕ) 9. ವನೆಲ್ಗಂ (ಗ) 10. ತಪ್ಪುವುದೆ (ಗ) 11. ತಪ್ಪುವಡಂ (ಗ)

* ವ॥ ಈ ವೈದ್ಯಗ್ರಂಥದ ಫಲ ಆ ಫಲಂಗಳೆಂದು ಜಾನಿಸುವ ಮಾಂತ್ರಿಕ ಪಂಡಿತಜನಂಗಳಿಗೆ ನಿದರ್ಶನಮಂ ಪೇೞಲ್ಪಟ್ಟುದದೆಂತೆಂದೊಡೆ ಕಂ॥ ತಪ್ಪುವುದೆ....(ಗ)

[1]ಮ॥ಸ್ರ॥ ಇದಮೋಘಂ ವೈದ್ಯಶಾಸ್ತ್ರಾರ್ಣವದೊಳೆಸೆವ ತತ್ಸಾರಮಂ ಸ್ವಲ್ಪಮಂ ಪೇ |
ೞ್ದ ದಯಾಂಭೋ[2]ರಾಶಿ ಮಂಗಂ [3]ತಿಳಿಪಿದನಿಳೆಗಂ ನೋೞ್ಪೊಡಾರಯ್ದು ನಿಚ್ಚಂ ॥
ಮುದದಿಂದಂ ಮಾೞ್ಪುದಿಂತೀ ಕ್ರಿಯೆಗ[4]ಳನೆಸೆವೀ ಲೇಪನಾಖ್ಯಂಗಳಂ ಪೆಂ |
ಪೊದವಲ್ ಧರ್ಮಾರ್ಥಕಾಮಂಗಳ [5]ನೞಸುವವಂ ಸರ್ವಲೋಕೈಕಮಾನ್ಯಂ ॥ ೬೪ ॥*

— ಗದ್ಯ —

ಇದು

ಸಕಲವಿದಮಲ ಜಿನೇಂದ್ರೋಕ್ತಸಿದ್ಧಾಂತಪಯಃಪಯೋನಿಧಿಪಾರಗ
ಶ್ರೀಪೂಜ್ಯಪಾದಮುನೀಂದ್ರ ಚಾರುಚರಣಾರವಿಂದ
ಗಂಧಗುಣಾನಂದಿತಮಾನಸಂ
ಶ್ರೀಮದಖಿಲಕಳಾಗಮೋತ್ತುಂಗ
**ಮಂಗವಿಭು**
ವಿರಚಿತಮಪ್ಪ

## ಖಗೇಂದ್ರ ಮಣಿದರ್ಪಣದೊಳ್

[6]ಲೇಪನಾಧಿಕಾರಂ
ಅಷ್ಟಮಂ.
(ಮಂಗಳಮಹಾಶ್ರೀ.)

1. ಮತ್ತೇಭವೃತ್ತ (ಗ) 2. ರಾತಿ (ಗ) 3. ತಿಳಿಪಿದುದಿಳೆಗಂ ನೋೞ್ಪುದಾರಯ್ದು (ಗ) 4. ಗಳನೆ ವಿಲೇಪನಾಖ್ಯಂಗಳೊಳಂ ಪೆಂಪೊದವಲ್ಧರ್ಮ (ಗ) 5. ನರಿಸುವವ (ಗ) 6. ನಿರ್ವಿಷೀ (ಶೀ) ಕರಣದಮಲೇಪನ ಶಿರೋದ್ವರ್ತನಾಧಿಕಾರಂ ನಾಮಾಷ್ಟಮಾಶ್ವಾಸಂ ಸಮಾಪ್ತಮಾದುದು (ಗ) ನಿರ್ವಿಷೀಕರಣ ಲೇಪನಾಧಿಕಾರಂ ಅಷ್ಟಮಂ (ಕ) ಲೇಪನ ಶಿರೋದ್ವರ್ತನಾಧಿಕಾರಮಷ್ಟಮಾಶ್ವಾಸಂ ಸಂಪೂರ್ಣಂ (ಘ), ನಿರ್ವಿಷೀಕರಣ ಲೇಪಾದಿ ಅಷ್ಟಮಂ (ಖ)

* ಈ ಅಧಿಕಾರದ ಅಂತ್ಯದಲ್ಲಿಯೂ ಮಾಳಿನೀವೃತ್ತವಿಲ್ಲ.

# ನವಮಾಧಿಕಾರಂ

### [1]ಅಂಜನ ಪಾನ ನಸ್ಯ ಲೇಪನಪ್ರಕರಣಂ.

ಕಂ॥ ಶ್ರೀಲಲಿತ ಶಕ್ರಮಣಿಮಯ |
ಮೌಲಿಮಹಾಕಿರಣ ವಾರಿಧಾರೆಗಳಿಂದಂ ॥
ಕ್ಷಾಲಿತ [2]ಪದಯುಗನುಭಯ |
ಶ್ರೀಲಲನಾಕಾಂತ ಶಾಂತಿ ರಕ್ಷಿಸುಗೆಮ್ಮಂ ॥ ೧ ॥

ಮುಂ ಪೇೞ್ದಂ ಪಾನಾದಿಗ |
ಳಂ ಪಿರಿದುಂ ಸ್ಪಷ್ಟಮಪ್ಪಿನಂ ಪ್ರತ್ಯೇಕಂ ॥
[3]ಸೊಂಪೆಸೆಯಲ್ಕೆಲ್ಲಾ ಕ್ರಿಯೆ |
ಗಂ ಪುದುವೆನಿಸಿರ್ಪ ಯೋಗಮಂ ಪ್ರಕಟಿಸುವೆಂ ॥ ೨ ॥

[4]ಅನುಯೋಗಚತುಷ್ಟಯಭಾ |
ವನೆಯಿಂ ಭವವಿಷಮದೆಂತು ಪರೆಗು ಮದಂತಂ ॥
[5]ಜನ ನಸ್ಯಂ ಪಾನಂ ಲೇ |
ಪನದಿಂ ಖಳಫಣಿಕುಳೋಗ್ರವಿಷಮುಂ ಕಿಡುಗುಂ ॥ ೩ ॥

ಆನೆ ರಥ [6]ಕುದುರೆ ಕಾಲಾಳ್ |
ಸೇನೆಯೊ[7]ಳೊಂದೊಂದಮಿತ್ರಬಲಮಂ ಜಯಿಸಲ್ ॥
ತಾನದೆ ಸಾಲ್ಗುಮೆ[8]ನಲ್ಕೆ |
ನ್ನಾ ನಾಲ್ಕುಂ ಬಲ[9]ಸಮೇತದಿಂ ತೀರದುದೇಂ ॥ ೪ ॥

*ಅದಱಂ[10]ಪಾನಾಂಜನ ನ |
ಸ್ಯದ ಲೇಪನದೆಸೆವ ವಿಧಿಗೆ ಯೋಗ್ಯಮೆನಿಪ್ಪೊ ॥
ಳ್ಪಿದುವಪ್ಪ ಯೋಗಮಂ [11]ಪೇ |
ೞ್ವುದೆ ತಾಂ ಕರ್ತವ್ಯಮೆಂದು ಮತ್ತಱಿಪುವೆನಾಂ ॥ ೫ ॥

1. ನಮಸ್ಸಿದ್ಧೇಭ್ಯಃ (ಕ. ಖ) ಶ್ರೀ ಶಂಕರಾಯನಮಃ (ಘ) 2. ಪದಪದ್ಮಯುಗಂ ಶ್ರೀಲಲನಾ ಶಾಂತರಕ್ಷಿ (ಘ) 3. ಸೊಂಪೆಸೆಗೆಲ್ಲಾ 4. ಅನಿಯೋಗ (ಖ) ವ॥ ಅನುಯೋಗಂ ಚತುಷ್ಟಯ ಭಾವನೆಯೆಂಬ ಭವವಿಷಂಗಳು ಅದೆಂತುಪರೆಗುಮದಂತಂಜನನಸ್ಯ ಪಾನ ಲೇಪ ಶಿರೋದ್ವರ್ತನ ಅಂಜನಂಗಳೆಂಬ ಪಂಚಮಹಾತಂತ್ರಂಗಳಿಂದ ಮಹಾಖಳದಷ್ಟದ ಉಗ್ರೋಗ್ರವಿಷಂಗಳ್ ಕಿಡುಗುಮದಲ್ಲದೆಯುಂ (ಎಂದು (ಗ) ಪ್ರತಿಯಲ್ಲಿದೆ, 5. ಜನನಸ್ಯಂ ಪಾನಧಿ ಲೇಪನದಿಂ (ಖ) 6. ತುರಗ (ಖ) 7. ಳೋರೊಂದೆವೈರಿ(ಕ) ಳೋರೊಂದಮಿತ್ರ (ಖ) 8. ಮೆನಲ್ಕಿಂ(ಲ್ಕಂ)ತಾನಾಲ್ಕುಂ (ಕ) ಮೆನಲ್ಕಂತಾ (ಗ) 9. ಸಮೇತನೊಳ್ (ಕ) ಸಮೇತನೊಳ್ ತೀರಿದುದೆಲಿ (ಗ) 10. ದಾನಾಂಜನ (ಕ) 11. ಪೇೞ್ದೆನಾಂ ಕರ್ತವ್ಯಮೆಂದುಮುಂತಱಿಪುವೆನಾಂ (ಕ) ಪೇೞ್ವುದೆ ತಾವಕ್ತವ್ಯಮೆಂದು (ಖ) ಮೊಗಮಂ ಪೇೞ್ದುದಿತಂ (ಘ)

* ಇದು (ಗ) ಪ್ರತಿಯಲ್ಲಿಲ್ಲ.

ಮ|| ವರಮಂಜಿಷ್ಟಿಗೆ ದೇವದಾರು ಮಧುಕಂ ತ್ವಗ್ರಾತ್ರಿಯುಗ್ಮಂ ಸಸಿಂ |
ಧುರುಹಂ ವ್ಯೋಷ ವಿಳಂಗ [1]ಹಿಂಗು [2]ಕಿಱುದೆಂಗೆಂಬಿಂತಿವಂ ಕೂಡಿ ನೀಂ ||
[3]ಸರಿಗೊಂಡಾಜ್ಯದೊಳೀಯೆ [4]ಪಾನವೊದಲಾಗೆಲ್ಲಾ ಕ್ರಿಯಾಭೇದದೊಳ್ |
ಪರೆಗುಂ ಸರ್ವವಿಷಂಗಳೆಂದಱಿಪಿದಂ [5]ಸಮ್ಯಕ್ತ್ವ ರತ್ನಾಕರಂ || ೬ ||

ಮ|ಸ್ರ|| ಬೆರಸರ್ಕಂ [6]ದೇವದಾರು ಸ್ಫಟಿಕಕುಟಜ ವಚಂ(ಚಾ) ಚಂದನದ್ವಂದ್ವಮಂಭೋ |
[7]ಧರ ಕೋಷ್ಠ ವ್ಯೋಷ[8]ಶಿಗ್ರುದ್ವಯ ಕಟುಕ ಸುಸಂವರ್ಚ ತಾಳೀಸಪತ್ರಂ ||
ನಿರುತಂ ಸ್ಥೌಣೇಯಮುಂ ಗುಗ್ಗುಳು ಕುಱುಟಿಗೆ ಯೆಂಬಿಂತಿವಂ ಪಂಚಗವ್ಯೋ |
ತ್ಕರದಿಂ [9]ಶೃಂಗೋದರಸ್ಥಂ ಬಹುವಿಷಹರಣಂ ನಸ್ಯಕರ್ಮಾದಿಯಿಂದಂ || ೭ ||

ಮ|| ತುಲಸೀ[10]ಪಾಠ ಪುನರ್ನವೋತ್ತರಣೆಯಂಕೋಲಂ ವಿಡಂಗಂ ಬಿಡಂ |
ಹುಲಿಗಿಲ್ ಸೈಂಧವ ನೀಲಿ ಭಾಙ್ರ್ಗ ರ[11]ವಿ ಪುಷ್ಪೇಂದ್ರುಂ ವಚಾ ಕೋಷ್ಠವೊಂ ||
ದಿರೆ ತಾಳೀಸ[12]ಮೃಣಾಲ ಗೇರು ವಕುಲಾಸ್ಥಿ ಪ್ರೋಕ್ತಮಿಂತೆಲ್ಲಮಂ |
ವಿಲಸಚ್ಚೂರ್ಣಿತಮಾಗೆ ಮಾಡಿ ಜಲಮಂ [13]ಪೊಯ್ದಲ್ಲಿ ಮತ್ತಂತದಂ || ೮ ||

ಕಂ|| [14]ಸಮುದೊಳಜದುಗ್ಧಮಂ ತು |
ಪ್ಪಮನಿಂಬಿಂ ಬೆರಸಿ ಕಾಸಿ ಮೆಲುಗಿಚ್ಚಿಂ ತು ||
ಪ್ಪಮದುಱಿಯಲಟ್ಟು [15]ಘೃತದಾ |
ಕ್ರಮದಿಂ ಪಾನಾಂಜನಾದಿಯಿಂದೆ ವಿಷಘ್ನಂ || ೯ ||

ಅರಿಸಿನ ಶಿಗ್ರುದ್ವಯ[16]ವಗ |
ರು ರೇಣುಕಂ ಹಿಂಗು ಶಿಲೆ ಸಮಂಜಿಷ್ಠೆ ಯಿವೊಂ ||
ದಿರಲಟ್ಟು ಮೂತ್ರದಿಂದರೆ |
[17]ದಿರಿಸುವುದೆಸೆದಿರ್ಪ ಶೃಂಗದೊಳ್ [18]ಮಡಗಿದುದಂ || ೧೦ ||

ನಂಜತಿವಿಷಮ [19]ಮುದಕಟೆಂ |
ದಂಜುವ ಪದದಲ್ಲಿ [20]ಕುಡುಗೆ ನಸ್ಯಾದಿಗೆ ತ ||
ದ್ಭಂಜನಮಂತದು ಬಗೆಯಲ್ |
ಕುಂಜರಕೋಟಿಗೆ ಮೃಗೇಂದ್ರನೆಂ[21]ತಂತೆ ವಲಂ || ೧೧ ||

---

1. ಯಿಂಗು (ಕ) (ಗ) 2. ಕಿಱುದೇನೆ(ಗೆ)ಂಬಿತಿವಂ (ಗ) 3. ಸುರಿಗೊಂಡಾಖ್ಯದೊಳೀಯೆ (ಗ) 4. ಪಾನಮೊಂದಲ್ಲವೆಲ್ಲಾ (ಖ) 5. ಸಾಹಿತ್ಯ ರತ್ನಾಕರಂ (ಘ) 6, ದಾರುಪ್ಪುರು (ಕ) ದಾರುಪ್ಪುದು (ಗ) 7. ಧರಣಷಷ್ಟಂ (ಖ) ದ್ವಯಮಂಭೋಧರ (ಗ) 8. ಶಿಗ್ರದ್ವಯ (ಘ) ಶೀಘ್ರುದ್ವಯ (ಕ) ಶೀಗ್ರುದ್ವಯ. 9. ಶ್ರುಂಣಂದರಸ್ತಂ ಬಹುವಿಷ (ಗ) 10. ಪಾಠೆ ಪಟೋರಚೂರ್ಣಿತಮುತ್ತರಣೆ (ಕ) ಪಠೇಪದೊದಳಮುತ್ತ (ಖ) ಪಾಠೆಪಟೋಲ್ಲಮುತ್ತರಣೆಯಂಕೋಲಂ ವಿಳಂಗಂ (ಗ) 11. ಪುಷ್ಪಂಲೋಧ್ರ ವಚಾಕೋಷ್ಠ (ಖ) 12. ಸೆಗಾಲ (ಘ) ದಿರೆತಾವಿಷ್ಟಮೃಗಾಲಗೇರು (ಗ) 13. ಪೊಯ್ಮತ್ತದಂ (ಗ) 14. ಮಲ್‌ದೊಳಜದುಗ್ಧ (ಗ) 15. ಘೃತಮಾಕ್ರಮದೆ (ಗ) 16. ವಂಗುರುರೇಣುಕಿ—ಷ್ಠಕ ಮೊಂದಿರ (ಘ) ಶೀಗ್ರುದ್ವಯವರಗುರೇಣುಕಂ (ಗ) ದನಹರಿಣುಕಂ (ಕ) 17. ದಿರಿಸುವುದು ಲೇಸೆನಿಪ ಶೃಂಗದೊಳ್ (ಖ) 18. ಮಡಗಿಯುದಂ (ಘ) 19. ತರಮೆಂದಂಜುವ (ಘ) ಮಿದಕ್ಕುಂದಂಜು (ಕ) 20. ನಿಡುಗೆ (ಖ) 21. ತಂದೆ (ಗ) ದಂತೆ (ಕ)



ಚಂ|| ಬಿಡುಲವಣಂ ಸುವರ್ಚಲ[1] ಕಟುತ್ರಿತಯಂ ವರವಹ್ನಿವಕ್ತ್ರಹಿಂ |
ಗೊಡವೆರಸಲ್ಕೆ ಸೈಂಧವ ಫಲತ್ರಯ [2]ಪಾಠೆ ಸದೀಪ್ಯವಿಂತಿವಾ ||
ದೊಡೆ ಪುಡಿಮಾಡಿ ಗೋಘೃತದೊಳ[3]ಟ್ಟುರೆ ಶೃಂಗದೊಳಿಟ್ಟು ಮತ್ತದಂ |
ಕುಡುವುದು [4]ಪಾನಮುಖ್ಯದೊಳದುಂ ಭುಜಗಾದಿವಿಷಾಪಹಂ ದಿಟಂ || ೧೨ ||

ಉ|| ಅಂಜಲದೇಕೆ [5]ಪೇಱ್ ಫಣಿಕುಳಂ ಕೊಳೆ[6]ಸತ್ತಪನೇವೆನೆಂದು ನೀಂ |
ರಂಜಿಪ ಪುತ್ರಜೀವಿಯನೆ ನಿಷ್ಕಸಮಾನಮನೀಂಟೆ ಪಾಲೊಳಂ ||
ತಂಜನ ನಸ್ಯಲೇಪನದೆ ನಂಜಿಱಿದೋಡುಗುಮೆಂತೆ(ದೆ)ನಲ್ ಮಹಾ |
[7]ಮಂಜಿನ ಪುಂಜಮರ್ಕನಿದಿರೊಳ್ ಪರೆದೋಡುವ ಮಾಱ್ಕೆಯಿಂ ದಿಟಂ || ೧೩ ||

ಕಂ|| ಅಂಗುರು ಮತಿಬಜೆ ಯಿಲ್ಲಣ |
ಮುಂ[8]ಗುಗ್ಗುಳು ಮೇಘನಾದಿಯುಂ ಸಮನಾ[9]ಗ ||
ಲ್ಕಂ ಗೋಜಳದಿಂದೀಂಟಲ್ |
ಸಂಗತನಸ್ಯಾಂಜನಾದಿಯಿಂದೆ ವಿಷಘ್ನಂ || ೧೪ ||

ಚಂ|| [10]ವಿವರಿಸಿ ನೋಡೆ ಬಂಜೆ ಮಡು[11]ವಾಗಲ ಕಂದಮದಿರ್ದ ತಾಣಮಂ |
ದಿವಸಕರೈಕವಾರದೊಳೆ ತಂದುದುಮಂ ಶಕಲಂಗಳಾಗೆ ಮಾ ||
ಡುವುದಿನತಾಪದಿಂದೊಣಗೆ ನಿಂಬೆಯ ಪಣ್ಣ ರಸಂಗಳಿಂದಮಂ |
ತವನುಱಿ[3] ಭಾವಿಸಿಟ್ಟು ಶತಸೂಱ್ವರೆಗಂ [12]ವಿಷವೈದ್ಯರೋಜೆಯಿಂ || ೧೫ ||

ಕಂ|| ಮಡಗಿರಿಸಿ ಸರ್ಪದಷ್ಟಂ |
ಗೆಡೆಯುಡುಗದೆ ಪಾನಲೇಪನಾಂಜನ ನಸ್ಯ ||
ಕ್ಕೊಡ[13]ರಿಸು ನಿರ್ವಿಷಮಕ್ಕುಂ |
ತಡೆಯದೆ ವಿಭುಮಂಗರಾಜ [14]ನಭಿಮತದಿಂದಂ || ೧೬ ||

ಎಲ್ಲಾ ಮರ್ದಿನೊಳೀಂ ಗಳ |
[15]ಚಿಲ್ಲದ ಪಣ್ಣೊಂದೆ ಸಾಲ್ಗು [16]ಮಿಂಬಿಂ ನೀರಿಂ ||
ತಲ್ಲಣಿಸದೆ ಕುಡುವುದದಂ |
ನಿಲ್ಲದು ವಿಷಮಂತೆ ನಸ್ಯಪಾ [17]ನಾಂಜನದಿಂ || ೧೭ ||

---

1. ವಣಂ ಕಟುಕತ್ರಯ ವಹ್ನಿವಕ್ತ್ರಹಿಂ | ಗೊಡ (ಕ) ದರವಹ್ನಿ ಶಿಗ್ರುಹಿಂಗೊ (ಘ) ಸಂವತ್ಸಲ (ಗ) 2. ಪಾಲ್ವೆರದಿರ್ಪ (ಖ) ಪಾಠೆಸಂದಿಪ್ಪವಿಂತಿವಾದೊಡೆ. (ಕ) 3. ಳಿಪ್ಪೆರೆಶೃಂಗ (ಕ) 4. ಪೇನ-ಮುಖ್ಯ (ಗ) 5. ಕೇಳ್ (ಗ) 6. ಸತ್ತಪವೀವೆನೆಂದು (ಗ) ನಾವನೆಂದು (ಕ) 7. ಕುಂಜರದಿಕ್ಕೆ ಕೇಸರಿಗೆ ಪೋಸರಿಪಂದದಿ ಭೂತಳಾಗ್ರದೊಳ್ (ಗ) 8. ಗುಳ್ಳದ (ಖ) 9. ಗೋಮೂತ್ರದಿನೀಂಟಲ್ (ಘ)ಸಮನಾಗಲ್ಕಣ ಜಲದಿಂದೀಂಟಲ್ (ಗ) 10. ವಿನರಿಸಿ ಬಂಜೆಮಾಡುವಾಗಲ ಕಂದವಾದಿರ್ದ ತಾಣದಿಂ ಮಂದಿವ (ಕ) 11. ವಾಗಲದಿರ್ದಮರ್ದಿರ್ದ (ಘ) 12. ವೈದರಾಜ್ಞೆಯಿಂ (ಗ) ವೈದ್ಯರಾಜಿಯಿಂ(ಘ) 13. ರಿಸೆ (ಗ) 14. ನನುಮತ (ಗ) 15. ಚಿ(ಚೆ)ಲ್ಲನ (ಗ) 16. ಮಿಂಚಿಂ (ಗ) ಮೆಂಬೆಂ (ಕ) 17 ನಾದಿಗಳಿಂ (ಕ)

ಕಂ|| *ಝುಟಿತೆಯೊಳಂ ಕೋಶಾತಕಿ |
ಕಟುತುಂಬಿಯ ಬಳ್ಳಿಹರುಹೆ ಹುಲಿ(ರಿ)ಗಿ(ನಿ)ಲ ಬಿತ್ತುಂ ||
ಘಟಿಯಿಸಿ ಗೋಪಿತ್ತಯುತಂ |
ಸ್ಫು(ಪು)ಟಪಾನಾದಿಗಳೊಳಂ ವಿಷಾಪಹಮಕ್ಕುಂ || ೧೮ ||

ಚಂ|| ಅರಿಸಿನ ದೇವದಾರು ಕಟುಕತ್ರಯ ಭಾರ್ಙ್ಗ ವಿಳಂಗ ಮಿಂಗು ಸಿಂ |
ಧುರುಹ ಸ[1]ವಜ್ರಿ ಮಂಜಿಟಿಗೆಯುಂ ಮಧುಕಂ ತ್ರಿತೆ(ವೆ) ಯೆಂಬಿವಂ ಸಮಂ ||
[2]ತಿರೆ ಘೃತದಿಂದ[3]ಮಟ್ಟುದುಮನಂಜನಲೇಪನ ನಸ್ಯ[4]ಪಾನದಿಂ |
ಪರಿಕಿಸೆ ಸರ್ಪದಷ್ಟವಿಷಮುಂ ಪೆಱಪಿಂಗುವುದಾವ ವಿಸ್ಮಯಂ || ೧೯ ||

ಕಂ|| ಸಿರಿಸದ ಪೂವಿನ ರಸದಿಂ |
ಮರಿಚಮುಮಂ ಭಾವಿಸಿಟ್ಟು [5]ನೂಱ್ಸೂಱ್ವರೆಗಂ ||
ಬೆರಸುಗೆ ಶರ್ಕರೆಯಂ ಮ |
ತ್ತುರಗಸುದಷ್ಟಂಗೆ ಪಾನನಸ್ಯಾದಿಹಿತಂ || ೨೦ ||

ಉ|| ನಾಗರ ಮಾಗಧಂ ಮರಿಚಮುಂ ಬಜೆ ಬಾಗೆಯ [6]ಬೀಜಮೆಂಬಿವೊಂ |
ದಾಗಿರೆ ವಾಜಿಗಂಧಿ[7]ಯುಮನೊಂದಿಸಿ ಬಾೞ್ಯ ತೋಯದಿಂದೆ ಲೇ ||
ಸಾಗಿರೆ ಭಾವಿ[8]ಸಿಟ್ಟು ನೆೞಲೊಳ್ ಸಲೆ ಶೋಷಿಸಿ ಬಯ್ತಿಡಂತದಂ |
ಭೋಗಿ ಕೊಳಲ್ಕೆ ಪಾನನಯನಾಂಜನ ನಸ್ಯದೊಳೀಯೆ ನಿರ್ವಿಷಂ || ೨೧ ||

ಚಂ|| ಸಿರಿಸದ [9]ಬೀಜಮಂ ಭರದೆ ಭಾವಿಸು [10]ತತ್ಪ್ರಸವಾಂಬುವಿಂ ನಿರಂ |
ತರಮಿರದೇಕವಿಂಶತಿದಿನಂ ಮರಿಚಂ ಸದುಗುಪ್ಪೆ ಶರ್ಕರೋ ||
ತ್ಕರ[11]ದೊಳದೊಂದುವಂತರೆದು ಮಾಡಿರಿಸುಂಡೆಗಳಂ ಬೞಿಕ್ಕೆ ಮ |
ತ್ತುರಗಸುದ[12]ಷ್ಟಗಂ ಕುಡಿಸಿ ಪೂಸುವುದೆಚ್ಚುವುದಲ್ತೆ ನಿರ್ವಿಷಂ || ೨೨ ||

ಮ||ಸ್ರ|| ನುತ[13]ಕುಷ್ಠಂ ಶುಭ್ರಗೋಪಿತ್ತ ಮರಿಚಕಣಮುಂ ಗೇಹಧೂಮಂಗಳಿಂದ |
ನ್ವಿತಮಾಗಲ್ ತಾಳಕಂ ತಚ್ಛಿಲೆವೆರಸರೆದಿದುಂಡೆಯಂ ಕೊಂಡುದಂ ಭಾ ||
ವಿತಮಾಗಲ್ ಪಾನಲೇಪಾದಿಗೆ ಕುಡೆ ಫಣಿದಷ್ಟಂ ತದೀಯಪ್ರಭಾವೋ |
ನ್ನತಿಯಿಂದಂ ನಿರ್ವಿಷಂ ತಾನೆನಿಸಿ ಧರೆಯೊಳಂ ಜೀವಿಕುಂ ಭವ್ಯಬಂಧೂ || ೨೩ ||

---

1. ರುಹವಜ್ರಮಂಚಿಟುಗೆಯುಂ ಮಧುತಂತ್ರಿವೆಯೆಂ (ಗ) 2. ತರೆ (ಗ) 3. ಮಟ್ಟುಬೈತಿರಲದಂ ಜನ (ಗ) 4. ಪಾನಮುಂ ವಿರಚಿಸೆ (ಕ) 5. ಶತಸೂಱ್ವರಗಂ (ಕ. ಖ) (ಗ) 6. ಬೀಜದಿಂಬಿವೊಂ (ಗ) 7. ಯಿವನೊಂದಿಸಿ (ಕ) 8. ಭಾವಿಸೊಲ್ದು (ಖ)(ಗ) ಬಯಿತಿದಂತದಂ (ಗ) 9. ಪುಷ್ಪಮುಂ (ಕ. ಖ) 10. ತತ್ಪ್ರಸವಪನ್ನಾ 11. ದೊಳದೊಳಣಂದು (ಖ) 12. ದಷ್ಟನಂಪಡಿಸೆ (ಕ. ಖ) 13. ಸುವ್ರಣ ಪಿತ್ರಮರಿಚ....ದೇಹಧೂಮಂ (ಗ) ಮಷ್ಟಂಶಭ್ರಗೋ (ಕ)



ಮಾಲಿನಿ|| ಸಕಳಮುನಿಗ[1]ಳಂತರ್ದೃಷ್ಟಿಯಿಂ ನೋಡಿ ಪೇೞ್ದಾ |
[2]ಪ್ರಕರಣದೊಳಿದಂ ತತ್ಸಾರಮಂ ಪೇೞ್ದೆನಾಂ ಭಾ ||
ವಕರೞ್ವಿನೆಗಂ ಪಾನಾದಿಯಂ ದಿವ್ಯಯೋಗ |
ಪ್ರಕರಮನೆ [3]ವಿಷೋಗ್ರಾಟೋಪಮಂ [4]ಲೋಪಿಸಲ್ಕಂ || ೨೪ ||

— ಗದ್ಯ —

ಇದು

ಸಕಲವಿದಮಲ ಜಿನೇಂದ್ರೋಕ್ತಸಿದ್ಧಾಂತಪಯಃಪಯೋನಿಧಿಪಾರಗ
ಶ್ರೀಪೂಜ್ಯಪಾದಮುನೀಂದ್ರ ಚಾರುಚರಣಾರವಿಂದ
ಗಂಧಗುಣಾನಂದಿತಮಾನಸಂ
ಶ್ರೀಮದಖಿಲಕಲಾಗವೋತ್ತುಂಗ
**ಮಂಗವಿಭು**
ವಿರಚಿತಮಪ್ಪ

## ಖಗೇಂದ್ರ ಮಣಿದರ್ಪಣದೊಳ್[6]

[5]ಪಾನಾಂಜನ ನಸ್ಯ ಲೇಪನಯೋಗಾಧಿಕಾರಂ
ನವಮಂ
(ಮಂಗಳಮಹಾಶ್ರೀ.)

---

1. ಮುನಿಗಳುಂ ತದ್ದೃಷ್ಟಿ (ಖ) 2. ಪ್ರಕರದೊಳಿದಂ (ಗ) 3. ವಿಷೋಗ್ರಾದೋಷಮಂ (ಖ) ವಿಷಾಗ್ರಾಟೋಪಂ (ಗ) 4. ಲೇಪಿಸಳ್ಕಾಂ (ಕ) 5. ದಿವ್ಯಯೋಗ ಪಾನಧಿಕಾರಮೆಂಬೊಂಬತ್ತನೆಯಾಶ್ವಾಸ ಮಿಲ್ಲಿಗೆ (ಗ) ಸರ್ಪನಿರ್ವಿಷಪಾನವಿಶೇಷಾದಿಯೋಗಂ ನವಮಾಶ್ವಾಸಂ (ಘ) ಪಾನಲೇಪನಾಧಿಕಾರಂ ನವಮಂ ಮಂಗಳಮಹ. ಶ್ರೀ ಶಾಂತಿನಾಥಾಯನಮಃ—

# ದಶಮಾಧಿಕಾರಂ

## [2]ಮಂಡಲ ಸರ್ಪಪ್ರಕರಣಂ.

---

ಮ॥ ಪುರುತೀರ್ಥಂಕರನಿಂದಮಿಾಧರೆಯೊಳಿಂತು[3]ಕ್ತಂಗಳಾಗಿರ್ದುದಂ ।
ಗರಳಗ್ರಾಹಿಗ[4]ಳಪ್ಪ ಗೋನಸಕುಳಪ್ರತ್ಯೇಕನಾಮಂಗಳಂ ॥
ತರದಿಂ ಮಂಡಲವರ್ಣಭೇದ[5]ಮನಿತಂ ದಷ್ಟಾಂಗಚಿಹ್ನಂಗಳಿ ।
ಪ್ಪಿರವಂ ತತ್ಪರಿಹಾರಮಂ ತಿಳಿಪುವೆಂ ಕರ್ಣಾಟದೇಶೀಯದಿಂ ॥ ೧ ॥

ಕಂ॥ ಕ್ಷಿತಿಯೊಳ್ ಕ್ರೀಡಾರೂಪೋ ।
[6]ನ್ನತ ವಿಷ ಸೌವರ್ಣ ಕರ್ದ್ದಮಂ ಪೆಸರಿಂದ ॥
ಪ್ರತಿಮಾಗ್ನಿಮಾಲಿಕಂ ತಾಂ ।
ಮತಿಗಿಡಿಸುವ [7]ವಜ್ರ ವಕ್ರ ಮಾಲಿಗಳಕ್ಕುಂ ॥ ೨ ॥

[8]ಬಾಧಕ ವೇಣೀಕಂಠಂ ।
ಗೋಧಾಸ್ಯಂ ಘೋಂಟಕಾಸ್ಯ ಶಕಟಾಜಮುಖಂ ॥
ಸಾಧಿತಮಹೋಗ್ರ ವಿಷಮೆನ ।
ಲೀ ಧರೆಯೊಳ್ ನೆಗಳ್ದ ವಲ್ತೆ ಮಾರ್ಜಾರಮುಖಂ ॥ ೩ ॥

[9]ವಚ್ಛಾಸ್ಯ ಮೇಷಮುಖನು ಮ ।
ತುಚ್ಛವಿಷಂ ಕುಕ್ಕುಟಾಸ್ಯಸಂದಷ್ಟಂಗಳ್ ॥
ಸ್ವಚ್ಛಂದ [10]ವೃತ್ತಿಗಳ್ ಕೊಲ ।
ಲಿಚ್ಛೈಸುವ ವಜ್ರತುಂಡದಂತುರ ಮಿಶ್ರಂ ॥ ೪ ॥

[11]ಇಂತೀ ಗೋನಸಭೇದದೊ ।
ಳಂ ತಾವೇಕೋನವಿಂಶತಿ ಪ್ರಥಿತಕುಲಂ ॥
ಸಂತತಮಿನ್ನ ಱವರ್ಗಂ ।
ತಾಂ ತಿಳಿವುವೆ ನೊಸೆದು ಪೇಳ್ದ ವರ್ಣಾದಿಗಳಂ ॥ ೫ ॥

---

1. ನಮಸ್ಸಿದ್ಧೇಭ್ಯಃ (ಕ) (ಖ) ಶ್ರೀ ಶಂಕರಾಯನಮಃ (ಘ)
2. ಗರುಡಾಧಿಪತಿಯ ಮತದೊಳ ।
ಗುರಗವಿಷಾಪಹಗಳೆಲ್ಲಮಂ ಪೇಳ್ದ ಬಱಿ ॥
ಕ್ಕುರುನಾನಾವಿಷಗಳ್ಗಂ ।
ವರಮಂತ್ರೌಷಧಗಳಂ ವಿವಕ್ಷಿಸಿ ಪೇೞ್ವೆಂ ॥ ಇದು (ಘ) ಮತ್ತು (ಕ) ಪ್ರತಿಗಳಲ್ಲಿದೆ. (ಟೀಕಾ ಗ್ರಂಥಕ್ಕೆ ಸಂಬಂಧಪಟ್ಟಿರಬಹುದು ?) ಈ ಅಧಿಕಾರಾದಿಯಲ್ಲಿರಬೇಕಾದ ಶ್ರೀಕಾರಸಹಿತ ಕಂದವಾಗಲಿ ವೃತ್ತವಾಗಲಿ ಪ್ರಾಯಶಃ ಗಳಿತವಾಗಿರಬಹುದು. 3. ತಕ್ತಂಗ (ಗ) 4. ಳಪ್ಪಣನಸಕುಲ (ಗ) ಗೋವಿನಕುಲ (ಕ) 5. ಮನಿದಂ (ಗ) 6. ನ್ನತಿ (ಗ) 7. ಪ್ರತಿನಿರ್ನಿದೂಲಿಕಂ. 8. ಬಾದಕವೇಣಿಕರಂ (ಕ) ಬಾದವೆಣಿಕಂಠಂ (ಖ) ಬಾಧವೇಣೀಕಂಠಂ ಗೋವಾಸ್ಯಂ ಪೊಟತಾಸ್ಯಶಕಟಾಜ್ಯಮುಖಂ (ಗ) 9, ವಚ್ಛಾಸ್ಯಮೇಶ (ಗ) 10. ವ್ರತಿಗಳ್ (ಗ) 11. ಅಂತು ಗೊನಸವಿಭೇದ (ಕ)



### ೧. ಕ್ರೀಡಾ(ಸ್ವ)ರೂಪಂ.

ಕಂ॥ ಶಸ್ತ್ರಮೆನಿಸಿರ್ಪ ಮಂಡಲ ।
ವಿಸ್ತರ[1]ತಾವೃತ ಸುಪೀತಜಾತಂ ತನುವಿ[2] ॥
ತ್ರಸ್ತಂ ಕ್ರೀಡಾರೂಪಂ ।
[3]ವ್ಯಸ್ತಸ್ಥೂಲಂ ಮಹೋಗ್ರ ವಿಷಮೆನಿಸಿರ್ಕುಂ ॥ ೬ ॥

ಜ್ವರಪೀಡಾದಿ[4]ಗಳಕ್ಕುಂ ।
ಪರಿಗುಂ ತದ್ದಂಶದತ್ತಣಿಂ ಶೋಣಿತಮುಂ ॥
ಪಿರಿದುಂ ಮೆಯ್ಮಱದಿರ್ಕುಂ ।
ನಿರುತಂ [5]ಕ್ರೀಡಾಸ್ವರೂಪ ನವಿತಥಚಿಹ್ನಂ ॥ ೭ ॥

ಗಜಪಿಪ್ಪಲಿ ಮದನಫಲಂ ।
ದ್ವಿಜಭೂರುಹಬೀಜ ಮಧು ಘೃತಾನ್ವಿತಮುಂ ತ ॥
ದ್ವಿಜಯಿ ಯಿದೆ ಪಾನ ಲೇಪದೆ ।
ಸುಜನೋತ್ತಮನೆನಿಪ ಮಂಗರಾಜನ ಮತದಿಂ ॥ ೮ ॥

ವ॥ ಸರ್ವಗೋನಸ ವಿಷಾ[6]ಪಹಾರಮಂತ್ರಂ—

ಮಂತ್ರಂ—ಓಂ ನಮೋ ಭಗವತೇ [7]ತತ್ವಗರುಡಾಯ ಹರ=ವಜ್ರಮುಷ್ಟಿ ಜಯಂ(ಯಾ)ವಾ(ಮಾ)ನಸಿ(ಸೇ) ಸ್ವಾಹಾ—

ವ॥ *[8]ಈ ಮಂತ್ರದಿಂ(ದೆ) ಕ್ರೀಡಾ (ನಾಮ)ಸ್ವರ್ಣಾಭ ವೇಣೀಕಂಠ ಘೋಟಕ ಶಕಟಾ ಜಾಮುಖಪ್ರಮುಖವೆಂಬ ಗೋನಸವಿಶೇಷ ವಿ(ಷಾಪಹ)ರಣಮಕ್ಕುಂ.

### ೨. ಸೌವರ್ಣಕಂ.

ಕಂ॥ [9]ಅತಿರಕ್ತ ಮಂಡಳಂ·[10]ಪೀ ।
ತತರಾಕೃತಿಯಿಂದೆ ವೇಷ್ಟಿಸಿರ್ಕುಂ ಸುತ್ತಂ ॥
ಮತಮಿದು ಸೌವರ್ಣಕನೆಂ ।
ಬತಿಶಯನಾಮಂ ಸುದೀರ್ಘ [11]ಪುಚ್ಛಾನಚ್ಛಂ ॥ ೯ ॥

ನಾನಾಸ್ಯ [12]ರೋಮಕೂಪದಿ ।
ನಾ ನೆಗೞ್ದ ಕ್ಷತದ ದೆಸೆಯಿನೊಸರ್ಗುಂ ರುಧಿರಂ ॥
ತಾನೆ[13]ಸುವರ್ಣಾಭಂ ಕೊಳ ।
ಲಾ ನರನೆಸವಂಗಚಿಹ್ನ ಮೆಂಬರ್ ಮುನಿಗಳ್ ॥ ೧೦ ॥

---

1. ತಾನ್ವೃತ್ತ (ಖ) 2. ತಿಪ್ರಸ್ತ (ಖ) 3. ವೈಸ್ತಶೂಲಂ ಮಹೋಗ್ರ (ಗ) ವಸ್ಥಸ್ಥೂಲಂ (ಖ) 4. ಗಳಳ್ಕುಪರಿಗುಂ(ಗ) 5. ಕ್ರಿಡಾಸ್ವರೂಪ ನವಿತಥಂ (ಗ) ನವಿರತಚಿಹ್ನಂ (ಖ) 6. ಷಾಪಹಮಂತ್ರಂ (ಘ) 7. ಭಗವತೇತ್ವ (ಗ) 8. ಕಂದ॥ ಈ ಮಂತ್ರದಿಂ ಕ್ರೀಡಾ—ಪ್ರಮುಖ ವೀಗೋನಸವಿಷ ವಿಶೇಷ ಅಪಹರಮುಕ್ಕುಂ (ಗ) ಇದು ಗದ್ಯವೋ ? ಪದ್ಯವೋ ? ಎಂಬ ಸಂದೇಹವಿದೆ. ಸರಿಯಾದಪಾಠ ದೊರಕಿಲ್ಲ. 9. ಅತಿರಕ್ತ (ಘ) 10. ಪೀತಕಾರಾ (ಗ) 11. ವತ್ಯಾವಷ್ಯೆಂ (ಖ) 12. ರೋಷಮಾಪದಿ (ಗ) 13. ಸುವರ್ಣಾಭರ ಕೊಳನಂಗ ಚಿಹ್ನನೆನವ್ರರೆಂಬರ್ಮುನಿಗಳ್ (ಗ) ಸುವರ್ಣಕಮುಂ ಕೊಳ (ಘ)

* ಇದು ಕಂದಭಾಗದಂತೆ ತೋರುವುದು.

ಚಂ|| [1]ಕಣ ಮಧು ಸಿಂಧುವಾರ ತಗರಂ ಹಯಮಾರ ಮಹೀರುಹಂ ಲಸ |
ದ್ಗುಣಿ ಮಳಯೋದ್ಭವಂ [2]ಮೆಱೆ[3]ವುಶೀರ ಸಬಿಲ್ವಘೃತಂಗಳಿಂಬಿವಂ ||
ಕ್ಷಣದೊಳೆ ಪಾನಲೇಪನದಿನಿತ್ತೊಡಮಾಗಳೆ ತದ್ವಿಷಾಪಹಂ ||
ಗುಣಗಣಪಕ್ಷಪಾತ ನೆನಿಸಿರ್ಪ ದಯಾನಿಧಿ ಮಂಗನುಕ್ತಿಯಿಂ || ೧೧ ||

ಮಂತ್ರಂ—ಓಂ ನಮೋ ಭಗವತೇ ಆದಿತ್ಯಾಯ ಸಾಂ [3]ಸುಂ ಸಃ, ಓಂ ನಮೋ ಭಗವತೇ ನಾಗೇಂದ್ರ [4]ವೇತಾಳಿ ಹತಂ ವಿಷಂ ವಜ್ರಯೋಗೇನ ಬಲಂ ಸ್ವಾಹಾ—

## ೩ ಕರ್ದ್ದಮಂ.

ಚಂ|| ಬಿಳಿದೆನಿಸಿರ್ಪ ಮಂಡಲದ ಸುತ್ತುವರಂ ಕರಿದಪ್ಪ ಮಂಡಲಂ |
ಗಳನೆಸೆ[5]ದಿರ್ಪ ಗೋನಸಮೆ ಕರ್ದಮಮೆಂಬಭಿಧಾನಮಪ್ಪುದಾ ||
ತೊಳಗುವ ದೀರ್ಘದೇಹದೊಳೆ ಶೋಭಿಸುಗುಂ [6]ಪಟುವೇಗನಾ ವಿಶ್ವಂ |
ಖಳನುದಿತಪ್ರಕೋಪದೊಳೆ ಕೊಂಡೊಡೆ ಚಿಹ್ನಮ [7]ನೊಲ್ದು ಪೇಳ್ದಪೆಂ || ೧೨ ||

ಚಂ|| ವ್ರಣಮೊಸರ್ಗುಂ ಮಹಾಜ್ವರಮುದಗ್ಗಲಿಕುಂ ತನು[8]ತೋರಮಕ್ಕುಮು |
ಲ್ಬಣ[9]ತರಶೂಲೆಯಿಂ ವಮನದಿಂ ತೃಷೆಯಿಂ ಕರ [10]ಮುಚ್ಚುಗಂಗಳಿಂ ||
ಕ್ಷಣದೊಳೆ ತೋರ್ಕುಮಂತದಱ ನಾಶನದೌಷಧಮೆಂತೆನಲ್ಕೆ ರೋ |
ಹಿಣಿ ಮದಯಂತಿಕಾರ್ಜುನ ನಿಶಾದ್ವಯ ನಾಗರ ನಾಗಕೇಸರಂ || ೧೩ ||

ಕಂ|| ಮಧು ರುಜೆ ಮದನ ಸಮಾಗಧ |
[11]ಮಧುಕಾಜ್ಯಂ ದೇವದಾರುವೆರಸಿದ ಪಾನಂ ||
[12]ವಿಧಿಯುತಲೇಪಂ ಮಾಳ್ಪುದು |
ಸುಧೆಯೆಂಬುದು ಬೇಱೆ[3]ದರ್ಕೆ ದೊರೆ ಪೆಱತುಂಟೇ || ೧೪ ||

ಮಂತ್ರಂ—ಓಂ ನಮೋ ಭಗವತೇ ರುದ್ರಾಯ ಹನ - ಹರ-ಫಟ್ - ಭೂಮ್ಯಾಂ (ದಿ)ಗಚ್ಛ ಮಹಾವಿಷ ಸ್ವಾಹಾ.

## ೪. ಅಗ್ನಿಮಾಲಿಕಂ.

ಕಂ|| ಅಂಕದೊಳತಸೀ [13]ಪುಷ್ಪಸು |
ಸಂಕಾಶದ ಮಂಡಲಂಗಳೊಪ್ಪುವ ತನುವಿಂ ||
ದಂ ಕರ[14]ಮೊಪ್ಪುಗುಮಿಳೆಯೊಳ್ |
ಶಂಕೆಯೊಳೆನಗ್ನಿ ಮಾಲಿಕಾಹ್ವಯನೆನಿಕುಂ || ೧೫ ||

---

1. ಗಣ (ಗ) 2. ಮೆರವುಸಿರಿಸಬಿಲ್ವ (ಗ) ಯೋದ್ಭವಂ ಶಿರಸಮುಂಜಲಬಿಲ್ವ (ಘ) 3. ಸುರಿ, ಸರಿ (ಗ) 4. ದೇವದಾಳಿ (ಘ) 5. ದಿರ್ಪಣನ ಸಮೆತರ್ದಮುಮೆಂಬಭಿಧಾನಮಾಂಪು (ಗ) 6. ಪಟವೇಗ (ಗ) 7. ಕೊಂಡನಚಿಹ್ನಮನೊಪ್ಪೆ (ಗೆ) 8. ತೋರಣ (ಕ) 9. ಕರ (ಖ) 10. ಮುಚ್ಚೆ (ಖ) 11. ಮೊದುತಾಜ್ಯಂ (ಗ) 12. ವಿಧಿಯಿಂ (ಖ) 13. ಪುಷ್ಪದ (ಖ) ದೊಳಸಿತ ಪುಷ್ಪಸು (ಗ) (ಖ) 14. ಮೊಪ್ಪುತಮಿಳೆ (ಕ) ಮೊಪ್ಪುವಮಿಳೆ (ಗ) (ಖ)



ಕಂ|| ಕಷ್ಟತರಜ್ವರದಾಹೋ |
ತ್ಕೃಷ್ಟತ್ವಂ ಛರ್ದಿಯುಂ ಶಿರಃಪೀಡನಮುಂ ||
ನಷ್ಟತನುಕಾಂತಿ[1]ಯಿವು ತ |
ದ್ದಷ್ಟನ ಚಿಹ್ನಂಗಳೆಂದು ಪೇಳ್ವರ್ ಮುನಿಗಳ್ || ೧೬ ||

ಮ|| ತಗರಂ ದಂತಿ ಪುನರ್ನವಂ ಮಳಯಜಂ [2]ಪಾಠಾಖ್ಯಮಂಕೋಲಮುಂ |
ನೆಗಳ್ದಿರ್ದ್ದ ದೂರ್ವಾ ಕಟು ಸೋಮರಾಜಿಕಣಮುಂ ಮಧ್ವಾಜ್ಯಮುಂ ಕೇಸರಂ ||
ಬಗೆಗೊಂಡೊಪ್ಪಿರಲಿಂತಿವಂ ಬೆರಸಿ ಪೂಸಲ್ಕಿಂಟಿಯುಂ ತದ್ವಿಷಂ |
ವಿಗತಂ ಭಾವಿಪೊಡಕ್ಕುಮೆಂದಱೆಪಿದಂ ಸಾಹಿತ್ಯ [3]ವಿದ್ಯಾಧರಂ || ೧೭ ||

ಮಂತ್ರಂ—ಓಂ ನಮೋ ಭಗವತೇ ಆದಿತ್ಯಾಯ ಕರವೀರೋದರ [4]ಸೋಮಾಯ ಹರ ವಿಷಂ ಮುಂಚ ಸರಶ್ಮಿ ಜ್ಞಾ(ಜ್ಞ)ಪಯ(ತ)ತಿ ಸ್ವಾಹಾ.

## ೫. ವಜ್ರಮಾರಿ (ಲಿ)

ಕಂ|| ಸಲೆ ವಜ್ರ ಸುವೈಡೂ(ದೂ)ರ್ಯಾ |
[5]ವಲಿ ಸಂಕಾಶಾಂಗಮಾಗಿ ಪೊಳೆಯುತ್ತಿರ್ಕುಂ ||
ಖಲವಜ್ರ[6]ಮಾಲಿ ಯೆಂಬುದು |
ಬಲುಪಿಂದಂ ಪಿಡಿಯಲದಱ ವಿಷದುಗ್ರ[7]ತೆಯುಂ || ೧೮ ||

ಉ|| ಭಾವಿಸೆ ತನ್ನ ಪೂರ್ವಕೃತಕರ್ಮಫಲೋದಯದಿಂದೆ ಶೋಣಿತ |
ಸ್ರಾವ ಮಹಾವ್ಯಥಾ[8]ವಮನ ಮೂರ್ಛೆಗಳೆಂಬಿನಿತೆಯ್ದುಗುಂ ತೆರ ||
ಳ್ದಾ ವಿಷಮಂ ಸಮಂತ್ರಕಘೃತಂಗಳ ಧಾರೆಗಳಿಂದೆ ಕರ್ಚಿ ನೀಂ |
ಪಾವನಮಪ್ಪ ತಂತ್ರದೊಳೆ ವೃತ್ತಸುಮಂತ್ರಕನಾಗಿ ಬೇಗದಿಂ || ೧೯ ||

ಮಂತ್ರಂ— ಓಂ ನಮೋ ಭಗವತೇ ಗರುಡಾಯ ಹನ-ವಜ್ರಮುಷ್ಟಿಪ್ರಹರಣಾಯ ನಮಃ [9]ಸ ಕ್ರಃ ವಾ ಸಃ ಮಿತಯ ಸ್ವಾಹಾ—

ಈ ಮಂತ್ರದಿಂದ ಮಂತ್ರಿಸುವುದು.

## ೬. ವಕ್ರಮಾಲಿ.

ಚಂ|| ಪರಿಕಿಪೊಡರ್ಧಚಂದ್ರನವೊಲಿರ್ಪುವು ದಾಡೆಗ[10]ಳಾವ ಗೋನಸೋ |
ತ್ಕರದೊಳೆ ನಿರ್ಗತಂಗಳತಿದೀರ್ಘಮೆನಿಪ್ಪುವು [11]ತಚ್ಛಿರಂ ಗಡೀ ||
ಧರೆಯೊಳ[12]ತೀವತುಂಗಮೆನೆ ತೋರ್ಪುದು [13]ನಾಮದೆ ವಕ್ರಮಾಲಿ ತಾಂ |
ಪಿರಿದೆನಿಸಿರ್ದ ಪಾಪದ ಫಲೋದಯದಿಂ ನರನಂ ವಿರೋಧದಿಂ || ೨೦ ||

---

1. ಯಿಂತಿವುದಷ್ಟನ (ಕ) 2. ಪಾಠಾಖ್ಯ(ಜ್ಯ)ಮುಂ ಕೋಲಮುಂ (ಗ) 3. ವಿದ್ಯಾಧರಾ (ಗ) 4. ಸ್ತೋಮಾಯ(ಖ) 5. ವೃಸಂ ಸಂಕಾಸಾಂಗ(ಕ) 6. ಮಾಳಿ(ಕ) ಮಾಲಿ(ಖ) 7. ತೆಯಿಂ. 8. ನಮನ (ಖ) 9. ಸಃಕ್ರಃ ದಾಸಃ ಮತಯಃ (ಘ) 10. ಳಂದು (ಖ) 11. ತದಿರಂಗಡೀ (ಗ) 12. ಳತೀವ್ರತುಂಗಮುಮ (ಖ) 13. ವಾಮುದೆವಕ್ರಮಾಲಿ (ಗ)

ಕಂ|| ಪಿಡಿಯಲ್ಕೆ ದಷ್ಟದೇಹಿಗ |
ಳೊಡಲೆಲ್ಲಂ ಬಾವುದೊಡನೆ [1]ಮೂಱನೆಯ ದಿನಂ ||
ತಡೆದೊಡಮಲ್ಲಿಂ ಬೞಿಯಂ |
ಮಡಿಗುಂ ಮಂತ್ರೌಷಧಂಗಳೀಂ ಕಾದಪುವೇ || ೨೧ ||

## ೭. ವೇಣೀಕಂಠಂ.

ಕಂ|| *ಕಪಿಳಶ್ಯಾಮಳ ಧವಳಂ |
ಲಪಿತಂ ತದ್ವರ್ಣಮೆಸೆವ ಕಂಠಂ ಹ್ರಸ್ವಂ ||
ಕುಪಿತಂ **ವೇಣೀಕಂಠಂ** |
ಕಪಟ ಮಹಾಕಾಯದರ್ಪಿತಂ ಗೋನಸದೊಳ್|| || ೨೨ ||

[2]ದಂಶದಿನೊಸರ್ಗುಂ ರುಧಿರಂ |
ಸಂಶಯಮೇಂ ಸ್ಫೋಟಕಂ ಹಿಮಂ ಜನಿಯಿಸೆ [3]ತ ||
ದ್ದಂಶದೊಳಿರದೇೞ್ದಿವಸ |
ಕ್ಕಂ[4]ಶೋಚ್ಯಂ ತಾನೆನಿಪ್ಪನದಱಿಂ ದಷ್ಟಂ || ೨೩ ||

ಎತ್ತಾನುಂ ಜೀವಿಸುಗುಂ |
ಮತ್ತೆನಿಸುವ ಮಂತ್ರತಂತ್ರಮುಳ್ಳೊಡೆ ದಷ್ಟಂ ||
ಸತ್ತಪನೆ ಸಾಯನದಱಿಂ |
ದುತ್ತಮಜಾಂಗು(ಗ)ಳಿಕರೊಸೆದು ಮಾೞ್ಪುದು ಮರ್ದಂ || ೨೪ ||

ಬೇಗದೊಳಂ ಶೋಧಿಸುವುದು |
ನಾಗಾಂತಕನೆಸೆವ ಪಕ್ಷದಿಂದಂ ವ್ರಣಮಂ ||
ಪೋಗಲ್ಪಾಟ(ಡ)ಪುದೆಸೆವ ಮ |
ಹಾಗರುಡಾಧಿಪನ ನೆನೆವುದೀವುದು[5]ಮರ್ದಂ || ೨೫ ||

ಮಂತ್ರಂ—ಓಂ ನಮೋ ಭಗವತೇ ರುದ್ರಾಯ ಕಪಾಲಹಸ್ತಾಯ ನಿರ್ವಿಷಂ(ಷ್ಣಂ) ಕುರು (ಕುರು) ಸ್ವಾಹಾ—

## ೮. ಗೋಧಾಸ್ಯಂ—೯. ಘೋ(ಂ)ಟಿಕಾಸ್ಯಂ.

ಕಂ|| [6]ಸ್ಥೂಲನತಿದೀರ್ಘನಾ ದುಃ |
ಶೀಲಂ ವಿಕಟಾಂಗಮಸ್ತಕಂ **ಗೋಧಾಸ್ಯಂ** ||
[7]ಪಾಲಿಸಲರಿದದು ಶಿಖಿಯುರಿ |
ಮಾಲೆಯವೋಲ್ [8]ಘೋಂಟಿಕಾಖ್ಯ(ಸ್ಯ)ನಕ್ಕುಂ ಮತ್ತಂ || ೨೬ ||

1. ಮೂಱನೆಯ (ಖ) (ಗ) 2. ದಶತದಿ (ಕ) 3. ತದ್ವಂಶದಿನಿರೆನೆಗಳ್ದಿವಸಕ್ಕಂ (ಗ) ತದ್ದಂಶದಿನಿರನೇೞ್ದಿವಸಕ್ಕಂ (ಘ) 4. ಶೋಭ್ಯಂ (ಕ) ಚೋದ್ಯಂ (ಖ) ಶೋಧ್ಯಂ. (ಘ) 5. ದೊರೆವುದು ಮತ್ತಂ (ಕ) ದರೆವುದು ಮರ್ದಂ (ಗ) 6. ಸ್ಥೂಲಾಸುದೀರ್ಘ (ಘ) 7. ಸೋಲಿಸ (ಖ) ಸೋಧಿನ (ಗ) ಪೋಲಿಸ (ಘ) 8. ಸೊಗಟಿಕಾಖ್ಯನಿರ್ಕುಂ (ಕ) * (ಕ) (ಖ) ಪ್ರತಿಗಳಲ್ಲಿಲ್ಲ.



## ೧೦. ಶಕಟಂ (ಶಕಟಾಸ್ಯಂ)

ಕಂ|| **ಶಕಟಂ** ಶಕಟಾಕೃತಿಯಿಂ |
ಪ್ರಕಟಂಮಾಡುತ್ತುಮಿರ್ಕುಮದಱ ವಿಷಂ ಪಾ ||
ವಕನಿಂದಂ ಮಿಗಿಲೆನಿಕುಂ |
[1]ಸ್ವಕೀಯಮಂಡಲವಿನೀಲಲೋಹಿತಮಕ್ಕುಂ || ೨೭ ||

ಮ|| ವಿಲಸನ್ನಾಗರಮುಂ ಪಟೋಲ [2]ಕಪಿಕಚ್ಛೂ ಬ್ರಹ್ಮದತ್ತಾಖ್ಯ ಗು |
ಗ್ಗುಲಸರ್ಪಿರ್ಮಧು [3]ನಿಂಬಬೀಜಮಿನಿತಂ ಕೂಡಲ್ ಕದಂಬಾನ್ವಿತಂ ||
ವಿಲಯಂ ತದ್ವಿಷಮಾಗೆ ಮಾೞ್ಕುಮಿಳೆಯೊಳ್ ಪಾನಪ್ರಲೇಪಂಗಳಿಂ |
ದಲಘುಪ್ರಾಜ್ಞರೊಳಗ್ರಗಣ್ಯನೆನಿಪೀ ಶ್ರೀಮಂಗನಿಷ್ಟೋಕ್ತಿಯಿಂ || ೨೮ ||

ಮಂತ್ರಂ—ಓಂ ನಮೋ ಭಗವತೇ [4]ನೀಲಕಂಠಾಯ ಚಿರಿ ಪಕ್ಷಿಣಿ ಮುಂಚ ಸ್ವಾಹಾ (ಠಂ)

## ೧೧. ಅಜಾಮುಖಂ.

ಮ||ಸ್ರ|| ನೆಲಸಲ್ಕಾ ಪಾಟಲಂ ಮಂಡಲ [5]ಮೆನಲಿದು ಚಿತ್ರಂ ಕರಂ ಶೃಂಗಯುಗ್ಮಂ |
ವಿಲಸತ್ಕರ್ಣಂಗಳುಂ ತೋರ್ಪುದುಮದು ಪೆಸರಿಂ[6]ತಾನಜಾಸ್ಯಂ ಗಡಂ ತ ||
ತ್ಕುಲಜಂ ತಾನಾಗಿಯುಂ ಚಿತ್ರಿಕೆಯ ಬಸಿಱೊಳಂ ಪುಟ್ಟುಗುಂ ಮತ್ತ [7]ಮಂತಾ |
ವಿಲಚಿತ್ತಂ ಕೊಂಡವಂಗಂ ಭ್ರಮೆ ರುಧಿರ ಮಹಾಶ್ವಾಸ ಕಾಸಂಗಳಕ್ಕುಂ || ೨೯ ||

ಕಂ|| *"ಕಿಂಬಹುನೋ" ತ್ಪಲ ರುಜೆ ತಗ |
ರಂ ಬೆರಸಾ ಬಹ್ಮದಂಡೆ ಮಧು ದಂತಿ ಕಣಾ ||
ನಿಂಬ ಕಟುಪಾನಮೆ ವಿಷಾ |
ಡಂಬರಮಂ ಕಿಡಿಸುಗುಂ [8]ವಿಲೇಪನ ವಿಧಿಯಿಂ || ೩೦ ||

ಮಂತ್ರಂ—ಓಂ ನಮೋ ಭಗವತೇ ರುದ್ರಾಯ ಏಹಿ ಭಗವತಿ ಕಪಾಲ ಮಾಲಾಧಾ(ಧಿ)[9]ರಿ ಕಹಾಕಪಾಲೆ [10]ಹನ ಸ್ವಾಹಾ—

## † ೧೨. ಮಾರ್ಜಾರಾಸ್ಯಂ.

ಕಂ|| ಮಂದಮತಿಯಾಗಿ ಬೀೞ್ಗಂ |
ದುಂದುಭಿ ಸಂಭೂತಮಪ್ಪ **ಮಾರ್ಜಾಲಾ[11](ರಾ)ಸ್ಯಂ** ||
ಬಂದು ಪಿಡಿಯಲ್ಕೆ **ಲಾಲಾ** |
ಸಂದೋಹಂ ಛರ್ದಿ ಗಳವಿಭಂಗ[12]ಮಿವಕ್ಕುಂ || ೩೧ ||

1. ಪಕ್ಷೀಯಮಂಡಲವಿನೀಲ ಲೋಹಿತಮೆನಿಕುಂ (ಗ) ಪ್ರತಿಯಮಂ (ಘ) 2. ಕವಿಕಚ್ಛಂ ಬ್ರಹ್ಮದಂಡಾಖ್ಯ (ಖ)(ಗ) 3. ಬಿಂಬಬೀಜ (ಗ) 4. (ಭಗವತೇ) ನೀಲಕಂಠಾಯ ಚಿರಿ ಪಕಿಣಿ ಮುಂಚ ಸ್ವಾಹಾ—ರ—(ಗ) (ಘ) 5. ಮೆನರಿದು ಚಿತ್ರಕರಂ ಶ್ರುಂಗ (ಗ) 6. ಜಾಗಜಾಸ್ಯಂ (ಗ) 7. ಮಂತಾಚಿತ್ತಂ ಕೊಂಡವಂಗಂಭಮೆ (ಗ) 8. ಸರಪನವಿಧಿಯಿಂ (ಗ) ಸುಲೇಪನವಿಧಿಯಿಂ (ಎಂದಿರಬಹುದು). 9. ಧಾರಿ (ಕ) (ಗ) 10. ಹ ಸ್ವಾಹಾ (ಗ) 11. ಜಾರ್ಲಾಖ್ಯಂ (ಕ) ಮಾರ್ಜಾರಖ್ಯಂ (ಗ) 12. ಮೆನಿಸಿಕ್ಕುಂ (ಗ)

* ಕಿಂಬಹುನಾಂ ಉತ್ಪಲರುಜೆ ಎಂಬಲ್ಲಿ ಸಂಸ್ಕೃತಗುಣಸಂಧಿಯಾಗಿರುವುದು ಚಿಂತ್ಯವು. "ನುತ್ಪಲರುಜೆ" ಎಂದಿರಬಹುದು.

† ಇದರಲಕ್ಷಣವನ್ನು ತಿಳಿಸುವ ಪದ್ಯವು ನಮಗೆ ದೊರತಿರುವ ಆಱು ಪ್ರತಿಗಳಲ್ಲೂ ಗಳಿತವಾಗಿರುವುದು.

ಕಂ|| ತ್ರಿಕಟುಕಮುಂ ಬಜೆಯುಂ ಚಿ |
ತ್ರಕ [1]ನಿಶಿ ಮಂಜಿಷ್ಠೆ ಸಘೃತಮಪ್ಪಾ [2]ಕ್ಷೌದ್ರಂ ||
ಸ(ಶ)ಕಳಮಿವೊಂದಲ್ ಪಾನ |
ಪ್ರಕಟಿತಲೇಪನದೆ ನಿರ್ವಿಷಂ ಪರಮಾರ್ಥಂ || ೩೨ ||

ಮಂತ್ರಂ—ಓಂ ನಮೋ ಭಗವತೇ ಶಬರರಾಜಾಯ ಛೇದಯ ವಿಷಂ ಜೀವಯ ಮಹಾ ಶ(ಬ)ರ ಹೂಂ ಸ್ವಾಹಾ—

### ೧೩. ವತ್ಸಾ(ಚ್ಛಾ)ಸ್ಯಂ.

ಕಂ|| ಭವಮಾ[3]ಸರಟೀಗರ್ಭೋ |
ದ್ಭವಮೇ [4]ವತ್ಸಾಸ್ಯ ಮೆಂಬುದಕ್ಕಕ್ಕುಂ ಸಂ ||
ಭವಚಿತ್ರಮಂಡಲಂ [5]ಹ್ರ |
ಸ್ವವಿರೂಪಾತ್ಯಂತತೀವ್ರವಿಷಮೆನಿಸಿರ್ಕುಂ || ೩೩ || *

ಎಲ್ಲಾ ಮಂತ್ರಂ ಮರ್ದುಂ |
ಸಲ್ಲವಿದಕ್ಕಧಿಕಮಪ್ಪ ಪಾಪಿಗೆ ಬರ್ಕುಂ ||
ಮೆಲ್ಲನೆ ಬಂದು ತಿನಲ್ಕಂ |
ಕೊಲ್ಲದೆ ಮಾಣದು ವಿಧಾತ್ರನಾದೊಡಮವನಂ || ೩೪ ||

### ೧೪. ಕುಕ್ಕುಟಾಸ್ಯಂ—೧೫. ಸಂದಷ್ಟ್ವಂ.

ಕಂ|| †ಧರೆಯೊಳ್ **ಕುಕ್ಕುಟಿ** ತನುವು |
ಬ್ಬರಿಸಿರ್ಕುಂ ವಕ್ರತುಂಡಕಂ **ಸಂದಷ್ಟ್ವಂ** ||
ಪರಿಕಿಪೊಡಿಂತಿವಸಾಧ್ಯಂ |
ವರವಿದ್ಯಾಭೇಷಜಂಗಳಿರ್ದುಂ ಪಿರಿದುಂ || ೩೫ ||

### ೧೬. ಶಂಖಾಸ್ಯ. ೧೭. ದಂತುರ. ೧೮ ಮಿಶ್ರಿತಂ.

ಕಂ|| ‡**ಶಂಖಾಖ್ಯತುಂಡ ದಂತುರ** |
ನೆಂಬೆರಡುಂ ತಮ್ಮ ನಾಮದೊಳ್ ಸಮರೂಪಂ ||
'ಕಿಂಬಹುನಾ' **ಮಿಶ್ರಿತ** ನಾ |
ಡಂಬರಮೆಲ್ಲವಱ ರೂಪನನುಕರಿಸಿರ್ಕುಂ || ೩೬ ||

---

1. ನಿತಿ (ಗ) 2. ಕ್ಷಯಿಂದ್ರಂ (ಖ) 3. ಸರಚಿ (ಗ) 4. ಮೇತತ್ವಾಸ್ಯಮಂ (ಗ) 5. ಹ್ರಸ್ವರೂಪಾತ್ಯಂತ (ಗ)

* ಮೇಷಮುಖದ ವಿಷಯವು ಎಲ್ಲಾ ಪ್ರತಿಗಳಲ್ಲೂ ಗಳಿತವಾಗಿರುವುದು.

† ಇಲ್ಲಿಂದ (೩೫) ಮುಂದಣ ೨ ಕಂದಗಳು (ಗ) ಪ್ರತಿಯಲ್ಲಿಲ್ಲ.

‡ (ಗ) ಪ್ರತಿಯಲ್ಲಿಲ್ಲ. ಆರಂಭದಲ್ಲಿ (ಪದ್ಯ ೨ ರಿಂದ ೫ ರ ವರೆಗೆ) ಇಪ್ಪತ್ತೊಂದು ಗೋನಸಭೇದಗಳೆಂದು ಹೇಳಿದ್ದರೂ ಅಲ್ಲಿ ೧೯ ಮಾತ್ರವೇ ಲೆಕ್ಕಕ್ಕೆ ಬರುತ್ತವೆ. ಆದರೆ ಪದ್ಯ ೩ ರಲ್ಲಿ ಬಾಧಕವೆಂಬುದನ್ನೂ, ಪದ್ಯ ೪ ರಲ್ಲಿ ಸ್ವಚ್ಛಂದವೃತ್ತಿ ಎಂಬುದನ್ನೂ ಮತ್ತೆರಡು ಭೇದಗಳಾಗಿ ಗ್ರಹಿಸಬಹುದು. ಆದರೆ ಇವು ವಿವರಣೆಯಲ್ಲಿ ಯಾವ ಪ್ರತಿಯಲ್ಲೂ ದೊರಕುವುದಿಲ್ಲ. ಇವುಗಳಂತೆಯೇ ಮೇಷಮುಖವೆಂಬ ಭೇದದ ವಿವರಣವೂ ಮಾರ್ಜಾರಾಸ್ಯದ ಲಕ್ಷಣವೂ ಯಾವ ಪ್ರತಿಯಲ್ಲೂ ಇಲ್ಲ. ಇವು ಗಳಿತವಾಗಿರಬಹುದೆಂದು ತೋರುವುದು.



ಕಂ|| ಅನುಪಮರಕ್ತಸ್ರವಮೇ |
ದನೆಯಂ ನಾನಾವಿಕಾರ ಮೂರ್ಛೆಗಳಂ ದ ||
ಷ್ಟನೊಳಾಗಿಸುಗುಂ ವಿಷಮೇ |
ದನೆಯಂ [1]ಪಿಂಗಿಪೊಡಿದೊಂದು[2] ಮಂತ್ರಂ ಸಾಲ್ಗುಂ || ೩೭ ||

ವ|| ಅದೆಂತೆಂದೊಡೆ—

ಮಂತ್ರಂ—[3]ಓಂ ಹ್ರೀಂ ಫಟ್ ಸ್ವಾಹಾ—

ಕಂ|| ಕಪಟಪ್ರಪಂಚರಹಿತಂ |
ತ್ರಿಪಥದೊಳೆಸೆದಿರ್ಪ [4]ಮಣ್ಣನೊಪ್ಪಿರೆ ಪೂಸಲ್ ||
ಜಪಿಸುಗುಪದೇಶಮಂತ್ರಮ |
ನಪಗತವಿಷಮಂತೆ ಸಪ್ತರಾತ್ರಂ[5]ಬರೆಗಂ || ೩೮ ||

### ಸಮಸ್ತಮಂಡಲಂಗಳ್ಗವೌಷಧಂ.

ಕಂ|| ನಾನಾಮಂಡಲ ವಿಷಮಂ |
ನಾನಾ[6]ಭೇಷಜ ಸಮಂತ್ರಕಾಲೇಪನದಿಂ ||
ಜಾನಿಸೆ ಪರಿಹರಿಕು[7]ಮದಂ |
ಸೂನೃತಸಾಮಾನ್ಯವೈದ್ಯಮಂ[8] ಪ್ರಕಟಿಸುವೆಂ || ೩೯ ||

ವರಮೆನಿಪ ದೇವದಾಳಿಯ |
ನಿರುಪಮಮೆನಿಸಿರ್ದ ಸೋಮರಾಜಿಯ [9]ಬೀಜೋ ||
ತ್ಕರಮಂ ತುಪ್ಪದೊಳಂ ಮಧು |
ಬೆರಸಿರಲೀವುದು ಸಮಸ್ತವಿಷಹರಮಕ್ಕುಂ || ೪೦ ||

### ಅಂಜನಂ.[10]

ಕಂ|| ಪಾರದೆ ಪೆಱತಂ ತಾಳಿ(ಳ)ಕ |
ಪಾರದಮಂ ದೇವದಾಳಿಯೊಪ್ಪುವ ರಸದಿಂ ||
ಜಾ(ಚಾ)ರಿಸಿ ಕ [11]ಣ್ಣೊಳೆಸಲ್ ಸಂ |
[11]ಹಾರಿಸುಗುಂ ಪಲವುಮಂಡಲಂಗಳ ವಿಷಮಂ || ೪೧ ||

---

1. ಪಿಡಿದೊಂದುಮಂತ್ರಂ (ಗ) 2. ಮಂತ್ರಮೆ (ಕ) 3. ಓಂ, ಹ್ರೀಂ ಫಟ್ (ಗ) 4. ಶ್ರೀಪದದೊಳೆಸೆದಿಪ್ಪದುಣ್ಣನೊಪ್ಪಿರೆ ಜಪಿಸಲ್ಪೂಸುಗೆ ಉಪಮಿತಮಂತ್ರನ (ಗ) 5. ರಾತ್ರಿಯೊಳೆವಲಂ (ಘ) 6. ಭೇಷಜನಸಮಂತ್ರ (ಗ) 7. ವಂದಂ (ಗ) 8. ವೈದ್ಯ ಮಂಗರಾಜನಮತದಿಂ (ಗ) 9. ಜೀವೋ (ಗ) 10. ತದಂಜನ (ಘ) ಅಂಜನ ಪಾನ ಲೇಪನಯೋಗ್ಯಂ (ಕ) ಪಾನಲೇಪನಪ್ರಯೋಗಂ (ಖ) 11. ಕಣ್ಗೊಳಿಸೆ (ಖ) 12. ಸಂಹಾರಿಪುದುಂ (ಗ)

ಉ|| ಇಂಗುಳದೊಳ್ಪಿದಪ್ಪ ಗುಳಮಂ ಪೊರೆದೆಕ್ಕೆಯ ಪಾಲ್ಮರಂಗಳಾ |
1ಸಂಗತಮಪ್ಪ ದುಗ್ಧದೊಳೆ ಕೂಡಿಯದಂ ಪಲವಪ್ಪ ಬಳ್ಳಿಪು ||
ಲ್ಲುಂಗಿಡುವೆಂಬಿವೆಲ್ಲಱ 2ಸೋನೆಯುತಂಗಳದಾಗಿ ಮಾಡಿ ಮ |
ತ್ತೀಂ ಗಡವೊಳ್ಪಿತಪ್ಪ 3ಪೊಸತುಪ್ಪದ ಪಾಕದೊಳಟ್ಟು ಮತ್ತದಂ || ೪೨ ||

ಕಂ|| ಬೆರಸದ4ಱೊಳ್ ಜೇಪಾಳದ |
ತಿರುಳಂ ನರಮೂತ್ರದಿಂದೆ ಕಣ್ಣೊಳಮೆಚ್ಚಲ್ ||
ಪರಿಹರಿಕುಂ ಫಣಿಗೋನಸ |
5ದರಿದೆನಿಪ 6ವಿಷಂಗಳೆಲ್ಲಮುಂ ಪಱಿಪಡುಗುಂ || ೪೩ ||

ಪಾನ ಲೇಪಯೋಗಂ.7

ಕಂ|| ಮಡುವಾಗಲ್ ತ್ರಿಕಟುಕಮಂ |
ತೊಡವೆರಸಲ್ಕರೆದು ಸಲಿಲದಿಂ 8ಲೇಪಿಸದಂ ||
9ಕುಡಿಸಲ್ಕೆ ನಸ್ಯಕರ್ಮಮ |
ನೊಡರಿಸೆ ಕಿಡುಗುಂ ಸಮಸ್ತ 10ಮಂಡಲವಿಷಮುಂ || ೪೪ ||

ಚಂ|| ಬೆೞಲೆಸೆ11ವೆಕ್ಕೆ ಲೊಕ್ಕಿ ನೆಲದಾೞ್ ಕಣ ಚಂದನ ಬಿಲ್ವ ಧಾತ್ರಿ ಹಿ |
ಟ್ಟೞಿಕ ಸುಗಂಧಿ ಬಾವುಜಿಗೆ ದಾಡಿಮ ಮೊಲ್ಲೆ ಲವಂಗ ಮೋಚ ಕಂ ||
ದೞ ಕುಟಜ ಪ್ರಸೂನ ಮಧುಕಂಗಳಿವೊಂದಿ ಸಮಾನಮಾಗಲಾ |
ಕಳ ಪೊಸಪಾಲೊಳಂ ಘೃತಮನೊಪ್ಪಿರೆ ಕೂಡುವುದಲ್ಲಿ ರಾಗದಿಂ || ೪೫ ||

ಕಂ|| ಬೆರಸಿರೆ ಪುಳ್ಳುಂಬುಣಿಸೆಯು |
12ಮರೆದವಱೊಳ್ ತುಪ್ಪಮುೞಿಯಲಟ್ಟೞಿಪುಗೆ ಶ ||
ರ್ಕರೆ ವೆರಸದ 13ಅರ್ಧದನಿ |
ತ್ತಿರಲದಱಿಂ ಪಾನ ನಸ್ಯ ಲೇಪನ ವಿಧಿಯಂ || ೪೬ ||

ಮಾಡುವುದು ಬೞಿಕ್ಕದಱಿಂ |
ಸೂಡಿನೊಳತ್ಯಧಿಕಸರ್ಪಮಂಡಳವಿಷಮುಂ ||
14ನೀಡಿರದೞಿಗುಂ ಬಗೆಯಲ್ |
ನಾಡಾಡಿಯ ಮರ್ದಿದರ್ಕ್ಕೆ ದೊರೆ15ಯೆನಿಸುಗುಮೇ || ೪೭ ||

1. ಸಂಗರಮಪ್ಪ (ಕ) 2. ಸೊನೆಯುಪ್ರಯುತಂಗಳಾಗೆ (ಕ) ವೆಲ್ಲವರ ಸಾರರಸಂಗಳ ನೆಯ್ದಿ ಕೊಂಡು ಮತ್ತಂ (ಘ) ವೆಲ್ಲವಱಸೋನೆಯುತಂಗಳವಾಗಿ (ಖ) 3. ಪೊಸತಪ್ಪ ಪರೀಕ್ಷಿಸಲಶುದ್ಧಮಪ್ಪು ದಂ (ಗುಂ) (ಖ) ಪೊಸತಪ್ಪ ಪರೀಕ್ಷಿತ ಶುದ್ಧಮಪ್ಪುದುಂ (ಗ) 4. ದಱೊಳೆಪಾಲದ (ಖ) 5. ಪಿರಿ ದೆನಿಪ (ಗ) 6. ಬಿಸಂಗಳಂ ಮನೋಹರಚರಿತಾ (ಕ) (ಘ) 7. ಪಾನ ಲೇಪನಪ್ರಯೋಗಂ (ಘ) ಇಲ್ಲಿ (ಗ) 8. ಲೇಪಿಸಲದಂ (ಖ) 9. ಕುಡಿಸಲಘುನಸ್ಯ (ಖ) (ಗ) ಕುಡಿಸಲದು (ಘ) 10. ಮಂಡ ಲದವಿಷಂ (ಗ) (ಖ) 11. ವೆಕ್ಕೆನೆಲದಾಳ್ಗಣ (ಖ) ವೆಕ್ಕೆಲೊಕ್ಕಿದಾಳ್ಕಣ—ಮೊಲ್ಲೆವಂಗ—ಪೊಸ ಜೋಳಂ ಘೃತಮನೊಪ್ಪಿರೆ: ಕೊಡುವುದಹಿರಾಗದಿಂ (ಗ) 12. ಮರವದರೊಳು (ಗ) ಮರವಡಱೊಳು (ಖ) ಸುರಸಮುಮಂ ತುಪ್ಪ (ಘ) 13. ರರ್ಧಮನಿಟ್ಟಿರಲದ, ರರ್ಧಮುಬಿಟ್ಟಿರಲ್ (ಖ) 14. ನೋಡ ಲ್ಕೞಿಗುಂ (ಕ) 15. ಪೆಱತುಂಟೇ (ಕ) (ಗ)



ಕಂ|| *ಚಿರಮೆಸೆವ ಕಾಗೆದೊಂಡೆಯ |
ನರೆದಂಬಿಲದಿಂದಮಿಾಂಟೆ 1ಪೂಸಲ್ ನಸ್ಯ ||
ಕ್ಕಿರದೀಯಲ್ ವಿಷದುಗ್ರತೆ |
ಯರಳೆಯನುರಿಗೊಂಡ ಮಾೞ್ಕೆಯಿಂ ಪಱಿಪಡುಗುಂ || ೪೮ ||

ದಾಗುಡಿ ಮಡುವಾಗಲ್ ಗಿಣಿ |
ಮೂಗನ ಗೆಡ್ಡೆಗಳೊಳಾವು 2ದಾದೊಡವೊಂದಂ ||
ಬೇಗದೊಳರೆ 3ದೀಯಲ್ ವಿಷ |
ಮಾಗಳೆ ಕಿಡುಗುಂ ಸು(ಸ)ಪಾನ ಲೇಪನ ವಿಧಿಯಿಂ || ೪೯ ||

ಮರಿಚಂ ಮಡುವಾಗಲ್ ನಾ |
ಗರ4ಮಾಗಧಮೆಂಬಿವೆಲ್ಲಮಂ ಜಳಯುತದಿಂ ||
ದರೆದೆಯ್ದೆ ಕುಡಿಸೆ ಪೂಸು |
ತ್ತಿರೆ ನಸ್ಯಂಗೆಯ್ಯೆ5ಮಂಡಲೋಗ್ರವಿಷಘ್ನಂ || ೫೦ ||

ಚಂ|| [ನಿರುಪಮಮಪ್ಪ ಧಾತ್ರಿ ಮಡುವಾಗಲು 6ತಂಡಸೆ ಕಾಗಿದೊಂಡೆ ಪೆ |
ರ್ಗುರುಟಿಗೆ ಮಾದಲಂ ಪುಲಿಗಿಲೊಪ್ಪುವ ಮಂಡಲಮಾರಿಯೆಂಬಿವಂ ||
ಪರಿಕಿಸೆ ಕೂಡೆ ಕೊಂಡರೆದು ಲೇಪಿಸೆ] ಪಾನದೊಳೀಯಲಾಕ್ಷಣಂ |
ಪರಿಗುಮಶೇಷಮಂಡಲವಿಷಂ ಕವಿತಾರ7ಮಣೀಯನುಕ್ತಿಯಿಂ || ೫೧ ||

ಕಂ|| *ಸುಷುಮ ಮೆನಿಪ್ಪದಿದೊಂದೇ |
ವಿಷಮುಂಗುರಿ ಯೆಸೆವ ಲೇಪನಕ್ರಿಯೆಯಿಂ ನಿ ||
ರ್ವಿಷಮಕ್ಕುಂ ದಷ್ಟನೊಳಂ |
ತುಷಮಂ8ತೂಱಿದವೊಲಖಿಳ 9ಮಂಡಲದ ವಿಷಂ || ೫೨ ||

*10ಖ್ಯಾತಿವಡೆದಿಂದ್ರವಾರುಣಿ |
ಮಾತೇಂ ಪೆಱತಣ್ಣ ಕಾಗೆದೊಂಡೆಯಿವಂ ನಿ ||
ರ್ಭೀತಂ ಕಲೞಿಯಿಂ 11ಪೂಸಲ್ |
ಜಾತಮಹಾಮಂಡಲೋಗ್ರತರವಿಷಮ(ಮಿ)ೞಿಗುಂ || ೫೩ ||

*ಅರೆವುದಜಮೂತ್ರದಿಂದಂ |
ಗುರುಪಂಚಾಂಗಮನೆ 12ಸಣ್ಣಮಾಗಲ್ ಪೂಸು ||
ತ್ತಿರೆ ಪಾನದೊಳೀಯಲ್ಕಂ |
ಪರೆಗುಂ ಗೋನಸವಿಶೇಷ (ವಿಷಮು) ವಿಷಂಗಳ್ || ೫೪ ||

1. ಮಿಟ್ಟಪೂಸುಗೆ (ಕ) 2. ದಾಗಲಿಲಯೊಂದಂ (ಕ) 3. ದೀವುದು (ಕ) 4. ಮಂಗಧ (ಕ) 5. ಮಂಡಲಾಗ್ರ (ಕ) 6. ಗೆಂಡಸೆ (ಖ) ಗೆಂಡಗೆ (ಗ) 7. ರಮಣೀಪ್ರಯೋಕ್ತಿಯಿಂ (ಕ) 8. ತೋಱಿ ದವೊಲಖಿಳ (ಕ) ತನಱಿದವೊನಖಿಳ (ಖ) ತಱಿ (ಗ) 9. ಮಂಡಲವಿಷಗಳ್ (ಘ) 10. ಖ್ಯಾತಿ ವಿಡಿದಿಂ (ಗ) 11. ಪೂಸುತಮಹಾಮಂಡಲೇ (ಗ) 12. ಸುಣ್ಣ (ಗ)
* ಇಲ್ಲಿಂದ ೩ ಕಂದಗಳು (ಗ) ಪ್ರತಿಯಲ್ಲಿಲ್ಲ.

ಕಂ|| *ಹೆಮ್ಮರನ ತಿಗುಡು [1]ಹಲಿನಿಯು |
ತಮ್ಮಂಡಲವಾ(ಮಾ)ರಿ ವಜ್ರಲತೆ ತಿಂತ್ರಿಣಿಯೊಳ್ ||
ಸಮ್ಯಕ್ಪರ್ಣಂಗಳುಮಂ |
ಗಮ್ಮನೆ ಕಱಿಯಿಂದೆ ಬೇದುಗಟ್ಟಿ ವಿಷಘ್ನಂ || ೫೫ ||

ಹುಲಿಗಿಲು ಹುಣಿಸೆಯ ಸೊಪ್ಪಿಂ |
ದೆಲಗಂ [3]ಭೂತಾಂಶಿ ತರಣಿ ಯೆಂಬಿನಿತಱೊಳಂ ||
ದಲಸದೆ ಬೆರಸಂಕೋಲೆಯ |
ನೊಲವಿಂದಂ ಬೇದುಗಟ್ಟಲಖಿಳವಿಷಘ್ನಂ || ೫೬ ||

### [4]ವ್ರಣಧೌ(ಷಧಂ)ತಂ.

ಉ|| ಬೆಚ್ಚನೆ [5]ಮಾಱ್ವುದೊಪ್ಪವಜಮೂತ್ರಮ[6]ನಂತದಱಿಂದೆ ತೊಯ್ದು ನೀಂ |
ಬಿಚ್ಚತವೊಪ್ಪವಂ[7]ತಲಸದಿರ್ಪುದುಮಂ ಕೊಱೆದಿರ್ದ ಚರ್ಮಮಂ ||
ಪೆರ್ಚಿದ ಪುಣ್ಗಳಂ [8]ತೊಳೆದು ಕೊ(ತೊ)ಯ್ದು ಬಱಿಕ್ಕೆ ಜಲಾಶಯಂಗಳೊಳ್ |
ಪಚ್ಚನೆಯಪ್ಪ ನೀರ್ಗಡ(ಹು)ವಮಂ ಕರಿಮಾಡಿಡೆ ತದ್ವಿಷಾಪಹಂ || ೫೭ ||

ಕಂ|| ಪುಣ್ಣಿನ [9]ಸುತ್ತೆವರಂ ತೊಡೆ |
ಯಣ್ಣನೆ [10]ಮಗ್ಗಾರೆವೆರಸು ನೀ[11]ರ್ಗಡ(ಹು)ವಮುಮಂ ||
ಸಣ್ಣಗೆಯೊಳಿಟ್ಟು [12]ಭರದಿಂ |
ನುಣ್ಣನೆ ಯರೆದಮಳಚರಿತನನುಮತದಿಂದಂ || ೫೮ ||

### †ಘೃತಕಜ್ಜಳಂ.

ಕಂ|| ವಿಮಳಮೆನಿಪಿಂದ್ರವಾರುಣಿ |
[13]ಯಮೂಲಮಂ ಘೃತದೊಳ(ಳಿ)ಟ್ಟು ಪೂಸುಗೆ ಬಱಿಯಂ ||
[14]ಕ್ರಮದಿಂ ನಾಯ್ವೇಱಿನ ಕರಿ |
ಯಮರ್ವಿನೆಗಂ ತಳಿ(ಳೆ)ಯೆ ವಿಷದ ಪುಣ್ಗಳ್ ಕಿಡುಗುಂ|| || ೫೯ ||

---

1. ಹುಲಿಗಿಲಿಯುತಂ (ಕ) ಹರಿನಿ (ಗ) 2. ತಿಂತ್ರಿಣಿಯಸ್ವಂಮೆನಿಪದಳ್ಮಂ (ಖ) ತಿಂತ್ರಿಣಿಯಶ್ವಗಂಧಿಯೆನಿಪದಳಂಗಳ್ಮಂ. 3. ಯಾತಾಂಶಿ (ಗ) ಭೂತಾಶಿ (ಕ) 4. ಇನ್ನು ಚಿತ್ರಮಪ್ಪ ಪರಿಯಂ ಪೇೞ್ವೆನದೆಂತೆಂದೊಡೆ (ಗ) 5. ಮಾಳ್ಪವಜಮೂತ್ರ (ಗ) 6. ಮದಂತಱಿಂದೆ ತೋಿದು (ಗ) (ಕ) 7. ತಲಸದೆ ನಿಪ್ಪುದುಮಂತೊಳೆ (ಕ) (ಗ) 8. ತೊಳದೆಕಾಯ್ದು (ಖ) 9. ಸುತ್ತವರಂ (ಘ) ಸು(ಪು)ತ್ತುವರಂ (ಗ) ಸುತ್ತಂವರಂ ತೊಂಡೆ (ಖ) 10. ಮಂಗಾರೆ (ಖ) 11. ಸೇರ್ಗಡಮಮ (ಗ) 12. ಭವದಿಂ ಯೆಣ್ಗೆಯರದಮಳ (ಗ) 13. ಯಮೂಲಂಘೃತ (ಗ) ಸಮೂ (ಕ) 14. ಕ್ರಮದಿಂದೆ ನಾಯಿವೇಳನುಕರ್ಯಮರ್ವಿನೆಗಂ (ಗ) (ಕ)

* (ಗ) ಇಲ್ಲ.

† ವ|| ಇನ್ನು ನಾನಾಮಂಡಲಂಗಳ ತಜ್ಜಾತಿಗಳ ವಿಷಪ್ರಕರಮಂ ಪ್ರತ್ಯೇಕ ವುಸು(ಸಿ)ರ್ವೊ(ರ್ವ)ಡೆ ಪಂಡಿತ ಮಾಂತ್ರಿಕರ ಶ್ರೋತ್ರಕ್ಕೆ ಅಂಜಿಕೆಯಪ್ಪುದದಱಿಂ ಸಂಕೀರ್ಣಮಪ್ಪ ಮಂತ್ರ ಯಂತ್ರ ಔ(ಅವು)ಷಧಿ ಪಾನಲೇಪಾದಿ ಜನಂಗಳಂ (ಲೇಪಾಂಜನಾದಿಗಳಂ ಎಂದಿರಬೇಕು). ವಿರಚಿಸುವೆನದೆಂತೆಂದೊಡೆ. (ಗ)



### ರಕ್ತಮಂಡಲಕ್ಕೆ.

ಕಂ|| [1]ಎಕ್ಕೆಯ ಹಿಡುಹಿಡುಕೆಯುಮಂ |
ತೆಕ್ಕನೆ ತೀವಿರ್ದ ಕಱಿಯೊಳ[2]ರೆದಿಡು ಪುಣ್ಣೊಳ್ ||
ನಿಕ್ಕುವಮರುಣಾಭನ ವಿಷ |
ಮಿಕ್ಕುರ್ಮೆ ಪೇೞ್ ತನ್ಮಹೂರ್ತ[3]ಮವಿತಥವಚನಾ || ೬೦ ||

### [4]ತೂರ್ಯನಾದಮೆಂಬ ಪಾವಿನ ವಿಷಕ್ಕೆ.

ಕಂ|| ಏನಯ್ಯ ಘೃತದೊಳರುಣ ಕೃ |
ಶಾನುವ ನೊಡವೆರಸಿ ಪೂಸೆ ಕಳ್ಳಿಯ ಪಾಲಿಂ ||
[5]ದೇನಸ್ಸ್ವರೂಪಮುಹ ವಿಷ |
ಮೇನಱಿಯದೆ ತೂರ್ಯನಾದಜನಿತಂ ಕ್ಷಣದೊಳ್ || ೬೧ ||

### ಬಿಲ್ಲುರಿಗನ ವಿಷಕ್ಕೆ.[6]

ಕಂ|| [7]ಬಿಲ್ಲುರಿಗಂ ಕೊಂಡೊಡೆ ತ[8]ಡ |
ವಿಲ್ಲದೆ ತೊಡೆ ಕಡವು ನೀಲಿ ಸುಗ್ಗೆಯ ಬೇರಂ ||
ತಲ್ಲಣಿಸದೆ ಮೊಲೆವಾಲಿಂ |
ದಲ್ಲದೊಡಂಬಿಲದೆ ಪೂಸೆ ನಿರ್ವಿಷಮಕ್ಕುಂ || ೬೨ ||

[9]ವರಮಿಟುಣಿ ಸುಗಂಧಿಗಳೆಂ |
ಬೆರಡಱ ಬೇರ್ಗಳನೆ ಚೂರ್ಣಿಸದಱೊಳ್ ತುಪ್ಪಂ ||
ಬೆರಸಿರದೆ ಕುಡಿಸಲದು ಬಿ |
ಲ್ಲುರಿಗನ ವಿಷಮಂ ಕ್ಷಣಾರ್ಧದೊಳ್ [10]ಪರಿಹರಿಕುಂ || ೬೩ ||

### ತೂರ್ಯನ ವಿಷಕ್ಕೆ. [11]

ಕಂ|| ಚಿಕ್ಕನೆ ಬಿಲ್ವಂ ಲೊಕ್ಕಿಯ |
ತ್ವ(ತೊ)ಕ್ಕೊಂದಿರೆ ಕುಡಿಸು [12]ಬದಣೆಯೆಲೆಗಳ ರಸಮಂ ||
ಕ(ತ)ಕ್ಕನಿತಂ ಕೊಳ್ ಪೂಸ |
ಲ್ಕಕ್ಕಲಿಕುಂ [13]ತೂರ್ಯನುಗ್ರವಿಷಮಾ ಕ್ಷಣದೊಳ್ || ೬೪ ||

---

1. ಎತ್ಕೆಯ ಹಿಡುವಿಡುಕೆಳ್ಮಂ (ಕ) ಹಿಕ್ಕೆಪಿಡಿವಿಡಿಕೆಗಳುಮಂ (ಖ) ಎಕ್ಕೆ (ಗ) 2. ಳರೆದಿಡೆ ಪುಣ್ಣೊಳ್ (ಘ) 3. ಮವಿರಳವಚನಾ (ಘ) ಮತಿತಥವಚನಾ (ಗ) 4. ತೂರ್ಯನಾದ ಮಂಡಲ ವಿಷಕ್ಕೆ (ಘ) 5. ದಿನಶ್ವರೂಪ (ಗ) ದೀರೂಪಮಹಾ (ಖ) 6. ಬಿಲ್ಲುರಿಗನವಿಷಕ್ಕೆ ತತ್ರಪಂಚವೈದ್ಯಮಂ ಪೇೞ್ವೆನು (ಗ) 7. ಬಿಲ್ಲುಲಿಗಂ (ಗ) 8. ತಳುವಿಲ್ಲದೆ (ಕ) ಕೊಡೆ (ಗ) 9. ಮರಮಿಟುಣಿಯಸು (ಕ) 10. ಸಂಹರಿಕುಂ (ಖ) 11. ತುಯ್ಯನವಿಷಕ್ಕೆ (ಗ) ಕುಯ್ಯನವಿಷಕ್ಕೆ (ಖ) 12. ಬಡಣೆ (ಕ) 13. ತುರ್ಯನುಗ್ರವಿಷದಿಂದಷ್ಟಂ (ಗ) ಕೈಯನುಗ್ರವಿಷದಿಂದಷ್ಟಂ (ಕ)

ಕಂ|| [1]ಸೇರಿಪುದೀಶ್ವರಿಯಂ ಗೋ |
ಕ್ಷೀರದೊಳರೆ[2]ದಂದು ಕುಡಿಸಲಾಕ್ಷಣದಿಂ ದು ||
ರ್ವಾರಮೆನಿಸಿರ್ದ [3]ತೂರ್ಯ್ಯನ |
ಘೋರವಿಷಂ [4]ಕಿಡುಗುಮಿಂತಿ ದಿಳೆಯೊಳಮೋಘಂ || ೬೫ ||

ಸಾರತರಮೆನಿಸಿ ಮೆಱೆವೀ |
ನೀರಸನಿಯ [5]ನೊಪ್ಪಿಕೊಂಡು ಕೞಿಯಿಂದೀಂಟಲ್ ||
ಘೋರನೆ [6]**ತೂರ್ಯ್ಯನ** ವಿಷದ ನಿ |
ವಾರಣಮಕ್ಕುಂ ಸಮಸ್ತ ಗುಣಗಣನಿಳಯಾ || ೬೬ ||

ಅರಿಸಿನಮಂ ಪಿಪ್ಪಲಿಯಂ |
ಮರಿಚಮನೊಡವೆರಸಿಕೊಂಡು ರವಿದುಗ್ಧದೆ ಬಿ ||
ತ್ತರದಿಂ [7]ಬಾರಿಸಿ ಪೂಸ |
ಲ್ಕಿರದೞಿಗುಂ [8]**ತೂರ್ಯ್ಯ**ನುಗ್ರವಿಷಮಾಕ್ಷಣದೊಳ್ || ೬೭ ||

[9]ಪೞನೀರಿಂದಂ ಮರ್ದಿಸಿ |
[10]ಚಳೆಯದೊಳಂ ಪೂಸೆ ಕಿಱಿಯ ಕುಟಜದ ಬಿತ್ತಂ ||
ಕೊೞೆವಾವಿನ [11]**ತೂರ್ಯ್ಯನ** ವಿಷ |
[12]ಮೞಿಗುಂ ಗೋರಟೆಯ ಮೂಲಮಂ ಪೂಸಲೊಡಂ || ೬೮ ||

ತರಳ|| ನವಿಲ[13]ಕೊಟ್ಟು ಕರಂಜ ಪುಷ್ಪಫಲಂ ಘೃತಂ ಮಧು ಬೇವು ಸಾ |
ಸಿವೆಗಳೆಂಬಿವನಕ್ಕೆ ನೆಯ್‌ಬಜೆ ಬಂಜೆ[14]ವಾಗಲ ಮೂಲಮೆಂ ||
ಬಿವನೆ [15]ತಂಗೆ ತ್ರಿಶೂಲಿಯೆಂಬುದನಕ್ಕೆ ಸಂಭವಿಸಿರ್ದುದಂ |
[16]ಕವಳಮಂ ಕುಡೆ ಪಿಂಗುಗುಂ ಕೊೞೆವಾವುಕೊಂಡ ಮಹಾವಿಷಂ|| ೬೯||*

ಕಂ|| [17]ಪೞವದಣೆಯ ಮೂಲಮುಮಂ |
ಕೞಿಯಿಂದೀಂಟಿಸಿದೊಡೞಿಗುಮಾ ಕ್ಷಣದೊಳದುಂ ||
ಕೊೞೆವಾವಿನ ವಿಷದುಗ್ರಂ |
ಪೞನೀರಿಂ ನಸ್ಯಲೇಪದಿಂ ಗೋರಟೆಯಾ || ೭೦ ||

---

1. ಸೇರಿಪದೈಶ್ವರ್ಯಂ (ಕ) ಶರರಿಪು (ಗ) 2. ಳರೆತಂದು (ಕ) 3. ತುರ್ಯ್ಯನ (ಖ) ಕು(ಕ) ಯ್ಯ್ಯನ (ಘ) ತುಯ್ಯ್ತವಘೋರ (ಗ) 4. ಕಿಡುಗುಮಖಿಳ ಕವಿಜನಮಹಿತಾ (ಘ) ಕೆಡುಗುದಿಳೆಯೊಳಿಂ (ಗ) 5. ಸೊಪ್ಪನರೆದು. 6. ಕುಯ್ಯ್ಯನ ವಿಷವ ನಿವಾರಿಸುಗುಂ ಕವಿಕುಲಾಬ್ಜ ಭಾಸ್ಕರಮತದಿಂ (ಘ) 7. ಜಾರಿಸಿ (ಕ) ಚಾರಿಸಿ (ಗ) 8. ಕುಯ್ಯ್ಯ (ಕ) ತುರ್ಯ್ಯ (ಗ) 9. ಎಳೆನೀರಿಂದಂ (ಗ) ಪರೆಯನೀ (ಖ) 10. ವಳೆಯದೊಳೆ(ಳೀ) (ಗ) 11. ತುರ್ಯ್ಯನ (ಗ) 12. ಮಿಳಿಗುಂ (ಗ) 13. ಕಟ್ಟು (ಕ) 14. ಬಂಜೆಮಡುವಾಗಲ (ಕ) 15. ತಿಂಗೆ. 16. ಕಳಕಳಮಂ (ಕ) 17. ಪಳೆವದನೆ (ಗ)

* ಇದು (ಗ) ಪ್ರತಿಯಲ್ಲಿಲ್ಲ.



ಕಂ|| [1]ಏಪಡೆವಾತಮರಿಯುತಂ |
ಜೇಪಾಳಮನಿತ್ತೊಡಲ್ತೆ ನಸ್ಯಾಂಜನದೊಳ್ ||
ಕೋಪದೆ ಪಿಡಿಯಲ್ ಕೊೞೆವಾ |
ವಾಪತ್ಕರ ಮೆನಿಸಿದುಗ್ರವಿಷಮದು [2]ಕಿಡುಗುಂ || ೭೧ ||

[3] ಮಂಡಲಮಾರಿ|ಸುವಾರುಣಿ |
ಮಂಡಿತಮೆಂದೆನಿಸಿ ತೋರ್ಪ ಬೆಳ್ವಾಗಲಿವಂ ||
ಕೊಂಡರೆದು [4] ಪೂಸೆ ಕುಡಿಸ |
ಲ್ಕಂಡಲೆವುದೆ ಕೊೞೆತಪಾವಿನುಗ್ರೋಗ್ರವಿಷಂ || ೭೨ ||

ಮಂಡಲಮಾರಿಯುಮಂ ಭೂ |
ಮಂಡಲವಿಖ್ಯಾತ ಮಪ್ಪ ನವಣೆಯ ಪಿಟ್ಟಂ ||
ಕೊಂಡೊಡನೆ ತೊಳಸಿ ತಿನಲತಿ |
[5]ಮಂಡಿತಮದು ಕೊೞಕನುಗ್ರವಿಷಮಂ ಕಳೆಗುಂ || ೭೩ ||

ಬೇಳೆಯ ಪತ್ರಂಗಳೊಳಂ |
[6]ಬೇಳೆಯ. ಗೆಡ್ಡೆಯನೆ ಕೂಡಿ ಮರ್ದಿಸಿ[7]ಕುಡಲೇಂ ||
ಪೇೞಲರಿದೆಂಬ ಕೊಳಕನ |
ಚೇೞಿನ [8]ಪಾವರಣೆಯುಗ್ರ ವಿಷ[9]ಮನದೞಿಗುಂ || ೭೪ ||

### [10]ಬೆಂತರೋರಗನ ವಿಷಕ್ಕೆ.

ಕಂ|| ಚಿಕ್ಕಣಿಕೆಯ ರಸಮಂ ಮೂ |
ತ್ರಕ್ಕಂ ಸರಿಯಾಗಿ ಬೆರಸಿ ನಸ್ಯಂಗೆಯ್ಯಲ್ ||
ಚಿಕ್ಕನೆ ಕಳೆಗುಂ [11]**ಬೆಂತರ** |
ದಿಕ್ಕೆಯ ವಿಷಮಂ ಪಿಶಾಚಭಯಮಂ ನಯದಿಂ|| || ೭೫ ||

ಮರಿಚಂ ಪಿಪ್ಪಲಿ ಪಾಟಲಿ |
[12]ಕರವೀರಂ ಭಾನುಕುಸುಮಮೂಲಂಗಳಿವಂ ||
ಬೆರಸಿ ಕೞಿಯಿಂದೆ [13]ಪೂಸಲ್ |
ಪರೆಗುಂ **ವ್ಯಂತರಮಹೋರಗಂ**ಗಳ [14]ಗರಳಂ || ೭೬ ||

---

1. ಪಡೆಮಾತು ಮರಿಚಯುತಂ (ಕ) 2. ಪರೆಗುಂ (ಕ) 3. ಮುಂದಂಮಾರಿಸು ವಾರುಣಿ (ಗ) 4. ಕುಡಿಸೆ ಪೂಸಲ್ಕಂಡಲೆವುದೆ ಕೊಳೆತ(ಕ)ಪಾವಿನುಗ್ರವಿಷಂಗಳ್ (ಘ) ಕುಡಿಸೆ ಪೂಸಲ್ಕಂಡಲೆವುದೆ ಕೊಳೆದ ಪಾವಿನುಗ್ರದವಿಷಮಂ (ಗ) 5. ಮಂಜನಮದು ಕೊಳೆತನುಗ್ರ (ಗ) 6. ಬಾಳೆಯ (ಘ) (ಕ) 7. ಕೊಳಲೆ (ಗ) 8. ಪಾವಿರಣೆಯ (ಖ) 9. ಮಿರದೞಿಗುಂ (ಕ) 10. ವ್ಯಂತರಸರ್ಪನವಿಷಕ್ಕೆ (ಘ) 11. ವ್ಯಂತರ (ಗ) 12. ಕರಂಜ (ಕ) 13. ಕುಡಿಸಲ್ (ಗ) 14. ವಿಷಮಂ (ಖ)

ಚಂ|| ಪರಿಕಿಸಿ ನೋಡಿ ನೋಡಿ ತಿಳಿದೋದುವುದೋದಿ ಮನೋನುರಾಗದಿಂ |
ಬರೆವುದು ಮತ್ತದಂ ಬರೆದು ಭಾವಿಸಿ ಗೋನಸವರ್ಣಭೇದಮಂ ||
[1]ಧರೆಗಱಿವಂತೆ ದಷ್ಟವಿಷಭೇಷಜಮಂತ್ರ [2]ಮನೆಯ್ದೆ ಪೇೞ್ದ [3]ಮ |
ತ್ತುರುತರಕೀರ್ತಿಯಂ ಪಡೆವುದೆಂದುಸಿರ್ದಂ ಕವಿತಾರಮಾಪ್ರಿಯಂ || ೭೭ ||

*ವ|| ಅದೆಂತೆಂದೊಡೆ—

ಕಂ|| ವಸ್ತುಕತೆ ತೆಗೆದು ನಾನಾ |
ಪ್ರಸ್ತುತವಹ ಮಂತ್ರಯಂತ್ರ ತಂತ್ರೌಷಧಿಯಂ ||
ವಿಸ್ತರಿಸಿ ಪೇೞ್ದ ಸುಜನಜ |
ನೋತ್ತಮ ಮಂಗರಸ ಕಾವ್ಯಸಾರೋದಯಮಂ || ೭೮ ||

— ಗದ್ಯ —

ಇದು
ಸಕಲವಿದಮಲ ಜಿನೇಂದ್ರೋಕ್ತಸಿದ್ಧಾಂತಪಯಃಪಯೋನಿಧಿಪಾರಗ
ಶ್ರೀಪೂಜ್ಯಪಾದಮುನೀಂದ್ರ ಚಾರುಚರಣಾರವಿಂದ
ಗಂಧಗುಣಾನಂದಿತ ಮಾನಸಂ
ಶ್ರೀ ಮದಖಿಲಕಲಾಗಮೋತ್ತುಂಗ
ಮಂಗವಿಭು
ವಿರಚಿತಮಪ್ಪ

## ಖಗೇಂದ್ರ ಮಣಿದರ್ಪಣದೊಳ್[6]

[4]ಗೋನಸ ವಿಶೇಷ ಕ್ಷುದ್ರಸರ್ಪ ವಿಷಾಪಹರಣ ವಿಧಾನಂ[5]
[6]ದಶಮಂ.
(ಮಂಗಳಮಹಾಶ್ರೀ.)

---

1. ಧರೆಯಱಿವಂತೆ (ಘ) 2. ಮನೆಯ್ದೆಪೇೞ್ದ....ರುತರ (ಕ) 3. ದಿಂತುರು (ಗ) 4. ಗೋನಸ ವಿಷ ಕ್ಷುದ್ರಸರ್ಪವಿಷಾಪಹರಣ ಚಿಕಿತ್ಸಾಧಿಕಾರಂ ನಾಮ ದಶಮಾಶ್ವಾಸಂ. 5. ವಿಧಾನಮೆಂಬಲ್ಲಿಗೆ ಪತ್ತನೆಯಾಶ್ವಾಸವು ಮುಗಿದುದು. ಮಂಗಳಮಸ್ತು (ಗ) 6. ದಶಮಾಧಿಕಾರಂ (ಖ)

* ಇದು (ಗ) ಪ್ರತಿಯಲ್ಲಿ ಮಾತ್ರವಿದೆ.

† ಈ ಅಧಿಕಾರಾಂತದಲ್ಲಿಯೂ ಮಾಲಿನೀವೃತ್ತವಿಲ್ಲ.

# ಏಕಾದಶಾಧಿಕಾರಂ

## [1]ವೃಶ್ಚಿಕಪ್ರಕರಣಂ.

ಕಂ|| ಶ್ರೀಕರುಣಾಕರನಂ ಜಿತ |
ಶೋಕವಿಮೋಹ ಸ್ಮರೋಗ್ರಭವ[2]ಸಂಹರನಂ||
ಏಕಾಗ್ರತೆಯಿಂ ನೆನೆದೀ |
ಲೋಕದ ವೃಶ್ಚಿಕ ವಿಶೇಷಮಂ [3]ಪ್ರಕಟಿಸುವೆಂ || ೧ ||

ಚಿನ್ಮಯ[4]ರನಿರ್ವರಂ ವಿಲ |
ಸನ್ಮುನಿಗಳ ನೊಸೆದು ಮೂವರಂ ಕ್ರಮದಿಂದಂ ||
ಮನ್ಮಾನಸದೊಳ್ ಭಾವಿಸಿ |
ತನ್ಮಂತ್ರ[5]ಮಹೌಷಧಂಗಳಂ ವಿವರಿಸುವೆಂ || ೨ ||

ಮ||ಸ್ರ|| ಅರು[6]ಣಂ ಹೇಮಾಭ ಪೀತಂ ಮಣಿ ಧವಳ ಹರಿದ್ರಾಭ ಕೃಷ್ಣಂ ಕುಳಿಂದಂ |
[7]ಸಿರರೇಖಾರಾಜಿಯಾ ರೋಮಶ[8]ಕಬಲನುಮಾ ತಾಳುಕಾಹ್ವಂಗಳಾಭಂ ||
ಪರಘಾತಾಖ್ಯೋಗ್ರ ಕರ್ಮಂಗ[9]ಳೆ ಮಧುನಿಭಯುಕ್ತಂಗ[10]ಳಾಗಿಂತು ಪತ್ತುಂ |
ಬೆರಸಿರ್ದಾ ಮೂಱಱೊಳ್ ವೃಶ್ಚಿಕಕುಲಮಿಳೆಯೊಳ್ ಪುಟ್ಟುಗುಂ [11]ಕಷ್ಟಜನ್ಮಂ ||

ಮ|| ಖಳಸರ್ಪಂಗಳ ಲೋಳೆ ಸೂಸಿದ ಧರಾಭಾಗಂಗಳೊಳ್ ವೃಶ್ಚಿಕಾ |
ವಳಿಯಕ್ಕುಂ [12]ಮಿಡಿಯಲ್ಕಮಂತವತಿ ಮೂರ್ಛಾ ಕಂಪ ಲಾಲಾಸ್ರವಂ ||
ಮಳಮೂತ್ರಂ ಮಱುಕಂ [13]ಬೆಮರ್ ಗುದಮರುತ್ಕ್ಷೋಪಂ ಮನಸ್ತೋಭಮಾ |
[14]ಕುಳಲಿಂಗಸ್ಫುರಣಂಗಳಕ್ಕುಮದಱಿಂ ತಜ್ಜೀವಿತಂ ದುರ್ಲಭಂ || ೪ ||

ಕಂ|| ಒಂದುಂ ಮೂಱಿಯ್ದೇೞ್ ಪ |
ನ್ನೊಂದುಂ ಪದಿನಯ್ದುಮಂತೆ ಪದಿನೆಂಟೊಂಬ ||
ತ್ತೆಂದಿಂತು ಧರೆಯ ವೃಶ್ಚಿಕ |
ಸಂದೋಹದ ಮಣಿವಿಭೇದಮಕ್ಕುಂ ನಿರುತಂ || ೫ ||

---

1. ಚೇಳಿಂಗೆ ಮಂತ್ರತಂತ್ರೌಷಧ ಯಂತ್ರಂಗಳು (ಕ) ವೃಶ್ಚಿಕಾಧ್ಯಾಯಂ (ಘ) 2. ಸಂಧವನಂ (ಖ) ನಂದವನಂ (ಗ) ಸಂಹರಣಂ (ಕ) 3. ವಿವರಿಸುವೆಂ (ಘ) 4. ಯನನಿರ್ವರಂ. 5. ತನ್ಮಂತ್ರವನೌಷಧಂಗಳಂ (ಕ) 6. ಅರುಣಿಭ ಹೇಮಾಭಿಪೀತಂ (ಗ) 7. ಸ್ಥಿರರೇಖಾ (ಘ) 8. ಕಲಲ (ಕ) ವಲಲ (ಖ) 9. ಗಳೆನೆಮಧು ನಿರ್ಭಯಾತ್ತಂಗಳಾ........ಲಮಿಳೆನೊಳ್ (ಕ) ತಾಖ್ಯಗ್ರಕರ್ಮಂಗಳಿದು (ಗ) 10. ಗಳಾಗಿರ್ದಂತು ಸಪ್ಪತ್ತಂಬೆರಸಿ (ಖ) ಗಳಾಗಿಂತು ಸತ್ತಬೆರಸಿರ್ದಾ (ಗ) 11. ಕಷ್ಟಜನ್ಮಂ (ಗ) 12. ಮಿದಿಯಲ್ಕಮಂತನತಿ ಮೂತ್ರಾಸ್ರಕಂಪಲಾಲಕ್ರಮಂ (ಕ) ಯಲ್ಕಮಂತತಿಮೂರ್ಛಾ ಕಂಪಲಾಲಾಶ್ರಮಂ (ಗ) 13. ಜ್ಯದುಗುಡಮಿರುಚ್ಕೋಪಂ ಮನಸ್ಯೋ....ರಣಂಗಳಕ್ಕುಮ:(ಕ) ಬೆಮರ್ಗದಳುರಚ್ಫೋಪಂ ಮನಸ್ತೋಭಿವಾ (ಗ) ಬೆಮರ್ಗದ ಮರುಚ್ಛಾಪಂ (ಖ) 14. ಸಲಿಲಂ ಬಾಷ್ಪಕಣಂಗ (ಕ) ಣಂಗಳಕ್ಕು (ಖ)

ಕಂ|| ಮಣಿ ಸಮದಾಗಿರೆ ಸಾಧ್ಯಂ |
ಮಣಿಗಳ್ ವಿಷಮಂಗ[1]ಳಾಗಲಂತದಸಾಧ್ಯಂ ||
[2]ಮಣಿಯೊಂದಾದುದು ವೃಶ್ಚಿಕ |
ಗಣದಧಿಪತಿ ಕಾಲಮೃತ್ಯು [3]ರೂಪನಸಾಧ್ಯಂ || ೬ ||

[4]ಕೆಂದಲೆಯ ಸರಟನಂ ನವಿ |
ಲಂದಮುಮಂ ನೆನೆಯ ತೇಲಿ ವಿಷಮದು ಪರೆಗುಂ ||
ನೊಂದವನುಂ ಮಾಂತ್ರಿಕನುಂ |
[5]ಸಂದೆಯಮೇಂ ಭಾವಿಸಲ್ಕೆ ನಿರ್ವಿಷಮಕ್ಕುಂ || ೭ ||

ವ|| ಇನ್ನು ನಾನಾವೃಶ್ಚಿಕಜಾತಿಗೆ ತನ್ಮಂತ್ರಂಗಳಂ ಪೇೞ್ವೆನದೆಂತೆಂದೊಡೆ—*

ಮಂತ್ರಂ—ಓಂ ನಮೋ ಭಗವತೇ ಪಾರ್ಶ್ವನಾಥಾಯ ಸಕಲಕ್ಷುದ್ರೋಪದ್ರವ [6]ನಿರ್ನಾಶನಾಯ ಶ್ರಾಂ ಭ್ರೊ್[7]ಂ, ಶ್ರಾಂ, ಪ್ರಾಂ,(ಷ್ರಾಂ)ಭ್ರೊ್[7]ಂ, ಪ್ರಾಂ, ಭ್ರೊ್[7]ಂ, ಸ್ರಾಂ [8]ಹ್ರಾಂ, ಭ್ರೊ್[7]ಂ, ಹ್ರಾಂ, [9]ಹ್ರೀಂ, ಹ್ರೋಂ, ಹ್ರೌಂ ಹ್ರಃ, ಸ್ವಾಹಾ—

ಕಂ|| ತೊಡೆ ಕರವೀರದ ಶಾಖೆಯ[10] |
ನಡಿಗಡಿಗೀ ಮಂತ್ರದಿಂದೆ ವೃಶ್ಚಿಕನಿಕರಂ ||
[11]ಮಿಡಿದ ವಿಷಂ ಕಿಡುಗುಂ[12]ಮು |
ಕ್ಕೊಡೆಯನ ದಿವ್ಯಮಂ[13]ತ್ರಮೇಂ ಕೇವಳಮೇ || ೮ ||

ಮಂತ್ರಂ—ಓಂ ನಮೋ ಭಗವತೇ ಪಾರ್ಶ್ವತೀರ್ಥಂಕರಾಯ ಅಷ್ಟಾದಶ ವೃಶ್ಚಿಕಾನಾಂ, ಯಿ(ಇ)ಳಿ, ಮಿ(ದ್ದಿ)ಳಿ - ಚಳಿ [14]ವಜ್ರಮುಷ್ಟಿ ಮಹಾಮುಷ್ಟಿಸ್ವಾಹಾ—

ಕಂ|| ಈ ಮಂತ್ರದಿಂದ ಮೊಸೆದಂ |
ತಾ ಮಾಂತ್ರಿಕನಿೞಿಯೆ ಮಂತ್ರಿಸಲ್ ವಿಷಮಿೞಿಗುಂ ||
ಈ ಮಂತ್ರದಿಂದಮೊಪ್ಪದೊ |
ಳಾ ಮಾಂತ್ರಿಕನೇಱಿಸಲ್ಕಮೇಱುವುದು ವಿಷಂ || ೯ ||†

ಮಂತ್ರಂ—ಓಂ [15]ಸವರಿ ಪೂನೆ ಸವರ ಸವರಿ ಸನಿ[16]ವದ ಸುಲ[17]ರಂನಮೊಡಂತೆ ಪಾಯಂಚೇಳುಪಿಯು ಫಣಿಯುಕ್ತ ದೇವಿಯ[18]ಗುರುಂ ಚ ಸಿದ್ಧಿ—

---

1. ಗಳಾಗೆಳಂತದ (ಗ) 2. ಮಣಿಒಂದಾ (ಖ) 3. ರೂಪನೆಸಾಧ್ಯಂ (ಗ) 4. ....ಸಂಟನಂ(ಕ) ಸಂಟನಂ (ಗ) 5. ಸಂದೆಯ(ಹ)ಮೆ ಧ್ಯಾನಿಸಲ್ಕೆ (ಗ) 6. ಪದ್ರರಿನಾಶನಾಯ (ಗ) 7. ಬ್ರೊ್ರೀಂ (ಕ) ಕ್ರೋಂ (ಗ) ಭ್ರೋಂ, ದ್ರಾಂ (ಘ) 8. ದ್ರಾಂ (ಕ) 9. ಈ ಭಾಗ (ಗ) ಪ್ರತಿಯಲ್ಲಿಲ್ಲ. (ಹ್ರಾಂ, ಕಂದ, ತೊಡೆಕರ) ಎಂದಿದೆ. 10. ಶೋಭೆಯ (ಗ) 11. ಪಿಡಿದ (ಗ) 12. ಮಿಕ್ಕೊಡಮೊಡೆಯನ (ಘ) 13. ಮಂತ್ರಮಂ (ಗ) 14. ವಜ್ರಂ (ಗ) 15. ಪರಿಘಾನೆ (ಗ) ವರಿಘಲಿನೆ (ಖ) 16. ಸದವರಿಸನಿ (ಕ) 17. ಸುಲರು ನಾದೊಡಂಕೆ (ಗ) ಸುಲರುನಮಾದಂಕೆ (ಕ) ರಂರಂನೆ ಮೊಡಂಕೆ (ಖ) 18. ಗುರುಂಚಾಸಿದ್ಧಿ (ಗ) ಚೆಲುಸಿಪಿಯುಂ ಪಣಿಉತ್ತುಕರೆ ವಿಭುಗುರುಂಜಾಸಿದ್ಧಿ (ಖ)
* (ಗ) ಪ್ರತಿಯಲ್ಲಿಮಾತ್ರವಿದೆ. † ಏಱ ಮಂತ್ರಿಸಲೇಱುಗುಂ (ಘ)



ಕಂ|| ನೀರಂ ತ್ರಿವಾರ[1]ಮೆಸೆವಿನ |
ಮಾರಯಿದ್ದಾ ಮಂತ್ರದಿಂದೆ ಮಂತ್ರಿಸಿ[2]ಕುಡಿಸಲ್ ||
ಘೋರೆನೆ[3]ಲೂಡುಗೆ ಕಿವಿಯಿ(ಯ)ಂ |
ಬಾರಿಸುಗುಂ ವೃಶ್ಚಿಕಾಂಗವಿಷದುಗ್ರತೆಯಂ || ೧೦ ||

ಮಂತ್ರಂ—ಓಂ ಕೃಷ್ಣಮಾತಂಗಿ ಓಂ. (ಔಂ) ಫಟ್ (ಪ) ಹ್ರೂಂ (ಹಂ) ಫಟ್ ಸ್ವಾಹಾ—

ಕಂ|| ಸಂಧಿಸಿ ಮಂತ್ರದೆ ಮುಂಬ |
ಲ್ಲಿಂದರಳಿಯ ಮುಗುಳ ನಗಿವುತುಂ [4]ಘೂ ಘೂ ಯೆಂ ||
ದಂದಭಿಮಂತ್ರಿಸಿ ಭಸ್ಮಮ |
ನಂದಿೞಿಪಲ್ [5]ತೇಲಿ ವಿಷಮದಾಕ್ಷಣಮಿೞಿಗುಂ || ೧೧ ||

ಮಂತ್ರಂ—[6]ಓಂ ಉಡುಂ ಜಟ್ಟು ಜಟ್ಟತಿ ತೆಳಿ(ಟ್ಟಿ)ಟ್ಟಾ ಬಟ್ಟಿ ಉಡುಂಬು(ಂ) ತೇೞಿಂ ವಿದ ವಟ್ಟಬಟ್ಟಿ ಉಡುಂಬುಂ ತೇೞಿಂ ವಿದಟ್ಟು ಬಟ್ಟಿವುಡುಂ ಬೆರ ತೇೞಿಂ ಚಪೋೞಿಂ ಸ್ವಾಹಾ—

ಕಂ|| ಮೋಳಿಸ ದಿಪ್ಪ[7]ತ್ತೊಂದೇ |
ಸೂೞುವರಂ [8]ಮಂತ್ರಿಸುತ್ತೆ ತೊಡೆವುದು ಮತ್ತಂ ||
ಜೋಳದ ದಂಟೆಂದಿೞಿಗುಂ |
ತೇಲಿ ವಿಷಂ ಹಿಮದೊಳೞಿವ ತೆಱದಿಂ [9]ಕಮಲಂ || ೧೨ ||

*ತಲೆಯಿಂ ಚರಣಂಬರಮುಂ |
[10]ಮಲಯೋದ್ಭವದಿಂದೆ ಬರೆವುದಾ ಶ್ರೀಕಾರಂ ||
[11]ಚಲಿಸದಿರಲ್ ಭ್ರಮಿಸಲ್ಕಂ |
ಕೆಲದೊಳ್ [12]ಸ್ವಸ್ಥಾಂಗನಪ್ಪನಲ್ಲಿಂ ಬೞಿಯಂ || ೧೩ ||

*ಅಷ್ಟಾದಶ ಸಂಖ್ಯಾಕ(ತ)ಂ |
ಸ್ಪಷ್ಟಮೆನಲ್ ಬರೆದು ಮಾೞ್ಪುದುಂ ಫೂತ್ಕಾರೋ ||
ತ್ಕೃಷ್ಟತೆಯಿಂ ವೃಶ್ಚಿಕತತಿ |
ದಷ್ಟವಿಷಂ ಕಿಡುಗುಮೆಸೆವ ಮಂತ್ರದ ದೆಸೆಯಿಂ || ೧೪ ||

---

1. ಮೇಸನ (ಗ) 2. ಕುಡಿಯಲ್ (ಕ) ಕುಡಿಸುತ್ತೋರಂತೂದುಗೆ ಕಿವಿಯೊಳ್ ಚಾರಿಸುಗುಂ ವೃಶ್ಚಿಕೌಘವಿಷ (ಘ) 3, ಊಡುಗೆ ಕಿವಿಯಂ (ಕ) 4. ದುಘುಘೂ । ಯೆಂದಭಿ (ಘ) 5. ವಿಷಮಿದೞಿಗುಮವಶ್ಯಂ (ಘ) ದಿೞಿಸೆಳ (ಗ) 6. ಓಂ ಉ(ದು)ಂ ಚೆ(ಬೆ)ಟ್ಟು ಚಚ್ಚೀರಿ ವೇಳಿಗಿಟ್ಟ ಬಟ್ಟಿವುದುಂಬುಂ (ತೆಬುಂ) । ತೇಳುಂ ವಿದವಟ್ಟಬಟ್ಟೆಉದುಂ ಬೇರೆತೇಳಿಂಚ(ಜೆ)ಪೋಳುಂ ಸ್ವಾಹಾ (ಗ) ಓಂ ಉ ಉಡುಂಬೆದು ಚಟ್ಟತೆಗಿಟ್ಟ ಭಟ್ಟಿ ಉದುಂಬುಂ ತೇಳುಂ ವಿದವಟ್ಟಿಉಡುಂ ಬೇರೆತೆಳಿಂಚಪಾಳುಂ ಸ್ವಾಹಾ ತೇಳವಿಷಂ ಹಿಮದಿನೞಿವತರದಿಂ ಕಮಲಂ (ಖ) 7. ತ್ತೊಂದೀ. 8. ಮಂತ್ರಿಸಂತೆ (ಖ) 9. ಕವಿಲಂ (ಕ) ಕಮಲದ ತೆಱದಿಂ (ಗ) (ಖ) 10. ಮಳೆಯೊಳುದ್ಭವದಿಂದ (ಕ) ಬರೆಯುಂ ಮಳೆಯೊಳ ಬರೆದಾ (ಗ) 11. ಭವಿಸದಿರಲ್ ಭ್ರಮಿಸಲ್ಕಂ ಕೆಲದೊಳೆ (ಖ) ಚಲಿಸದಿರಲ್ಭ್ರವಿಸಲ್ಲತೆಲದೊಳ್ಸ್ವ (ಕ) 12. ಸ್ವಸ್ಥಾಂಗರಪ್ಪರ (ಗ)
* ೧೩–೧೪. (ಗ) ಪ್ರತಿಯಲ್ಲಿಲ್ಲ. (ಘ) (ಕ) ಪ್ರತಿಯಲ್ಲಿ "ಈ ಎರಡುಪದ್ಯಗಳೂ ಸಂದೇಹ" ಎಂದು ಬರೆದಿದೆ.

ವ|| ಅದೆಂತೆಂದೊಡಲ್ಲಿ—

ಮಂತ್ರಂ—ಶ್ಲೋಕ|| [1]ಆದಿತ್ಯರಥವೇಗೇನ [2]ವಿಷ್ಣು ಬಾಹು ಬಲೇನ ಚ ||
[3]ಗರುಡೋತ್ಪಕ್ಷ ಪಾತೇನ ಭೂಮ್ಯಾಂ ಗಚ್ಛ [4]ಮಹಾವಿಷ ||

ಮತ್ತ(ಂತ್ರ)ಂ|| ಓಂ ಶ್ರೀಂ ಪಕ್ಷಿ[5]ಯೋ(ಗಿ)ನಿ ಪಾದಾಜ್ಞಾ ಶ್ರೀಸಿದ್ಧ ಪರಮೇಷ್ಠಿ ಪಾದಾಜ್ಞಾ ನಿರ್ವಿಷಂ ಭವತಿ—

ಇಂತು ತನ್ಮಂತ್ರಕ್ರಮಂ.

**ನಸ್ಯಂ? ಧೂಪಂ.**

ಕಂ|| ಎಲ್ಲಾ [6]ಧೂಪಮುಮಂ ಕೊ |
ಳ್ವಲ್ಲಿ ಕರಂ ಮುಸುಕನಿಕ್ಕಿ [7]ಪೊಗೆ ಪೋಗದವೋಲ್ ||
ಮೆಲ್ಲನೆ ಪೊಗೆಯಂ ಕುಡಿಯಲ್ |
ನಿಲ್ಲವು [8]ಪದಿಮೂಱುತೆಱದ ತೇಳಿನ ವಿಷಗಳ್ || ೧೫ ||

[9]ನವಿಲುಂ ಚರಣಾಯುಧ ಪಾ |
ರಿವಮೆಂ [10]ಬಿವಱಿಚ್ಚ ಮರ್ಕಮೂಲಮಿವಂ ತಾಂ ||
ಜವದಿಂ ಧೂಪಂಗೊಳಲಹಿ |
ನಿವಹಸಮುದ್ಭೂತ ವೃಶ್ಚಿಕೋಗ್ರವಿಷಘ್ನಂ || ೧೬ ||

*ಅದುವುಂ ಮತ್ತಂ ಖರಪು |
ಚ್ಛದ ರೋಮಂ ತಚ್ಛರೋಜ ಕಪಿಲೆಯ ರೋಮಂ ||
[11]ಪದೆಪಿಂ ತದ್ಘೃತದೊಡನಿ |
ಕ್ಕಿದ ಧೂಪಂ [12]ತೇಳಿ ವಿಷಮನಾಗಳೆ ಕಿಡಿಕುಂ || ೧೭ ||

ಅರಿಸಿನದ ಚೂರ್ಣದಿಂ [13]ಮೇ |
ಣರೆದಂತದುಮಲ್ಲದಿರ್ದೊಡಿಟ್ಟೆಯ ಬಿತ್ತಂ ||
ವಿರಚಿಸೆ ಧೂಪಮನದಱಿಂ |
ಪರೆಗುಂ †ಪದಿಮೂಱುತೆರದ ವೃಶ್ಚಿಕದ ವಿಷಂ || ೧೮ ||

---

1. ಆದಿತ್ಯಾಂಥ (ಖ) 2. ವಿಷ್ಣೋಃ (ಕ) 3. ಗರುಡೇಪಕ್ಷಪಾತೇನ (ಕ) 4. ಮಹಾವಿಷಂ (ಕ) 5. ಯೋಗ (ಕ) ಮಂತ್ರ. ಜಃ, ಜಃ, ಜಃ ಓಂ ಶ್ರೀಪಕ್ಷಿಯೋಗಿ-——ಭವತಿ ಇನ್ನು ತನ್ಮಂತ್ರಕ್ರಮಂ ಪುನಃ ಪುನಃ (ಗ) 6. ದೋಷಮುಮಂ ತೋಳ್ವಿಲ್ಲ ತಂಮುಸುಕ (ಗ) 7. ಮಿಗೆ (ಘ) 8. ಪದಿನೆಂಟುತೆಱದ ತೇಱಿನವಿಷಮುಂ(ಗ) ತೇಲವಿಷಂಗಳ್ (ಕ) 9. ನವಿಲಂ ಚರಣಾಯುಧ ಪಾವಱೊಚಿ ಮಕ್ಕಮೂಲ (ಕ) 10. ಬಿವರಚ್ಛು(ಮರ್ಕ)ಮೂಲ (ಘ) 11. ಪದಪಿಂಘೃತದೊಳಗಿಕ್ಕಿದ (ಖ) 12. ತೇಳಬಿಸಮನಱಗುಮವಶ್ಯಂ (ಘ) ಕಳೆಗುಮವಶ್ಯಂ (ಕ) ಚೇಱವಿಷಮ (ಖ) 13. ಮೇಣರದಿಂದರಿನಲ್ಲ (ಗ) ....ಕಳೆಗುಂ ಮೇಣರದಂತದಿ (ಕ)

* (ಗ) ಪ್ರತಿಯಲ್ಲಿಲ್ಲ.

† (ಗ) ಪ್ರತಿಯ ೧೫-ನೆಯ ಕಂದದಲ್ಲಿ ಪದಿನೆಂಟುತೆಱ ಎಂದು ಬರೆದು ಈ ಕಂದದಲ್ಲಿ ಪದಿಮೂರು ತೆಱ ಎಂದಿರುವುದು ಲೇಖಕದೋಷವಿರಬಹುದು.)



**( ನಸ್ಯಂ )**

ಕಂ|| ವರಪುಷ್ಯಾರ್ಕದ ದಿವಸಂ |
ಸಿರಿಸದ ಮೂಲಮನೆ ತಂದು ಕಱಿಯಿಂ ಬೆರಸಿ ||
[1]ಟ್ಟರೆದಿರದೆ ನಸ್ಯಮಂ ತಾಂ |
ವಿರಚಿಸೆ ವೃಶ್ಚಿಕಮಹೋಗ್ರವಿಷಮಂ ಕಳೆಗುಂ || ೧೯ ||

ನಾಗರಮಂ ಜಲದಿಂದಂ |
[2]ಪೋಗೊರಸಿಯೆ ನಾಸಿಕಾಂತರಾಳದೊಳೆಱೆಯ ||
ಲ್ಕಾಗಳೆ [3]ವೃಶ್ಚಿಕವಿಷಮಂ |
ಭಾಗಿಸುಗುಂ ಬುಧಜನೈಕಮಿತ್ರನ ಮತದಿಂ || ೨೦ ||

ಉ|| ನಿಂಬಫಳಂ [4]ಘನಂ ಕ್ರಿಮಿಹರಂ ಕಟುಕತ್ರಯಮೆಂಬಿವಂ ಸಮಂ |
ಗೊಂಬುದು ಗವ್ಯ(ದ್ಯ)ಮೆಂದೆನಿಪ ಮೂತ್ರದೊಳಿಟ್ಟರೆದಂತದಂ [5]ಸಿರಾಂ ||
ತಂಬರೆಗಂ ಮನೋಮುದದೊಳಂ ಪಿಱಿ ನಸ್ಯಮನಾದೊಡಂ [6]ತದ |
ರ್ಕ್ಕಂ ಬಹುತರತಂತ್ರಮೇಕೆ ವಿಷವೃಶ್ಚಿಕದುಗ್ರವಿಷಂಗಳೋಡುಗುಂ || ೨೧ ||

**ಕರ್ಣಫೂತ್ಕಾರಂ.**

*ವ|| ಕರ್ಣಫೂತ್ಕೃತಮಂತ್ರಂ—

ಕಂ|| *ಹಂಸಪ(ತಿ)ದಿ ಯೆಸೆವ ಬೇರ್ಗಳು |
ಮಂ [7]ಸಿದ್ಧಿಸಿ ತಂದು ಸವಿದು [8]ಕಿವಿಗೂದಲೊಡಂ ||
ಹಿಂಸಕವೃಶ್ಚಿಕ ವಿಷ ವಿ |
ಧ್ವಂಸನಮಂ ಮಾಱ್ಪುದಂತದಮಳಚರಿತ್ರಾ || ೨೨ ||

ನಿಂಬ ಸುಪತ್ರದೊಳಂ ಬಜೆ |
ಯಂ[9]ಬೆರಸದನಡಸಿ ಮೆಲಿದು [10]ತೇಱ್ಗಡಿದನ ಕ ||
ರ್ಣಂಬುಗ [11]ಲೂದಲ್ ವಿಷಮಿಱಿ |
ಗುಂ ಬುಧಜನಮಿತ್ರಮಂಗರಾಜನ ಮತದಿಂ || ೨೩ ||

*ದಕ್ಷಿಣಭಾಗದ ತೇಱ ವಿ |
ಷಕ್ಷಯ[12]ಕರಮಲ್ತೆ ವಾಮಕರ್ಣದೊಳೂದಂ ||
ತೀಕ್ಷ್ಣಿಸಿ ನಿಶೆಯಂ ಸವಿದಂ |
ತಾ ಕ್ಷಣದಿಂ ವಾಮತನುಗೆ ತದ್ವಿಪರೀತಂ || ೨೪ ||

---

1. ಟ್ಟರದಿರದೆನಸ್ಯ (ಘ) ಟ್ಟರದರದು (ಗ) 2. . ಪಾಗೊರಸಿ (ಘ) 3. ವೃಶ್ಚಿಕದ ಬಿಸಂಪೋಗುಗುಮೆಂದಱಪಿದಂ ಬುಧಂ ಮಂಗರಸಂ || 4. ಲಶುನಂ (ಕ) 5. ಸಿರೋತ್ತಂ ಬಳಿಯಂ, ಸಿರೋಕ್ತಂ? (ಕ) ದಂತದಂ ಶೀತಂಬರೆಗಂ (ಘ) 6. ತದಕ್ಕಂ ಬಹುರಮತಂತ್ರಮೇಕೆ (ಕ) ಬಹುತಂ ತಂತ್ರಮೇಕೆ (ಖ) ಬಹುತಂತ್ರಮೆ ವೃಷವೃಶ್ಚಿಕ (ಗ) 7. ಬೇಗದಿ (ಖ) 8. ಲೆವಿಗೊಡಿದೊಡಂ (ಕ) 9. ಬೆರಡನಡಸಿಮೆದ್ದು (ಖ) ಮೆಲ್ದು (ಕ) 10. ತೇಳ್ಗಡಿಂದನ (ಗ) 11. ಲಿದುವಿಷ (ಕ) 12. ಕ್ಷಯ ತಾನಲ್ತೆ (ಕ)

* (ಗ) ಪ್ರತಿಯಲ್ಲಿ ಈ ವಾಕ್ಯ ಮತ್ತು ಮುಂದಣ(ಹಂಸಪದಿಯೆಂಬ)ಕಂದ ಇವೆರಡೂ ಇಲ್ಲ. ಕ.ಖ. ಪ್ರತಿಗಳಲ್ಲಿ ವೃಶ್ಚಿಕವಿಷಕ್ಕೆ ಕರ್ಣಫೂತ್ಕಾರ ಎಂದು ಬರೆದು ಆ ಮಂತ್ರವಾವುದೆಂದು ಬರೆದಿಲ್ಲ. ಕೈಬಿಟ್ಟುಹೋಗಿರಬಹುದು.

*ಕಂ|| ತಿಂಬುದು ಕಾರ್ಪಾಸದ ಬೇ |
ರಂ ಬಱಿಯಂ ಕಿವಿಯಲೂದಲಂತದಱಿಂದಾ ||
ಡಂಬರದ ತೇಲಿ ವಿಷಮುಂ |
ಕುಂಬಳದಿಂ ಪಿಂಗೆ [1]ಕಣಿಕದಂದದೊಳಱಿಗುಂ || ೨೫ ||

**ಕವಳಂ.[2]**

†ಕಂ|| ತಿಲದನಿತೆ ವತ್ಸನಾಗ(ಭ)ನ |
ನೊಲಿದೀವುದು [3]ಮೇಲ್ತದಂಗದೊಳ್ ವೃಶ್ಚಿಕ ಸಂ ||
[4]ಕುಲವೊತ್ತಿಪಿಡಿದ ತಾಣದೊ |
ಳಲಸದೆ ಪೂಸಲ್ ಸಮಸ್ತವಿಷಮನದಱಿಗುಂ || ೨೬ ||

**ಪಾನಂ.**

ಕಂ|| *ಜಲದಿಂದಂ [5]ತೇಲ್ಕುಟು(ಡಿ)ಗನ |
ನೆಲಗುಂಬಳ ಮೆಂಬಿವಂ ಸಮಂಗೊಂಡರೆದಿಂ ||
[6]ಪಲವಱೊಳೇಂ ಕುಡಿಸಲ್ಕಂ |
ಖಲ ವೃಶ್ಚಿಕವಿಷಮುದಾಕ್ಷಣಂ ಪಱಿಪಡುಗುಂ || ೨೭ ||

ಎಕ್ಕೆಯ ಕನಕದ ಬೇರ್ಗಳ |
ನಿಕ್ಕುವುದೊಂದಾಗಿ ನೀರೊಳರೆದೀಂಟಲೊಡಂ ||
[7]ನಿಕ್ಕುವಮಿಂ ತೇಲಿ ವಿಷಂ |
ಮೆಕ್ಕೆಯ ವಾಸನೆಯ ಕಣಿಕದಂ[8]ತದು ಕಿಡುಗುಂ || ೨೮ ||

ಮಿಸುಗುವ ಸೈಂಧವವೊಂದಂ |
ಬಿಸುನೀರಿಂ ಬೆರಸಿ [9]ಕುಡಿದೊಡಂತಾ ಕ್ಷಣದಿಂ ||
ದೆಸೆಗಿಡುಗುಂ ತೇಲಿ ವಿಷಂ |
ಬಿಸಿಲರಿಸಿನದಂತೆ ಕವಿಕುಲಾಂಬುಜ [10]ಭಾನೂ || ೨೯ ||

ಸಾಲದೆ ತೇಲಿೞಱ[11]ದೊಡಾ |
ಚೀಲೈತನ ಬೇರನೊಂದೆ ಕಱಿಯಿಂದೀಂಟಲ್ ||
[12]ಬಾಲಮದು ಸೋಂಕಿದೆಡೆಗಾ |
ಮೂಲಮನಂತರೆದು ಪೂಸೆ ನಿರ್ವಿಷಮಕ್ಕುಂ || ೩೦ ||

---

1. ಕಂಣಿಕಂದದೊ(ಖ) 2. ವೃಶ್ಚಿಕ ವಿಷಹರಕವಳ (ಖ) 3. ಮೇಲೆ ತದನ್ನದೊಳು (ಕ) 4. ಕುಲ ಮಿಡಿದತಾಣದೊಳ್ತಾ | ನಲಸ (ಘ) ಕುಲಮೊತ್ತಿಂಡಿದತಾಣ (ಕ) 5. ತೆಲ್ಕುಡಿಗ (ಕ) 6. ಪಲವ ಱೊಳೆಯೆ ವಿಷಂಖಳ (ಖ) 7. ನಿಕ್ಕುವಮೇಂ (ಕ) (ಗ) ನಿಕ್ಕುಗುಮೇಂ ತೇಲ್ಗಳವಿಷ | ಮೆಕ್ಕೆಯ (ಘ) 8. ಮಱಿವಂ ತಱಿಗುಂ (ಕ) ಕಳಿಕದಂತದುಕಿಡುಗುಂ (ಗ) 9. ಕುಡಿಸಲಾಕ್ಷಣದಿಂದಂ (ಕ) 10. ಮಿತ್ರ (ಕ) 11. ದೊಡಂ.... ಬೇರದೊಂದಿ(ತ) 12. ಬಾಲಮದು ಸೊಂಕಿತಡೆಗಾಮೂಲ(ಕ) ಶೂಲಮದುಸೋಂಕಿ.

* (ಗ) ಪ್ರತಿಯಲ್ಲಿಲ್ಲ. † (ಕ) ಪ್ರತಿಯಲ್ಲಿಲ್ಲ.



**ಲೇಪಂ.**

ಚಂ|| ಹುಲಿಗಿಲ ಪುತ್ರಜೀವಿಗಳ [1]ಮುತ್ತದ ಬೀಜಗಳಂ ಸಮಂತು ತಾಂ |
ಜಲದೊಳಮಿಟ್ಟು ಸಣ್ಣ ಮೆನಲಂತರೆ [2]ಲೇಪಿಸದಲ್ಲದಂದು ಮೇಣ್ ||
ವಿಲಸಿತಭಾನುದುಗ್ಧ ಘೃತಮಂ ತೊಡೆ ತೇಲಿ ವಿಷಂಗಳೋಡುಗುಂ |
[3]ಸುಲಲಿತ ಮಂದ ಮಾರುತನ ಚಂದನ[4]ದಗ್ರುದ ಕೋಷ್ಣದಂದದಿಂ || ೩೧ ||

ಉ|| ಎಕ್ಕೆಯ ಬೇರ್ ಮಯೂರಶಿಖೆ ಯಿಲ್ಲಣಮೆಂಬಿವನೆಯ್ದೆ ಕೊಂಡು ನೀಂ |
ಚಕ್ಕನೆ ಕೂಡಿ ಮತ್ತರೆದು ಲೇಪಿಸೆ ವೃಶ್ಚಿಕ[5]ಮೂಱದೊಂದು ತಾ ||
ಣಕ್ಕೆ ಬಱಿಕ್ಕಮುಗ್ರಮೆನಿಸಿರ್ಪ ವಿಷಂ ಕಿಡುಗುಂ ಜನಂ[6]ಗಳೆ |
ಕ್ಕೆಕ್ಕೆಗೆ ಬಾದುಗೆಯ್ದು ಕಿಡುವಂತಿರೆ ಲೋಕದ ಪಕ್ಷಪಾತದಿಂ || ೩೨ ||

ಕಂ|| ಪಲವಂದದ ಮರ್ದುಗಳಂ |
[7]ಪೊಲವೊಲದೊಳಮಱಸಲೇಕೆ ಓಂಗುಮನೊಂದಂ ||
[8]ಜಲದಿಂದಮರೆದು ಪೂಸುವು |
ದಲಸದೆ ನೀಂ ತೇಲಿ ವಿಷಮುದಾಗಳೆ ಕಿಡುಗುಂ || ೩೩ ||

* ಖಳವೃಶ್ಚಿಕವಿಷದುಗ್ರಂ |
ತೊಲಗುಗುಮಂಬಿಲದೊಳರೆದು ಪೂಸ[9]ಲೊಡಂ ಲಾಂ ||
ಗಲಿಯೆಸೆವ ಕಂದಮಂ ಮೇ |
ಣಲಸದೆ ಘೃತನಿಂಬಪತ್ರಸೈಂಧವಮಿನಿತಂ || ೩೪ ||

ಮರಿಚಮುಮಂ ಪಿಪ್ಪಲಿಯಂ |
ಸರಿವೆರಸರೆದರ್ಕದುಗ್ಧದಿಂ ಪೂಸಲೊಡಂ ||
ಪರಿಹರಿಕುಂ ತೇಲಿನ ಪಾ |
ವರಣೆಯ ಪಾವಿ(ಲ)ನ ವಿಷಂಗಳೆಲ್ಲಂ ಧರೆಯೊಳ್ || ೩೫ ||

ಇನದುಗ್ಧದೆ ಮುತ್ತದ ಬಿ[10] |
ತ್ತಿನ ತಿರುಳುಮನೇಲಿಸೂಱ್ ಭಾವಿಸಿಯುಂ ಲೇ ||
ಪನಮಂ ಮಾಡಲೊಡಂ ತೇ |
ಲಿನ ವಿಷಮಿರದ[11]ಱಿಗುಮೆಂದನಪಗತಕಲುಷಂ || ೩೬ ||

---

1. ಬೀಜದ ಬೀಜಮಂ ಲಸಜ್ಜಲ (ಕ) ಪುತ್ರಜೀವದಮುತ್ತದ ಬೀಜಮಂಲಸಜ್ಜಲ (ಗ) 2. ಸುಣ್ಣ ಮೆನಲಂತರೆ ಲೇಪಿಸದಿಲ್ಲದಂ (ಗ) ಸಣ್ಣಮೆನೆ ಮರ್ದಿಸಿ ಲೇಪಿಸದಂತಲ್ಲ (ಘ) ಲೇಪಿಸಿದಂತುಮೇ (ಕ) 3. ವಿಲಸಿತ (ಕ) 4. ದಗ್ರುಕಕೋಷ್ಮ (ಕ) ಚಂದನದಕೋಷ್ಟ (ಖ) ಚಂದನದಗ್ರುಕೋರತೋಷ್ಣ ದಂದದಿಂ (ಗ) 5. ಮಂದರಿದೊಂದು (ಗ) 6. ಳಿಕ್ಕೆಗೆ ಬಾದೆದುಗೆಯ್ದು ಕೆಡುವಂತಿರೆ (ಗ) 7. ಸಾಲ ವೊಲದಾಲ (ಖ) 8. ಜಲದಿಂದಂ ಲೇಪಿಸಲಾ | ಗಳೆಕಿಡುಗುಂ ವೃಶ್ಚಿಕೋಗ್ರ ವಿಷಮೆನಿತನಿತುಂ (ಘ) 9. ನಾಂಗುಲಿ, (ನಾಂಗಲಿ) (ಘ) ಲೊಡಂಗುರಿ (ಕ) 10. ಬೀಜನ (ಕ) 11. ದಱಿಗುಂ ವಿತೇವ ಚೂಡಾರತ್ನಾ (ಘ) ಮೆಂದನಮಳಚರಿತ್ರಂ (ಕ)

* (ಗ) ಪ್ರತಿಯಲ್ಲಿಲ್ಲ.

ಕಂ|| [1]ಮರ್ಕಟನ ಕೆಯ್ಯ ಸುಂಕಂ |
ಕರ್ಕಟಕನ ಕರ ಕಪಾಲ ನಾಂಗುಲಿಯುತದಿಂ ||
ದರ್ಕಕ್ಷೀರದೆ ತೇಱ ವಿ |
ಷಕ್ಕೇಱಲುಮಿೞಿಯೆ ಪೊಸಲೇಱುಗು ಮಿೞ್ಗುಂ || ೩೭ ||

* [2]ನವಿಲಱವೊಱಸಿನ ಕುಕ್ಕುಟ |
ದ ವಿಷ್ಠೆಯಂ ಭರದೊಳೇಱ[3] ಪೊಸಲೊಡಂ ತಾ ||
ನವಯವದಿಂದೇಱುಗುಮಿೞ |
ಪುವ ಪದದೊಳಮಿೞ್ಗುಮುಗ್ರ ವೃಶ್ಚಿಕದ ವಿಷಂ || ೩೮ ||

* ಸೊಡಗರ್ಗುಡಿಯ ತೈಲದೊಳ್ ತಂ |
ದೊಡಗೂಡಿದ ಕಿವಿಯ ಕೊಗ್ಗಿಯಂ ಪೊಸಲೊಡಂ ||
ತಡೆಯದೆ ಕೆಂದೇಱ[3]ಂಬುದು |
ಮಿಡಿದ ವಿಷಂ ಪವನನಿದಿರ [3]ಸೊಡರಂತಕ್ಕುಂ || ೩೯ ||

ಸೊಡರಿಂ ದೊಸರ್ದೆಣ್ಣೆಯುಮಂ |
[4]ತೊಡೆವುದಲ್ಲದೊಡೆ ಗುಂಜ ಯೊಪ್ಪುವ ಬೇರಂ ||
ತಡೆ[5]ಯದರೆದಂತದಂ ಮೇಣ್ |
ತೊಡೆವುದು [6]ಕೆಂದೇಱನ ವಿಷಮುದಾಗಳೆ ಕಿಡುಗುಂ || ೪೦ ||

[7]ಕೆಂದೇಱ್ ಮಿಡಿದೊಡೆ ತವುಡಂ |
ತಂದಿಕ್ಕಿದ ಧೂಪದಿಂದೆ ತದ್ವಿಷಮೞ್ಗುಂ ||
[8]ಸಂದೆಯಮೇಂ ಮೇಣ್ ಗುಗ್ಗುಳ |
ದಿಂದೊಪ್ಪುವ ಧೂಪದಿಂದೆ ತದ್ವಿಷಮ(ಮಿ)ೞ್ಗುಂ || ೪೧ ||

ಎಕ್ಕೆಯ ದಳಂಗಳೊಳ್ ತಾಂ |
[9]ಮೊಕ್ಕಳಮೆಸೆದಿರ್ಪ ತುಪ್ಪಮಂ [10]ತೊಡೆವುರಮಂ ||
ಚಕ್ಕನೆ ಕಾಸಿಯೆ ಕಟ್ಟಲ |
ದುಕ್ಕಲಿಕುಂ ತೇಱ ವಿಷಮು[11]ನನುಪಮಚರಿತಾ || ೪೨ ||

## ಸವ್ಮಾರ್ಜ(ನ)ನೆ—ರಕ್ಷೆ.

ಕಂ|| * ರವಿವಾರದೊಳಂ ಉಂಗದ |
ನವಮೂಲಮನಗೆದು ತಂದು ವಾಮಾಂಗದ ತೇ ||
ಱ ವಿಷಕ್ಕೆ ಹಂ ಎನುತ್ತುಂ |
ತವನಂ ಮಂತ್ರಿಸು ಬಲಕ್ಕೆ ತದ್ವಿಪರೀತಂ || ೪೩ ||

1. ಕರ್ಮನ (ಕ) 2. ನವಿಲರಿ ಪಾಱವಕುಕ್ಕುಟಿಯ (ಘ) ಭರದೊಳೆಱ (ಕ) ನವಿಲೆಱ (ಖ) 3. ರಿಂಂತಱುಗುಂ (ಕ) ಪೊಡರಂ (ಖ) 4. ತೊಡೆಯುಂದಲ್ಲ (ಗ) ತೊಡೆವುದದಂದಲ್ಲದೊಡೆ ಗುತ್ತಲ್ಲ ಯೊಪ್ಪುವ (ಖ) 5. ಯದೆಱದಂ. 6. ಕೆಂದಳ (ಗ) 7. ಕೆಂದೇಳಿಡಿದೊಡೆತೌಡಂ (ಕ) ಕೆಂದೇಱಱ ದೊಡೆ (ಖ) 8. ದೊಂದೆಸಯಮೇಂ ಗುಗ್ಗುಳ (ಕ) 9. ಮೊಕ್ಕತ (ಗ) 10. ತೊಡೆವುದುಮಂ 11. ನುಪಶಮ ಚರಿತಾ (ಕ)

* (ಗ) ಪ್ರತಿಯಲ್ಲಿಲ್ಲ.



ಕಂ|| ಇನವಾರದೊಳಂಗುರುಸಿತ |
ಮೆನಿಸಿದ ಗಣಜಿಲೆಯ ಬೇರ ರಕ್ಷೆಗಳಂ ತಾ ||
ನನುಮಾಡಿರೆ ತೇಱಡಿದನ |
ತನುವಿಂದಿೞಪುತ್ತುಮಿರ್ಕೆ ತದ್ವಿಷಮಿೞ್ಗುಂ || ೪೪ ||

ಉ|| ಸಿದ್ಧಿ(ದ್ಧ)ದಿನಂಗಳೊಳ್ ತಹುದು ಮೋನದೆ ಬೇವಿನ ಕೋಲನಂತದಂ |
ಶುದ್ಧದಿನೇಶದುಗ್ಧದೊಳೆ ಭಾವಿಪುದೇಱ[3]ನಿಸಿರ್ಪ ಸೂಳ್ವರಂ ||
ಗೃದ್ಧ್ರಮಯೂರಕುಕ್ಕುಟನ ವಿಷ್ಠೆಯೊಳೊಪ್ಪುವ ಬ್ರಹ್ಮ[1]ಬೀಜಮಂ |
ತದ್ಧಿತಮೆಂದೆನಲ್ ಬೆರಸಿ ಪನ್ನೆರಡಪ್ಪಿನ ಮಾಡಿ(ಗಿ)ರಲ್ಕದಂ || ೪೫ ||

ಕಂ|| ಕಶ್ಚಿತ್ಪುರುಷಂ ಪಿಡಿದೊಡೆ |
ನಿಶ್ಚಲಮನದಿಂದಮಿೞಪಿದೊಡೆ ಜೀವಿಸುಗುಂ ||
ವೃಶ್ಚಿಕ ವಿಷ[2]ಮೂರ್ಛಿತನಿದು |
ಪಶ್ಚಿಮದಂಡಂ ವಿಷಾಷ್ಟಪದಭೇರುಂಡಂ || ೪೬ ||

ಉ|| [3]ದೀಪದ ನಿಂದ್ರವಾರುಣಿಯ ಪಣ್ಣೊಳೆ ತೀವುಗೆ ಪಾರದಾಖ್ಯಮಂ |
[4]ದೀಪದಿನ ಪ್ರಸಿದ್ಧಿಯೊಳೆ ಪನ್ನೆರಡಪ್ಪ ದಿನಂಗಳಿರ್ದುದಂ ||
ಲೋಪಮುದಾಗದಂತಿರೆ ಸುರಕ್ಷಿತ ಮಾದುದಱ[3]ಂದೆ [5]ಬೀಜನಿ |
ಷ್ಪಾಪಮನಿಟ್ಟು ನೀಂ[6]ಗಣಕೆಯಗ್ರದೊಳಂ ತಿಳಿಪಲ್ಕಮಾಕ್ಷಣಂ || ೪೭ ||

ಕಂ||*[7]ಕಂಟಕವಿಷವೃಶ್ಚಿಕತತಿ |
[8]ಯಂಟಿದ ಗರಳಂಗಳೞ್ಗುಮುದು ನಿಶ್ಚಯದಿಂ ||
ದಂಟಿಕ್ಕಡಿಯನೆ [9]ನೆ(ಸಿ)ೞ್ವುದಿ |
ದುಂಟೆನಿಕುಂ ಸಕಳತಂತ್ರ ಸಾಮರ್ಥ್ಯಮುಮಂ || ೪೮ ||

ಪುತ್ತಿನೊಳೆ ಬೆಳೆದ ತುಱಚೆಯ |
ನುತ್ತಮ[10]ದಿನದಂದು ತಂದು ತೇಱ್ಕ(ಮಿ)ಡಿದುದೆನಲ್ ||
ತೆತ್ತಿಸೆ ಕಣಿಕೆಯ[11]ತುದಿಗಿೞ |
ಪುತ್ತಿರಲಿೞ್ಗುಂ ಮಱಳ್ದುಗ್ಗ ಮೇಱಸೆ ವಿಷಮುಂ || ೪೯ ||

ಹಸ್ತಾರ್ಕಯೋಗದೊಳ್ ತಾಂ |
ಪ್ರಸ್ತುತಮೆನಿಸಿರ್ದ ಬಿಳಿಯ ಹೂಲಿಯ [12]ಬೇರಿಂ ||
ವಿಸ್ತರಿಸಿದ ರಕ್ಷೆಯದೇ |
[13]ಶಸ್ತ್ರಂ ತೊಡೆದಿೞಪಲೞ್ಗುಮಾ ತೇಱ ವಿಷಂ || ೫೦ ||

1. ಬ್ರಹ್ಮಬೀಮಂ ತದ್ವಿದ (ಗ) 2. ಮೂರ್ಛಿತಗಿದೆಪಶ್ಚಿಮ (ಕ) ನವಪಶ್ಚಿಮದಂದಂ 3. ದೀಪರ ನಿಂದ್ರ. 4. ದೀಪದಿನಾಪ್ರಸಿ (ಕ) ದೀಪನದಿನ (ಗ) 5. ಬೀಜಮಂ ಚಾ | ಪಲಚಿತ್ತನಾಗದೆಯದಂ ಕಣಿಕಾಗ್ರದೊಳಿಟ್ಟೆಳುಂಪಲುಂ (ಕ) (ಘ) ಸುರೂಕ್ಷಿತಮಾದುದು ರೊಂಪಬೀಜ ನಿಷ್ಪಾಪಮ (ಗ) 6. ಕಣಿಕೆಯಗ್ರ (ಖ) ಗಣಜಿಲೆಯಗ್ರ (ಕ) 7. ಟಂಕಣ (ಕ) 8. ಯಾಂಟಿದ (ಗ) 9. ಸೀಳಮದುಂ (ಕ) 10. ದಿನದಲ್ಲಿ ತಂದುತೇಱ್ಮಿಡಿದುದೆನಲ್ತೆತ್ತಿಸಿ ಕಣಿಕೆಯ (ಘ) 11. ತುದಿಯಲ್ಲಳು ಪುತ್ತಿಕೆ ತಿಳಿಗುಂ ಮರಳ್ದು ಮೇರಿಸಲೇರಂ (ಗ) 12. ಬೇರಂ (ಗ) 13. ಶಕ್ತಂ (ಕ)ಯದುಂ ಶಸ್ತ್ರಂ (ಘ)

* (ಗ) ಪ್ರತಿಯಲ್ಲಿಲ್ಲ.

*ಮ॥ ಸ್ರ॥ ಬದರೋದ್ಯಚ್ಛಾಖೆಯಂ ಕಂಟಕಸಹಿತಮದಂ ತಂದು ಬಿೞ್ದಿರ್ದ ಶುಂಡಾ |
ಲದ ಲಂಡಂಗೂಡಿ ಪುಟ್ಟಿರ್ದಸೆವ ಕೊಡೆಗಳಿಂ ಭಾನುದುಗ್ಧಪ್ರಯೋಗ ॥
ಕ್ಕೊದವಿರ್ದಾ[1]ಬೇೞಿ ಪಣ್ಣೊಳ್ಗಳವೆರಸಲ್ ಮರ್ದನಂಗೆಯ್ದುದರ್ಕಂ |
ತದಱಿಂದಂ [2]ಮುಟ್ಟಸಲ್ಕೇಱಿೞಿಪಲಿೞಿಗುಮಂತಂತೆ ತೇೞುಗ್ರತಾಪಂ ॥ ೫೧॥

ಕಂ॥ †ಏಱಿಸಲೇಱಿದ ಮುಳ್ಳಿಂ |
ದೇಱುಗುಮಿೞಿದಿರ್ದ ಮುಳ್ಳಿನಿೞಿಗುಂ ಮತ್ತಂ ॥
[3]ಬೇಱೆರ್ವನ ನಾಂಟಲ್ ವಿಷ |
ಮೇಱುಗುಮಿೞಿಪಲ್ಕಮಿೞಿಗುಮಿಂತಿದು ಚಿತ್ರಂ ॥ ೫೨ ॥

‡ಮ॥ಸ್ರ॥ [4]ಇದು ಸಾತಾವೇದನೀಯಾಸ್ಪದಮೆನಿಸಿದ ಹಾಳಾಹಳೋಗ್ರಾಗ್ನಿ ಗಂಗಾ |
ನದಿ ಯೆಂತಂತೆಂಬಿನಂ ಪೇೞ್ದ[5]ಱಿಸೆವ ಚಮತ್ಕಾರಮಂ ಸಾರಮಂ ನೋ ॥
ೞ್ಪುದು ಭವ್ಯರ್ ಪ್ರೇಮದಿಂದಂ ಭಲರೆ ಯೆನೆ ತದೀಯಂಗಳಂ ಮಾೞ್ಪುದೀ ಕೋ |
ವಿದರಪ್ಪರ್ ಭಾವಿತಾತ್ಮರ್ ಪರಹಿತಚರಿತರ್ ಮಂಗರಾಜೋಕ್ತಿಯಿಂದಂ ॥ ೫೩ ॥¶

— ಗದ್ಯ —

ಇದು

ಸಕಲವಿದಮಲ ಜಿನೇಂದ್ರೋಕ್ತಸಿದ್ಧಾಂತಪಯಃಪಯೋನಿಧಿಪಾರಗ
ಶ್ರೀಪೂಜ್ಯ ಪಾದಮುನೀಂದ್ರ ಚಾರುಚರಣಾರವಿಂದ
ಗಂಧಗುಣಾನಂದಿತಮಾನಸಂ
ಶ್ರೀಮದಖಿಲಕಳಾಗಮೋತ್ತುಂಗ
ಮಂಗವಿಭು
ವಿರಚಿತಮಪ್ಪ

## ಖಗೇಂದ್ರ ಮಣಿದರ್ಪಣದೊಳ್

[6]ವೃಶ್ಚಿಕ ವಿಷಹರಣ ಚಿಕಿತ್ಸಾಧಿಕಾರಂ
ಏಕಾದಶಂ.
(ಮಂಗಳಮಹಾಶ್ರೀ.)

---

1. ವಿರ್ದಾ ಚಳ್ಳಪಣ್ಣೊಳ್ಗಳ (ಘ) ತೇಳಪುಣ್ಣೊಳ್ಮಳ ಪುಣ್ಣೊಳ್ಕಳತೊಡವೆರಸಲ್ಮರ್ದನಮಂ(ಗ) 2. ಮುಟ್ಟೆಸೆಂತಿಳಿೞಿಪ (ಕ) 3. ಮೋಱಲ್ಕಿರ್ದನ (ಖ) 4. ಇದಸಾತಾವೇದನೀ (ಖ) ಇದು ಸಾಕ್ಷಾದ್ವೇದನೀ (ಘ) ಇದು ಸಾಕ್ಷಾದೇವನೀಯ (ಗ) 5. ಱಿಸೇಯೆ (ಘ) 6. ಅಷ್ಟಾದಶವೃಶ್ಚಿಕವಿಷಚಿಕಿತ್ಸಾವಿವರಣಂ ಏಕಾದಶಾಧಿಕಾರಂ (ಕ) ವೃಶ್ಚಿಕವಿಷಾಪಹರಣಾಧಿಕಾರಂ ಏಕಾದಶಾಶ್ವಾಸಂ (ಘ) ದಶಮಾಧಿಕಾರಂ (ಖ) ವೃಶ್ಚಿಕ ವಿಶೇಷ ವಿಷಹರಣ ಚಿಕಿತ್ಸಾವಿವರಣಂ ನಾಮೈಕಾದಶಾಶ್ವಾಸಂ ಸಮಸ್ತಂ (ಗ)

* ಇಲ್ಲ. † (ಗ) ಪ್ರತಿಯಲ್ಲಿಲ್ಲ.
‡ ಮತ್ತೇಭವೃತ್ತ (ಗ) ¶ ಇಲ್ಲಿಯೂ ಮಾಲಿನೀವೃತ್ತವಿಲ್ಲ.

# ದ್ವಾದಶಾಧಿಕಾರಂ

## [1]ಮೂಷಿಕವಿಷಪ್ರಕರಣಂ.

ಕಂ॥ ಶ್ರೀ ವೀರಜಿನಾಧೀಶಂ |
ದೇವರ ದೇವಂ ಜಗತ್ತ್ರಯಾಧಿಪನನಘಂ ॥
ಪಾವನಮಂ ಕ್ಷಾಯಿಕವರ |
ಭಾವಮ[2]ನೆಮಗೀಗೆ ಮುದಮನಮೃತಾಸ್ಪದಮಂ ॥ ೧ ॥

ವಿಷಯವಿಷರಹಿತ [3]ರಪ್ಪೀ |
ಋಷಿಜನವಂದ್ಯನ ಪದಾಬ್ಜಮಂ ಭಾವಿಸಿ ನಾಂ ॥
ಸುಷಮಮಾಧ್ಯಾನದೆ ಮೂಷಕ |
ವಿಷಭೇದಮನವಱ ವೈದ್ಯಮಂ [4]ಪ್ರಕಟಿಸುವೆಂ ॥ ೨ ॥

ಶಾ॥ ಶ್ವೇತಂ [5]ಕೃಷ್ಣ ನಲಕ್ತಕಂ ಕಪಿಲನುಂ ನೀಲಾಭ ಧೂಮ್ರಾಭ ಮಾ |
[6]ಪೀತಂ ಪಿಂಗಲಲೂತಿದಂಷ್ಟ್ರ ಕಪಿಲ ಕ್ರೋಡಾಸ್ಯ ದೀರ್ಘಾಸ್ಯ ಸಂ ॥
ಭೂತಂ ಕಾವಳ ದೀರ್ಘಕರ್ಣ ಕಳಕಂಠಂ [7]ರೇಣುಕಾಂಗಂ ಲಸ |
ತ್ಖ್ಯಾತಂ ಪುಚ್ಛವಿಹೀನನೆಂದು [8]ಪದಿನೆಣ್ಭೇದಂಗಳಕ್ಕಾಖುಗಳ್ ॥ ೩ ॥

ಮ॥ ನರರಂ ಕೋಪದೆ ಕಚ್ಚಲಂತವದಱಿಂ [9]ಕಂಡೂತಿಯುಂ ದಾಹಮುಂ |
[10]ಜ್ವರಶೂಲಂ ವಮನಂ ಭ್ರಮಂ ಮಱುಕಮುಂ ಲಾಲಾಸ್ರವಂ ಗ್ರಂಥಿಯುಂ ॥
[11]ಪಿರಿದುಂ ಶೋಷಮು [12]ಮೈಕಿಲುಂ ಮರಣಮೆಂಬತ್ಯಂತ ದುಃಖಂಗಳು |
ಬ್ಬರಮಕ್ಕುಂ ಕೃಪೆಯಿಂ ಜನಕ್ಕಱಿಪುವೆಂ ತನ್ಮಂತ್ರ ತಂತ್ರಂಗಳಂ ॥ ೪ ॥

ಮಂತ್ರಂ—ಓಂ ನಮೋ ಭಗವತೇ [13]ಪಾರ್ಶ್ವನಾಥಾಯ ಧರಣೇಂದ್ರಪದ್ಮಾವತೀ ಸಹಿತಾಯ [14]ಪ್ರಾಂ(ಪಾಂ), ಖ್ರೋಂ, ಪಾಂ, ಘ್ರಾಂ ಖ್ರೋಂ ಪ್ರಾಂ, ಬಾಂ, ಭಾಂ ಖ್ರೋಂ, ಪಾಂ, ಭ್ರಾಂ, ಖ್ರೋಂ ಭ್ರಾಂ.

---

1. ಮೂಷಕಾಧ್ಯಾಯಂ (ಕ) ನಮಸ್ಸಿದ್ಧೇಭ್ಯಃ - ಇಲಿಯ ವಿಷಕ್ಕೆ (ಖ) 2. ನೆನಗೀಗೆ ಮುದದಿನ (ಕ) 3. ರಹಿತರೆನಿಪೀ (ಖ) ರಹಿತನಪ್ಪೀರುಷಿ (ಗ) ರಪ್ಪರ್ಋು (ಘ) 4. ವಿವರಿಸುವೆಂ (ಘ) 5. ರಕ್ತನಲಕ್ತ (ಘ) ನರಕ್ತಂ (ಕ) 6. ಪೀತಂಗಳ (ಗ) ಗಳಲೂಶ್ರಿದಂಷ್ಟ್ರಿಕಬಲಿ ಕ್ರೋಡಾಸ್ಯ ದೀರ್ಘಾಸ್ಯ (ಘ) ಕ್ರೋಡಾಪ (ಕ) 7. ರೇಣುಕಾಂಲಸಖ್ಯಾತಂ (ಗ) ರೇಣುಕಾಂಗಂ ಲಸತ್ಸ್ವಾಖ್ಯಮಂ (ಘ) 8. ಪದಿನೇೞ್ಭೇದಂಗ (ಘ) ಪದಿನೇಳುಭೇದಂ (ಗ) 9. ಲಂತದಱನಿಂ (ಘ) ಱಕಂಮಾಡಿಯುಂ (ಗ) 10. ಸ್ವರ (ಗ) ಜ್ವರಶೂಲಾ (ಘ) 11. ಖರಿತಂ (ಕ) ಪಿರಿದುಂ ದೋಷಮು (ಗ) 12. ಮೈಕೆಯುಂ (ಕ) 13. ಪಾರ್ಶ್ವತೀರ್ಥಂಕರಾಯ (ಘ) 14. ಪ್ರಾಂ, ಭ್ರೋಂ, ಪಾಂ, ಬಾಂ, ಭ್ರೋಂ, ಭಾಂ, ಭ್ರೋಂ, ಭೋಂ (ಭ್ರಾಂ) ಭ್ರಾಂ, ಭ್ರಾಂ (ಗ)

ಕಂ|| ಈ ಮಂತ್ರದಿಂದೆ ತೊಳೆದಿಂ |
ತೀ ಮಂತ್ರ[1]ದೊಳೆಸೆವ ಮರ್ದ್ದನಿಕ್ಕುವು[2]ದಱಿಂ ||
ಈ ಮಂತ್ರದ ದಿವ್ಯಮಹಾ |
ಸಾಮರ್ಥ್ಯದಿನಱಿಗುಮಖಿಳ ವಿಷಮದ(ನ)ವೋಘಂ || ೫ ||

ವ|| ಮಂತ್ರಂ (ಮತ್ತಂ)† ಮಂತ್ರಾವತಾರಂ—

ಮಂತ್ರಂ—[3]ಬೇಲಿಯಲಿ(ಲ್ಲಿ)ರ್ಪನ, ಬೆಕ್ಕುಳುವಾಲನ, ಮಚ್ಚಕ್ಕಿವಲ್ಲನ, ಗುರುಗಂಜಿಗಣ್ಣನ, ನೀಕಚ್ಚಿದ ಕಚ್ಚನಾ (ನವಾ) [4]ಬಂದುವೋದಲ್ಲಿ ಕಲಿಕಲ್ಲ ವಿಷವಿದ್ದೆಡೆ ಭಿಲ್ಲಾದೇವಿ ಯಾಣೆ ಕೊಲ್ಲಾಪುರದ ಬನ್ನಿ ಮಹಾ(ಹಃ) ಕಾಳಿಯಾಣೆ, ಗರಳದ ಭೈರವನಾಣೆ ಕುಕ್ಕುನೂರಕ್ಕನರಾಣೆ.

ಕಂ|| ತುಂಬುವುದುದಕಮುಮಂ ತಾ |
ನಿಂಬಿನೊಳಂ [5]ಕೈಪೆ ಸೊರೆಯ ಗುಂಡಿಗೆಯೊಳ್ ಮೂ ||
ಱಿಂಬ ದಿನಂ[6]ಬರಮಿರಿಸಿದು |
ದಂ ಬಿಡದಭಿಮಂತ್ರಿಸುವುದು [7]ಸೂಱ್ಮೊಱುವರಂ || ೬ ||

ಕುಡಿಸಲ್ಕಂತಾ ಜಳಮಂ |
ಕಿಡುಗುಂ ಮೂಷಕವಿಷಂಗಳಾ ಕ್ಷಣದಿಂದಂ ||
ಕುಡುವುದು [8]ಪಥ್ಯಂಗಳೊಳಂ |
ತೊಡಗೂಡಿದ ಸಾವೆಯೋಗರಂ ತಕ್ರಮುಮಂ || ೭ ||

ವಿಂಧ್ಯ(ದ)ದೊಳೊಪ್ಪಿರ್[9]ಪೆಳೆದಾ |
ವಂಧ್ಯಾ ಕರ್ಕೋಟಕಾಖ್ಯಮಂ ಮಜ್ಜಿಗೆಯಿಂ ||
[10]ದಂ ಧ್ಯಾನಿಸದಿ(ಲಿ)ಂಟಲೊಡಂ |
[11]ಸಂಧ್ಯಾಭ್ರಮೆನಲ್ಕಮಾಖುಗಳ ವಿಷಮ(ಮಿ)ಱಿಗುಂ || ೮ ||

ತಂತ್ರಂ—

ಚಂ|| ಸುಲಲಿತ ಸಿಂಧುವಾರ ವರನೀಲಿ ನಿದಿಗ್ಧಿಕೆ ಯರ್ಕಮೂಲ ಪಿ |
ಪ್ಪಲಿ ಮಿರಿ(ಳಿ)ನಾಗರಂ ಬಿಳಿದೆನಿಪ್ಪ ಪುನರ್ನವಿ ಯೆಂಬಿವೆಲ್ಲಮಂ ||
ಜಲದೊಳೆ ಕೂಡಿ ಕೊಂಡರೆದುದಂ ಕುಡಿಸಲ್ ಬಹುವರ್ಣಮಾಗಿ ತೋ |
ರ್ಪಿಲಿಗಳ ಪೆರ್ಗ್ಗಣಂಗಳ ವಿಷಂಗಳುಮಂ ಕಳೆಗುಂ ಬುಧೋತ್ತಮಾ || ೯ ||

1. ದೊಳೆಸಕಮರ್ದ (ಕ) ದಿನೆಸೆವಮರ್ದ (ಖ) 2. ದದಱಿಂ (ಗ) 3. ಬೇಲಿಯಲಿರ್ಪ ಚಿಕ್ಕಳು (ದಾಯನಮೆ) ನುಚ್ಚಕ್ಕಿಹಲ್ಲನೆ—ವೋದಲಿ ವಿಷವಿದ್ದೆಡೆಬಿಲಾದೇವಿ—ಕುಕ್ಕನೂ(ಗ) ಬೆಕ್ಕುಗಳವಾಲನ ನುಚಕ್ಕಿನಕುಲ್ಲನ ಗರುಡಿಗಂಚಿ ಗಣ್ಣನ....ಭೂದೇವಿಯಾಣೆ....ಗಣಧರ ಭೈರವ(ಖ) ಬೇಲಿಯು ಮೇಲಿರ್ಪನ—ನುಚ್ಚಕ್ಕಿನಕುಲ್ಲನ——ವದಹಿದ್ದಲ್ಲಿ ವಿಷಮಿರ್ದೊಡೆ ಭೂದೇವಿಯಾಣೆ ಕೊಲ್ಲಾ—ಗಣಧರ ಭೈರವನಾಣೆ ಕುಕ್ಕು—(ಘ) 4. ಬಂದವೊದವಿಕಲ್ಲಿವಿಷವಿರ್ದಡೆಬಲಾ....ಭೈರವನಾಣೆ (ಖ) 5. ಕೈಪೆಸೋರೆಗುಂ (ಘ) ಸೋರೆಯ (ಗ) 6. ಬರಮಿಾಸದುದಂ. 7. ಮೂಱ್ಸೂಱದನುಂ (ನದಂ) (ಘ) ಸೂಱ್ಮೂಱುವರಂ (ಖ) 8. ಪದ್ಯಂಗದೊಳಂ—ತಕ್ರದೊಳಂ (ಗ) 9. ಪುಟ್ಟದ (ಕ) ಪುಟ್ಟದವಕ್ಷ್ಯ ಕರ್ಕೋಟಕಾಜ್ಯಮಂ ಮಜ್ಜಿಗೆಯುಂಡಂ ಧ್ಯಾನಿಸ (ಗ) 10. ದಂ ಬಿಸಲೀಂಟಲೊಡಂ (ಕ) ದಂದೊಸದಿದೀರ್ಂಟ (ಖ) 11. ಸಂಧ್ಯಾಭಮೆ (ಗ) ಸಂದಭ್ರಮೆ ನಂಜಿನಾಬುಗಳ್ (ಖ) † ಮಂತ್ರಾಂತರಂ (ಘ)



ಕಂ|| ತಿಲದನಿತು [1]ವತ್ಸನಾಗ(ಭ)ನ |
ನಲಸದೆ ರಜನೀದ್ವಯಂಗಳಂ ಗಣಜಿಲೆಯುಂ ||
ತುಲಸಿಯ ಬೇರ್ಗಳನಿಂಬಿಂ |
ಜಲದಿಂದತಿಸಣ್ಣ[2]ಮಾಗಲರೆವುದು ಬಱಿಯಂ || ೧೦ ||

*ಇಲಿಗಳ್ ಕಚ್ಚಿದ ಮನುಜಂ |
ಗೊಲಿದೀವುದು ಪಾನನಸ್ಯವಿಧಿಗಳೊಳಂ ತಾಂ ||
ತೊಲಗುಗುಮಾಖುವಿಷಂಗಳ್ |
ಪ(ಬ)ಲವಾದೊಡಮಾ ಕ್ಷಣಂ ವಿಚಕ್ಷಣತಿಲಕಾ || ೧೧ ||

ಪೊಸತೆನಿಪ ಸಿಂಧುವಾರದ |
ರಸದಿಂದರಿದಾಳ ಕೋಷ್ಠ ಶಿಲೆ(ರಿ)ಯೆಂ[3]ಬಿವ ನಿಂ ||
ತಸುವೆಯೊಳರೆದೀಂಟಲೊಡಂ |
ವಸುಧೆಯ ಮೂಷಿಕವಿಷಂಗಳೆಲ್ಲಂ ಕಿಡುಗುಂ || ೧೨ ||

ಸಿರಿಸದ ಪುಷ್ಪದೊಳಂ ತಾ |
ಮರಿದೆನಿಸಿದ [4]ವತ್ಸನಾಗ(ಭ)ನಂ ತಿಲದನಿತಂ ||
ಬೆರಸಿ ಕುಡಿಸಲ್ಕಮಿಲಿಗಳ್ |
ಭರದಿಂ ಕರ್ಚಿದ ವಿಷಂಗಳೆಲ್ಲಂ ಕಿಡುಗುಂ || ೧೩ ||†

*ಶ್ವೇತಾರ್ಕದ ಕೋರಕ [5]ಕೋ |
ಶಾತಕಿ [6]ಯಂಕೋಲಮೆಂಬಿವಱ ಮೂಲಮುಮಂ ||
ಶೀತಜಲದಿಂದೆ ಕುಡಿಸಲ್ |
ಭೂತಳದಿಲಿಗಳ ವಿಷಂಗಳೆಲ್ಲಂ ಕಿಡುಗುಂ || ೧೪ ||

*ಶರಪುಂಖಿಯ ಬೇರೊಂದಂ |
ಬೆರಸರೆದಜಮೂತ್ರದಿಂದೆ ಪಾನಂಗೆಯ್ಯ ||
ಲ್ಕರಿದೆನಿಪ ಮೂಷ(ಷಿ)ಕಂಗಳ |
ಗರಳಂ ಪಱಿಪಡೆ(ಡು) ಗುಮೆಂದನಪಗತಕಲುಷಂ || ೧೫ ||

[7]ಎರಡೊಂದು ಭಾಗಮಾಗಿರ |
ಲರೆ ಹುಣಿಸೆಯ ಪಣ್ಣಮಿಲ್ಲಣಂ ಘೃತದೊಳವಂ ||
ಬೆರಸೇಱದಿನಂ ಕುಡಿಯಲ್ |
ಪರೆಗುಂ ಮೂಷಕ ವಿಷಂಗಳೆಲ್ಲಂ ಕ್ರಮದಿಂ || ೧೬ ||

1. ವತ್ಸನಾಭನ (ಕ) 2. ವಾಗಿಯರೆವುದು (ಗ) 3. ಯೆಂಬಿವಂ ನಿರಸುವೇಗದೊಳರೆ (ಗ) ಯೆಂಬಿವನೀಂ | ಹಸುಗೆಯೊಳರೆದೀಂಟಲ್ (ಘ) 4. ವತ್ಸನಾಭವಂತಿರಂನಿತಂ (ಗ) 5. ಕೋನರ (ಖ) 6. ಯೆಂಕೋಲೆಯೆಂ (ಘ) 7. ಎರಕೊಂಡು (ಗ)

* (ಗ) ಪ್ರತಿಯಲ್ಲಿಲ್ಲ. † (ಕ) ಪ್ರತಿಯಲ್ಲಿಲ್ಲ.

ಕಂ॥ ಲವಣ ಸಮೇತಂ ಜಲದಿಂ |
[1]ನವತರ ಮೆನಿಸಿರ್ದ ಪದ್ಮಕೇಸರಮಂ ಕೊಂ ॥
ಡವಯವ[2]ದೊಳೀಂಟಿ ಕಿಡುಗುಂ |
ಭುವನದೊಳಿಲಿಗಳ ವಿಷಂಗಳಮಳಚರಿತ್ರಾ ॥ ೧೭ ॥

## ಅಂಜನಂ.

ಕಂ॥ ಅನುಪಮಮೆನಿಸಿದ ಮೊಲೆ ವಾ |
[3]ಲ್ವನಿಯಿಂ ಮಂ[ಜರನ ದಶನಮ]ಂ ತೇದೆಚ್ಚ ॥
ಲ್ಕೆ ನಯಂ ಮೂಷಕವಿಷ ಮಿ |
ರ್ದನಿತುಂ ಕಿಡುಗುಂ ಕುದೃಷ್ಟಿಜನದೂರ(ಗತಾ)ತರಾ ॥ ೧೮ ॥

*ಸ್ವಪರೋಪಕಾರದಕ್ಷಂ |
ನೃಪತರು [4]ತೞ ವಾಯುವಿಳಂಗದೊಳ್ಕೊನರ್ಗಳನಿಂ ॥
ತುಪಯುಕ್ತ ದಧಿಯಿನೀಂಟಲ್ |
ಸಪದಿ ಮಹಾಮೂಷಕೋಗ್ರ ವಿಷತತಿಯಿಱಿಗುಂ ॥ ೧೯ ॥

*ವಿನುತಮ[5]ಳಾಬುವಿನೊಪ್ಪುವ |
ತನಿ[6]ರಸಮಂ ಕೊಂಡು ಪೂಸಲಂತಾ ಕ್ಷಣದೊಳ್ ॥
ಘನತರಮೆನಿಪಾಖು ವಿಷಂ |
ತನುವಿಂದಂ ಪಿಂಗುಗುಂ [7]ಲಸತ್ಕವಿತಿಲಕಾ ॥ ೨೦ ॥

*ಘುಱಿಲನೆ [8]ಚಕ್ರಾಂಗಿಯುಮಂ |
ಕಱಿಯಿಂದರೆದೀಂಟೆ ಕಿಡುಗು [9]ಮಾಖುಗಳ ವಿಷಂ ॥
[10]ಅಳಿಯಿಂದುತ್ತರಣೆಯ ಬೇ |
ರ್ಗಳುಮಂ ಮೇಣ್ ಕುಡಿಸೆಯುಂ ವಿದಗ್ಧಾಭರಣಾ ॥ ೨೧ ॥

ಭರದಿಂದ ಮಿಂದ್ರವಾರುಣಿ |
ಕರಂಜಮೆಂಬಿವಱೊಳೊಂದನಳಿಯಿಂ ಕುಡಿಸಲ್ ॥
[11]ಪರಿಹರಿಕುಮಾಖುಗಳ ವಿಷ |
ಮಿರದೆಂದಂ ಪಂಚಗುರು ಪದಾಂಬುಜ ಮಧುಪಂ ॥ ೨೨ ॥

---

1. ನವರಸ (ಕ) ದನವರ (ಗ) 2. ದ್ಯೆಂಳೀಂಟಿ. 3. ಲ್ವನಿಯಂ—ಚ್ಚಲ್ವನಯಂ—ತದೃಷ್ಟಿಜನದೂರಕರಾ (ಗ) ಲ್ವನಿಯಿಂ ಮಂಜೀರನ (ಕ) 4. ನೃಪತರುನಾಱ್ವೇೞ(ಗಳೆ) ? ವನೆಸೆವಕೊನರ್ಗಳಂತಂ । ದುಪಯುಕ್ತ(ಘ) ನಾಯ್ವೇಳದೊಕೊರ್ನರ್ಗಳಂತಂ । ದು (ಖ) ನಾಯ್ವಿಳಂಗಳೊಳ್ಕನ (ಕ) 5. ಮಳಾಂಬುವಿನೊ (ಕ) 6. ಸರಮಂ (ಕ) 7. ತನುವಿಂ ಪಿಂಗುಗು ಲಸತ್ಕವಿಕುಲತಿಲಕಾ (ಕ) 8. ಚಕ್ರಾಂಕಿಯು (ಕ) 9. ಮಾಖುವಿಷಂಗಳ್ (ಖ) 10. ಅಳಿಯಿಂ ಮತ್ತ (ಗ) 11. ಪರೆಗುಂ ಮಾಖುಗಳ ವಿಷಮಿರದುಂ ಗುಣವಾರ್ಧಿಚಂದ್ರ ಮಂಗನಮತದಿಂ (ಗ)

* (ಗ) ಪ್ರತಿಯಲ್ಲಿಲ್ಲ.



## [1]ಧೂಪವಿಧಿ

ಕಂ॥ ಉರಗದ ಹೆರೆ ನಗರೆಯ ಪಣ್ |
ಬೆರಸಿದ [2]ಬೆಕ್ಕಿನ ಪುರೀಷಮಂ ಧೂಪಮನಿ ॥
ತ್ತಿರದದನೆ ಪಾನಮಂ [3]ಮಾ |
ಡಿರದಱಿಗುಂ ಪಲವೆನಿಪ್ಪ ಮೂಷಕನ(ದ)ವಿಷಂ ॥ ೨೩ ॥

## ಕವಳಂ

ಕಂ॥ [4]ಘನನಾದಿ ಕರಿಯ ಕನಕದ |
ಕೊನರಂ [5]ಕ್ಷೀರದೊಳಮಟ್ಟು ಮೇಲಿಕ್ಕುವುದುಂ ॥
ಘನದಾಡಂಬರಮೆಂ[6]ತಂ |
ತನಿಲನಿನಱಿಗುಂ ಸಮಸ್ತ ಮೂಷಕ ವಿಷಮುಂ ॥ ೨೪ ॥

ಕನಕದ ಕೊನರಂ ತಾಳಿಸಿ |
ತಿನೆ ತೈಲಾಜ್ಯಂ[7]ಗಳೊಡನೆ ಮೂಷಿಕನಿಂದಂ ॥
ತನು[8]ಗೇಱಿದ ವಿಷಮಾಗಳ್ |
ಕನಕದ ದೆಸೆಯಿಂ ದರಿದ್ರಮಱಿವಂತಱಿಗುಂ ॥ ೨೫ ॥

ಉ॥ ಕಲ್ಲೊ[9]ಳಗಿಟ್ಟು ಮರ್ದಿಸುಗೆ ವಜ್ರಿಯ ದುಗ್ಧದೊಳಂ ಕುಸುಂಬೆಯು |
ತ್ಫಲ್ಲ ಶಿಖಿ[10]ಪ್ರಶಸ್ತತರು ಮೂಲಮನಿಂತು ತದೀಯಮಪ್ಪುವಂ ॥
[11]ಛಲ್ಲಿಗಳಂ ಬಱಿಕ್ಕ ವಟಕಂಗಳ[12]ನಾಗಿಸಿ ಗುಂಜಿಯಂತಿರೊಂ |
ದಲ್ಲದೊಡೆರಪ್ಪಲಮ[13]ನೀಕ್ಷಿಸಿ ಕೊಳ್ಳಲಿನಂಜು ಮಗ್ಗುಗುಂ ॥ ೨೬ ॥

ಕಂ॥ ಮರಿಚ ಮೆರಡರಿಸಿನಂ ನಾ |
ಗರ [14]ಕಣವೆರಸರ್ಕಮೂಲ ಮಣಿ[15]ಶಿಲೆಯಂ ಕೊಂ ॥
ಡರೆದಿರದೆ ಲೇಪಿಸಲ್ಕದು |
[16]ಪಿರಿದೆನಿಸಿದ ಮೂಷಕೋಗ್ರವಿಷಮಂ ಕಳೆಗುಂ ॥ ೨೭ ॥

[17]ಮರವಱಹೆ ಕಡವು ಸರ್ಷಪ |
ಸುರುಚಿರ [18]ಕುಂಕುಮಮುಮೆಲ್ಲಮಂ ಕೂಡಿ ಬಱ ॥
ಕ್ಕರೆದಿರದೆ ಲೇಪಿಸಲ್ಕ[19]ದು |
ಗಿರಿಕಾಯುವ ವೃದ್ಧ ಮೂಷಕೋಗ್ರವಿಷಘ್ನಂ ॥ ೨೮ ॥

---

1. ಮೂಷಕವಿಷಕ್ಕೆ ಧೂಪ (ಘ) 2. ಚಿಕ್ಕನರಿವಿಷಮಂ (ಕ) 3. ಮಾಡಿದರಱಿಗುಂ (ಕ) 4. ಘನನಾದೆ ಕಯ್ಯಕೆನ (ಗ) 5. ಕ್ಷೀರಮದೊಳಟ್ಟು ಮೆಲದಿಕ್ಕೂದುಂ (ಗ) ಕುಟ್ಟಿಮೆಲಲಿಕ್ಕುವುದುಂ (ಕ) 6. ಮೆಂತಂಕನಿಲನಿ (ಗ) 7. ಳೊಡನದಂ ಮೂಷಿಕನಿಂ (ಕ) 8. ತನುಗೆಡದುಱದವಿಷಮಾಗಳೆ(ಕ) 9. ಲ್ಲೊಳಮಿಟ್ಟು. 10. ಪ್ರಶಸ್ತತರುಮೂಲಮುಮಂ ಶತದೀಯಮಪ್ಪುವಚ್ಛಲ್ಲಿ (ಗ) ಮನಿಂತು ತದೀಯಮಪ್ಪುವ (ಘ) 11. ಛಲ್ಲಿಯುಗಳಂ. 12. ನಾಗಿಸು....ದೆಯಂತಿದೊಂದಲ್ಲದೊಡಂ....ರಪ್ಪಲ (ಗ) ನಾಗಿಸುಗುಂ ಜಯತಿರೊಂ (ಕ) 13. ನೀಕ್ಷಿಸಿತೊಳನಿಲಲಿ (ಕ) 14. ಕಣಮೆಸೆವರ್ಕ (ಘ) 15. ಶಿಲೆಯಿವಂತೊಂ (ಕ) ಮಣಿಲೆಯುಮಂ (ಗ) 16. ಮರಿದೆನಿಸಿದ (ಘ) 17. ಹರುಹೆಕಡಮ (ಗ) 18. ಕುಮಮು ಬೆಲ್ಲಮಂ (ಘ) 19. ಲದು ಪರಿಹರಿಕುಂ ಸಕಲ ಮೂಷಕಂಗಳ ವಿಷಮಂ (ಘ) ಲ್ಕದು ಪಿರಿದೆನಿಸಿದ ಮೂಷಕೋಗ್ರ ವಿಷಮಂ ಕಳೆಗುಂ (ಖ)

ಕಂ|| *[1]ಕುಳಿಮಾವು ಗಂಧಕಂಗಳ್ |
ಬೆಱಲೊಪ್ಪುವ[2]ಹಗಿನದೊಂದನರಿದಾಳದೊಳಂ ||
[3]ಛಳಿಯದೊಳಂ ಪೂಸಲೊಡಂ |
ತಿಳಿಗುಂ ಮೂಷಕವಿಷಂಗಳಧಿಕಗುಣಾಢ್ಯಾ|| || ೨೯ ||

*ಯುಕ್ತ ಕಪಿತ್ಥದ [4]ಹಗಿನಾ |
ಲಕ್ತಕರಸ ಚಂದನಂ ಜವಾದಿಯಿವಂ ಸಂ ||
ಯುಕ್ತಮದಾಗಿರೆ ಪೂಸಲ್ |
ಸೂಕ್ತಂ ತಾನಿಲಿಯ ಗರಳಮಂ ಪರಿ(ಸಂ)ಹರಿಕುಂ || ೩೦ ||

* ಘನನಾದಿ ರಸಾಂಜನ ನರ |
ವನಿತಾಸ್ತನದುಗ್ಧ ಮೊಂದಿರಲ್ ಪೂಸಲೊಡಂ ||
[5]ಕನಲ್ದಾಖುಗಳಗಿದ ವಿಷಂ |
[6]ದಿನಪನ ನಿಟ್ಟೆದಿರ [7]ತಿಮಿರದಂತಿರೆ ಕಿಡುಗುಂ || ೩೧ ||

*ವಿನುತಂ ರಸಾಂಜನಂ ಮೇ |
ಘನಿನಾದಂ ಮಧುಕಮೆಂಬಿವಂ ಮೊಲೆವಾಲಿಂ ||
ದನುರಾಗದಿಂದೆ ಪೂಸ |
ಲ್ಕನಿತುಂ ಮೂಷಕ[8]ವಿಷಂ ಕ್ಷಣಾರ್ಧದೊಳೞಿಗುಂ || ೩೨ ||

ವಿನುತರಸಾಂಜನಮುಂ [9]ಮೇ |
ಘನಾದ ಟಂಕಣ ಕಣಂಗಳಂ ನುಗ್ಗಿಯುಮಂ ||
ಮನವೊಸೆದು[10]ಲೇಪಿಸಲ್ ತ |
ತ್ತನುವಿನ ಮೂಷಕ ವಿಷಂಗಳೆಲ್ಲಂ ಕಿಡುಗುಂ || ೩೩ ||

[11]ತರ್ಕದೊಳೇಂ ಘೃತದಿಂದಂ |
ಶರ್ಕರೆಯಂ ಶಿಗ್ರುಮೂಲಮಂ ಬೆರಸಲದಂ ||
ನೀರ್ಕಲಸದೆ[12]ಪೂಸಲ್ ತಲೆ |
ದೋರ್ಕುಮೆ ಮೂಷಕವಿಷಂಗಳವನೀತಳದೊಳ್ || ೩೪ ||

*ತ್ರಿಕಟುಕಮಂ ಚಾತುರ್ಜಾ |
ತಕಮು[13]ಮನಂಜನಮನೆರಡುತೆಱದರಿಸಿನಮಂ ||
ಪ್ರಕಟಮೆನೆ ಪೂಸೆ ಮೂಷಿಕ |
ನಿಕರದ ವಿಷಮಿೞಿಗುಮೆಂದನುಭಯ [14]ಕವೀಂದ್ರಂ || ೩೫ ||

1. ಗುಳಮಾವು (ಘ) (ಟೀಕಿನಲ್ಲಿ ಕುಳಿಮಾವು ಎಂದೇ ಇದೆ) 2. ಹಗಿನುವೊಂದಲರಿದಾ (ಕ) (ಘ) 3. ಚಳಿಯದೆ ಪೂಸಲೊಡಂತಾ (ಕ) 4. ಪೂವಿನಲಕ್ತಕ (ಕ) 5. ಕನಕದ್ದಾರ್ಖುಗಳಗಿದವಿಷಂ (ಕ) 6. ದಿನಪನನಿಟದಿರತಿಮುರ(ಘ) ದಿನಕರನಿದಿರಿಟ್ಟ ದೀಪ. (ಖ) 7. ದಿನಕರನಿಟ್ಟೆದಿರ ತಿಮಿರದಂತಿರಲೞಿಗುಂ (ಕ)8. ವಿಷಂಗಳಾಕ್ಷಣಮುೞಿಗುಂ (ಕ) 9. ಮೇಘನಾದಿ ಟಂಕಣಂಗಳಂ ನನ್ನಿ (ಗ) 10. ಲ್ಕದು | ವಿನುತಂ ಲೇಪಿಸಲ್ತನುವಿನೊಳಂ (ಗ) 11. ನರ್ಕದೊಳೇಂ (ಕ) ತಕ್ರಮುಮಂ ಘೃತಮುಂಸಲೆ | ಶರ್ಕರೆ....... ಲವಂ ||—ಸಲ್ತಲೆ | ದೋರ್ಕುಮೆ (ಘ) ಶಿಗ್ಗ್ರ್ಯಮೂಲ (ಕ) ಶೀಘ್ರುಮೂಲ (ಗ) 12 . ಪೂಸಲ್ ತಾಂತಲೆದೋರ್ಕುಮೆ (ಖ) 13. ಮುಮಂಜನಮನರೆದೆಡುತೆಱಂ (ಕ) 14. ಕವೀಶಂ, ಕವೀಂದ್ರಾ (ಕ)
* (ಗ) ಪ್ರತಿಯಲ್ಲಿಲ್ಲ.



ಕಂ|| [1]ಅಂಕೋಲೆ ಕೋಷ್ಠ ಮಧುಕಮು |
ಮಂ ಕುಸುಬೆಯ ಪೂ [2]ಬಳಾಹಕಧ್ವನಿಗಳೊಳಂ ||
ಸಂಕಿಸದೆ ಬೆರಸಿ ಪೂಸಲೊ |
ಡಂ [[3]ಕರಮುರಿದೆ] ನಿಸಿದಾಖು [4]ವಿಷಮಿರದೞಿಗುಂ || ೩೬ ||

*ಅಸದೃಶದ ಸಿಗ್ರುವಂ ವಾ |
ಯಸ ಬಿಂಬಿ ಕಣಂ ರಸಾಂಜನಂ [5]ಬೆರಸಿದುದಂ ||
ಪೊಸತೆನೆ ಸಣ್ಣಗೆಯಿಂ[6] ಮ |
ರ್ದಿಸಿ ಪೂಸಲ್ಕಾಖುಗಳ ವಿಷಂ ಪ್ರಶಮಿಸುಗುಂ || ೩೭ ||

ಅರಿಸಿನ [7]ವಿಟ್ಟೆಯ ತಿಗುಡೀ |
ಶ್ವರಿ ವಾಕುಜ(ಚಿ)ದೇವದಾಳಿ ಹಯಗಂಧಿಯಿ[8]ವೊಂ ||
ದಿರೆ ಸೊಗಡೆಯೊಳಂ ನೀರಿಂ |
ದರೆದಾಗಳ್ ತೊಡೆಯಲಿಲಿಯ ವಿಷಮದು ಪರೆಗುಂ || ೩೮ ||†

[9]ಪಾರಿವದೆಚ್ಚಂ ಕುಸುಬೆಯ |
ಬೇರಾಜ್ಯಂ [10]ತಿಗ(ವೆ)ಡೆ ದಂತಿ ಸೈಂಧವಮುಂ ತಾ ||
ಮೋರಂತಿರೆ [11]ಕೂಡಿದುವಂ |
ಚಾರಿಸಿ ಪೂಸಲ್ಕಮಾಖುಗಳ ವಿಷ ಮಿೞಿಗುಂ || ೩೯ ||

ಸಾರತರಮೆನಿಪ ಬೇಳೆ(ಚೆಳ್ಳಿ)ಯ |
ಬೇರಂ ಗಣಜಿಲೆಯ ಬೇರುಮಂ ತುಪ್ಪದೊಳಂ ||
ತೋರಂತೆ ಪೂಸೆ ಮೂಷಕ |
ಘೋರವಿಷಂ ಶಿಖಿಯ ಮುಖದ [12]ರಸದಂತೞಿಗುಂ || ೪೦ ||

*[13]ಆಲೋಚಿಸಲೇಂ ಕಣ ಮಂ |
ಕೋಲೆ ಹರೀತಕಿ ವಿಳಂಗ [14]ಕಿತ್ತಾ(ತ್ತೋ)ಕೆ ಯಿವಂ ||
ಲೀಲೆಯೊಳೆ ಪೂಸಲದು ನಿ |
ರ್ಮೂಲಿಸುಗುಂ ಸಕಳಮೂಷಕಂಗಳ ವಿಷಮಂ || ೪೧ ||

1. ಅಂಕೋಲ (ಗ) 2. ಗಳಾಹಕ (ಗ) 3. ಕರಮಿರದೆನಿಸಿದಾ (ಗ) 4. ವಿಷಮುಪಶಮಿಕುಂ (ಕ) ವಿಷಮುಮಶಮಿಕ್ಕುಂ (ಗ) 5. ಬೆರಸಿಯುದಂ (ಘ) 6. ಣ್ಣಿಗೆವೋಲ್ (ಘ) 7. ಸೊವೆಯ (ಕ) ನೌದೆಯ (ಖ) ಸೊಗಡೆಯ (ಗ) ಸಾರೆಯ ? 8. ಯಿವೊಂದಿಂ.... ಗದೆಯೊಳಂ (ಕ) 9. ಪಾರಿವದಚ್ಚಂ (ಗ) 10. ತಿಗದದದತಿ ಸೈಂಧವ (ಕ) 11. ಕುಡಿದುವಂ ಚಾರಿಸಿ. 12. ರಸದಂತಕ್ಕುಂ(ಗ) 13. ಆಲೋಚಿಸಲೆ ಕಂಣಮಂ (ಕ) 14. ಚಕ್ಕಲುರಿಯಿವಂ (ಕ) ಚಿಕ್ಕಲುಉಯಿವಂ (ಖ) [ಟಿಪ್ಪಣಿ—ಅರ್ಥದ ಪ್ರತಿಯಲ್ಲಿ ವಿಳಂಗ ಕಿತ್ತಾತ್ತಕೆ ಎಂಬ ಪದಗಳಿಗೆ ವಾಯುವಿಳಂಗ ಉಮ್ಮತ್ತದಬೇರು ಎಂದು ಅರ್ಥ ಬರೆದಿದೆ. ಕಿತ್ತಾತ್ತಕೆ ಎಂಬ ಶಬ್ದಕ್ಕೆ ಸರಿಯಾದ ಅರ್ಥವಿಲ್ಲ. ಆದುದರಿಂದ ಕಿತವಾಖ್ಯೆ ಎಂದು ತಿದ್ದಿಕೊಳ್ಳಬಹುದು.—ಉನ್ಮತ್ತಃ ಕಿತವೋಧೂರ್ತಃ ಎಂದು ಅಮರ].

*. ಇದು (ಗ) ಪ್ರತಿಯಲ್ಲಿಲ್ಲ.

† ಇಲಿಯಕುಱುಣೆಯ ಕಾಱುವುದಕ್ಕೆ (ಕ)

ಕಂ|| ಕಡವ[1]ದ ತಿಗುಡುಂ ಕುಸುಬೆಯ |
ಕಡುಲೇಸೆನಿಸಿರ್ಪ ಪೂಗಳೊಳ್ [2]ಕೂಡಿದುದಂ||
ಪಿಡಿದ[3]ರೆದುದಕದೊಳಂತಿರೆ |
ಕುಡಿಸಲದಂ ಪೂಸೆ ಮೂಷಿಕಾದಿ ವಿಷಘ್ನಂ || ೪೨ ||

*[4]ಕ್ಷೀರದ್ರುಮದೊಳ್ಸಾರಂ |
ಚಾರುರಸಾಂಜನಮ ನುದಕದಿಂ ಪೂಸಲ್ ಸಂ ||
ಹಾರಮದಕ್ಕುಂ ಮೂಷಕ |
ಘೋರವಿಷಂ ತತ್ಪ್ರಭಾವದಿಂ ಗುಣನಿಳಯಾ || ೪೩ ||

ವ|| ಇಲಿಯಕು(ಕ)ರುಣೆಯಂ ಕಾಱುವುದರ್ಕೆ—

ಕಂ|| ಭರದಿಂದೆ ಕೈಪೆ ಸೊರೆಯೊ |
ಳ್ತಿರುಳಂ ಹೀರೆಯುಮ[5]ನಕ್ಕಿಗರ್ಚಿಂದರೆದಂ ||
ದಿರಲೆಣ್ಣೆಯೊಳೀಂಟಲ್ಕಿಲಿ |
[6]ಗುರುಣೆಯ ವಮನಂಗಳಪ್ಪ [7]ವಿಷಮುದನಱಗುಂ || ೪೪ ||

ಮುದದಿಂದಂ ಬಜೆಯೆರಡುಂ |
ಮದನಫಲಂ ದೇವದಾಳಿಯುಂ [8]ಕೂಡಿರಲಂ ||
ತದನರೆದು ಗೋತದಿಂ ಕುಡಿ |
ಸದು ಕುರುಣೆಯ ವಮನದಿಲಿಯ[9] ವಿಷಮಂ ಕಳೆಗುಂ || ೪೫ ||

ನೆಲ್ಲಿಯ ಬೇರಂ [10]ನೀರಿಂ |
ತಲ್ಲಣಿಸದೆ [11]ಕುಡಿಸಲಿಲಿಯ ವಮನದ ವಿಷಮುಂ ||
[12]ಚ(ಚಿ)ಲ್ಲಫಲದಿಂದೆ [13]ನೀರ್ಕದ |
ಡೆಲ್ಲಂ ತಿಳಿ(ಕಿಡು)ವಂತೆ ತಿಳಿಗುಮದಱಂ ಧರೆಯೊಳ್ | || ೪೬ ||

ಸುರದಾಳಿ ಕೈಪೆ[14]ಸೊರೆಯೊಳ್ |
ಬೆರಸಿದ [15]ಹೀರೆಯುಮನಕ್ಕಿಗರ್ಚ್ಚಿಂದರೆದೀಂ ||
ಟಿರದಱ[16]ಗುಮಿಲಿಗಳಿಂದೋ |
ಕಡಿಸುವ ವಿಷಮುಮಳದೃಷ್ಟಿಕುವಳಯಚಂದ್ರಾ || ೪೭ ||

1. ಕಡವದ ತಿಗುಡುಕುಸುಂಬೆಯ (ಕ) 2. ಕೂಡಿಯುದಂ (ಘ) 3. ದರೆದುದಮೋರಂತಿರೆ ಕುಡಿಸಿಯುದಂ ಪೂಸೆ ಮೂಷಕೋಗ್ರವಿಷಘ್ನಂ (ಘ) 4. ಕ್ಷಾರದ್ರುಮಬೊಳ್ ಸಾರಂ (ಕ) 5. ನಕ್ಕೆ (ಗ) 6. ಕರುಣೆಯುಮವನಂಗಳ್ (ಕ) ಕರುಣೆಯ ವಮನ (ಘ) 7. ವಿಷಮನದಱಗುಂ (ಗ) 8. ವಾಡಿದರಲಂತದ (ಗ) 9. ವಮನಂಗಳಕ್ಕು ಮಿದು ಸಿದ್ಧಾಂತಂ (ಗ) 10. ನೀರಂ (ಕ) 11. ಕುಡಿಯುಲಿಱಯುದಮನದ (ಕ) ಕುಡಿನುಲೀಲೆಯ (ಗ) 12. ಛಿಲ್ಲಫಲ (ಕ) 13. ನಿಕ್ಕದಡಿಲ್ಲಂ (ಗ) 14. ಸೊರೆಗಳ್ (ಕ) (ಗ) 15. ಹರಿಯುಂ ಮನಕ್ಕಿ (ಗ) 16. ಗುಂ ಇಲಿಯವಿಷಮೊಂಗಲೆಗಳುಮುಂತಡು ಪುಸಿಯೇ (ಗ) ಮಿಲಿಗಳಿಂದೋಂಕರಿಸುವ (ಕ)

* (ಗ) ಪ್ರತಿಯಲ್ಲಿಲ್ಲ.



ಕಂ|| [1]ಮುಂಡಿಯ ಪಂಚಾಂಗಮುಮಂ |
ತಂಡುಲದಿಂದಳೆಯೊಳಡುವುದಂಬಲಿಯಂ ಕೊಂ ||
ಡುಂಡೊಡದಂ ಮೂಷಕನಿಂ |
[2]ಖಂಡಮನುದ್ಗರಿಸುವಖಿಳವಿಷಮುದು ಪರೆಗುಂ || ೪೮ ||

* [3]ಅಳೆಯಾರನಾಳಮೆಂಬಿವ |
ಱೊಳೆ[4]ನುಚ್ಚುತ್ತರಣೆ ಬೋಱ[5]ತರದ ಸಮೂಲಂ ||
ಗಳನೆಯ್ದೆ ಬೆರೆಸಿದಂಬಲಿ |
ಕಳೆಗುಂ ಮಱಯಿಲಿಯಿ[6]ನೊಗಿಸುವುದ್ಗಾರಮುಮಂ || ೪೯ ||

ಮ|| ಕರಿಯುಮ್ಮತ್ತಮನೊತ್ತಿ ಬಂದ ರಸದಿಂದಂ ಮೇಷ[7]ತಕ್ರಂ ಸಮಂ |
ಬೆರಸಂತಾ ಯಜಮೂತ್ರದಿಂ ನವಣೆಯಂ [8]ಮಿದ್ದಕ್ಕಿಯಿಂದಟ್ಟುದಂ ||
ಕರಮಿಂಬಿಂ ಸವಿದಾಕ್ಷಣಂ ತಿಲಜಮಂ ಪೂಸಿರ್ದು [9]ತಾನಾತಪೋ |
ತ್ಕರದಿಂ ಸೊರ್ಕ್ಕುವಿನಂ ಬರಲ್ ನೆೞಲೊಳಂದುದ್ಗಾರಮಕ್ಕುಂ ದಿಟಂ || ೫೦ ||

ಕಂ|| ಕುಱುಣೆಗಳಂ ಕಾಱ ಬೞ |
ಲ್ದಿರೆ ಪಾಲೋಗರಮನುಂಬು[10]ದೀರಯ್ದುದಿನಂ ||
ಬರೆಗಂ [11]ಮಾಡೀ ವಿಧದಿಂ |
ಪರಿಹರಿಕುಂ [12]ಮೂಷಕೋಗ್ರವಿಷದುಗ್ರತೆಯಂ || ೫೧ ||

### ಹೆಗ್ಗ (ಪೆಗ್ಗ)ಣಕ್ಕೆ.

ಕಂ|| [13]ಒಡವತ್ತಿಯ [14]ತೊಕ್ಕಿನೊಳಂ |
ದೊಡಗೂ[15]ಡಾಡುಳಿಚ ಶುಂಠಿ ನೆಲಗುಳ್ಳ [16]ಮಿವಂ ||
ಕಿಡುಗುಂ ನೀರಿಂ [17]ಪಾನಂ |
ಗುಡೆ ಪೆಗ್ಗಣದುಗ್ರಮಪ್ಪ ವಿಷಮಾ[18]ಕ್ಷಣದೊಳ್ || ೫೨ ||

1. ಮೇಂಡಿಯ....ಜಲದಿಂದಮಳೆಯೊಳಟ್ಟಂಬಲಿಯಂ|| (ಗ) 2. ಖಂಡಮನುಸರಿಸುವ....ಕಿಡುಗುಂ (ಗ) 3. ಅಳೆಯೂರನಾಳ (ಕ. ಖ) 4. ಮಚ್ಚು. 5. ತರಸದ (ಕ) 6. ನೊ(ನು)ಗಿಸು ಉದಾನ(ರ)ಮುಮಂ (ಕ) 7. ತಕ್ರಾಂಗ(ತ)ಮಂ (ಗ) 8. ಮಿತ್ತಕ್ಕಿಯಿಂದಟ್ಟುದಂ ತರಬಿಂಬಿಂ ಸವಿದಾ (ಗ) 9. ನಾನಾಸೋತ್ಕರದೊಳು ಪೊಕ್ಕುವಿನಂ ಬರಲ್ನೇಳಲೊಳಂ(ಗ) 10. ದಿರದಯ್ದುದಿನಂ (ಗ) 11. ಮಾಡಿದ ವಿಧದಿಂ (ಕ) 12. ಮೂಷಕೌಘ (ಗ) ಕ್ರೂರಮೂಷಕ (ಘ) 13. ವಡವತ್ತಿ (ಘ) 14. ತ್ವಕ್ಕಿನೊಳಂ (ಘ) 15. ಡಾಡಳಿಚ (ಗ) 16. ಮುಮಂ (ಗ) 17. ಪಾನಂದೊಡೆ (ಗ) 18. ವಿಷಮುಂ ಕ್ಷಣದೊಳ್ (ಘ)

* (ಗ) ಪ್ರತಿಯಲ್ಲಿಲ್ಲ.

ಮಾಲಿನಿ || ವರಮನುಮುನಿಗಳ್ ಪೇೞ್ದಾ ಮಹಾವೈದ್ಯಶಾಸ್ತ್ರಂ |
ತರದೊಳವೊಸೆದಿಂತೇನಾನುಮಂ ಪೇೞ್ದೆನಾಖು ||
ತ್ಕರವಿಷಹರಣಾರ್ಥಂ ಮರ್ತ್ಯಲೋಕಕ್ಕೆ ಮಂತ್ರಾ |
ಕ್ಷರವೆರಸಿದ ಮರ್ದಂ ಹೃದ್ಯಮಂ [1]ಸ್ವಸ್ತಿಕಾಮಂ || ೫೩ ||

— ಗದ್ಯ —

ಇದು

ಸಕಲವಿದಮಲ ಜಿನೇಂದ್ರೋಕ್ತಸಿದ್ಧಾಂತಪಯಃಪಯೋನಿಧಿಪಾರಗ
ಶ್ರೀಪೂಜ್ಯಪಾದಮುನೀಂದ್ರ ಚಾರುಚರಣಾರವಿಂದ
ಗಂಧಗುಣಾನಂದಿತಮಾನಸಂ
ಶ್ರೀಮದಖಿಲಕಲಾಗವೋತ್ತುಂಗ
ಮಂಗವಿಭು
ವಿರಚಿತಮಪ್ಪ

## ಖಗೇಂದ್ರ ಮಣಿದರ್ಪಣದೊಳ್

ಅಷ್ಟಾದಶ ಮೂಷಕಭೇದ ತದ್ವಿಷಾಪಹರಣ ಚಿಕಿತ್ಸಾ[2]ವಿವರಣಾಧಿಕಾರಂ
ದ್ವಾದಶಂ
(ಮಂಗಳಮಹಾಶ್ರೀ.)

—

1. ಸ್ವಸ್ಥಕಾಮಂ (ಕ) 2. ವಿವರಣಮೆಂಬ ಪನ್ನೆರಡನೆಯಾಶ್ವಾಸಮಿಂತಿಲ್ಲಿಗೆ (ಗ) ಇತಿ ಮೂಷಕಭೇದ ತದ್ವಿಷಾಪರಣಚಿಕಿತ್ಸಾವಿವರಣಂ ದ್ವಾದಶಾಧಿಕಾರಂ ಶ್ರೀ. ಶ್ರೀ. ಶ್ರೀ. (ಘ)

# * ತ್ರಯೋದಶಾಧಿಕಾರಂ

### ಸರ್ವಜಂಗಮ ವಿಷಮವಿಷ ಚಿಕಿತ್ಸಾವಿವರಣಪ್ರಕರಣಂ.

ಶಾ|| † ಶ್ರೀಮನ್ಮುಕ್ತಿರಮಾಪ್ರಿಯಂ ವಿಗತರಾಗದ್ವೇಷಮೋಹಾದಿಕಂ |
ಕ್ಷೇಮಾಂಗಂ [1]ಕಮಠೋಗ್ರ ನಿರ್ಮಿತವೃಕ[2]ವ್ಯಾಘ್ರೇಭ ವಾರಾಹ ದು ||
ರ್ಗೋವಮಾಯು ಪ್ರಮು[3]ಖೋಗ್ರ ಸರ್ವವಿಜಯಂ ಭವ್ಯೌಘ [4]ಕಲ್ಪದ್ರುಮಾ |
ರಾಮಂ ಪಾರ್ಶ್ವಜಿನೇಶ್ವರಂ ನಮಗೆ ಮಾೞ್ಕಿಷ್ಟಾರ್ಥ [5]ಸಂಯೋಗಮಂ || ೧ ||

ಮ|| ವೃಕಶಾರ್ದೂಲ ಮದೇಭಸೂಕರಚಲದ್ಗೋಮಾಯುಮುಖ್ಯಂ ಮೃಗ |
ಪ್ರಕರಂ [6]ಕಚ್ಛಪ ಶಿಂಶುಮಾರ ಮಕರಾದ್ಯಂಭಶ್ಚರಾನೀಕ ಲಾ ||
ವಕ ಪಾರಾವತಮಾದಿಯಾದ ಖಗಸಂತಾನಂ ರಟನ್ಮಕ್ಷಿಕಾ |
ದಿಕಮುಂ ಕ್ಷುದ್ರಪಿಪೀಲಿಕಾತ್ರಸಕುಲಂ ಸರ್ವಂ ವಿಷಪ್ರಾಣಿಗಳ್ || ೨ ||

ಮ|| ಸುಖಸಂಗೋಷ್ಠಿಯೊಳಂ ನೃ[7]ಕಾಮುಕಿಯರುಂ [8]ಕ್ರೋಧಾಂಗದಿಂದಂ ನಖಾ |
ನಖಿಯಂ ಬಾಲಕರುಂ ಕರಂ ಮುಳಿದು ದಂತಾದಂತಿಯಂ ಮಾಡಲಾ ||
[ನಖ[9]ದಂತಾಹತಿಯೊಳ್] ವಿಷಂಗಳೊಳವಿಂತೆಲ್ಲಂದದಿಂ [10]ದೆಲ್ಲರಾ |
ಮುಖದಿಂದಾದ ವಿಷಕ್ಕೆ ನಾಂ ತಿಳಿಪುವೆಂ ತತ್ತತ್ಪ್ರತೀ[11]ಕಾರಮಂ || ೩ ||

ಕಂ|| ಕರಡಿ ಪುಲಿ ಕುದುರೆ ತೋಳಂ |
ನರಿ ನಾಯ್ ಮೊದಲಾದು[12]ವಡಸಿ ಪಿಡಿದೆಡೆಯೊಳ್ ನೆ ||
ತ್ತರ ನೊತ್ತಿ ಕಳೆದು ಬೞಿಯಂ |
ಭರದಿಂ ಚುರ್ಚುವುದು [13]ಕಾಯ್ದ ಕರ್ಬುನದಿಂದಂ || ೪ ||

[14]ಮಂತ್ರಂ—ಓಂ ನಮೋ ಭಗವತೇ ಪಾರ್ಶ್ವತೀರ್ಥಂಕರಾಯ ಧರಣೇಂದ್ರ ಪದ್ಮಾವತೀಸಹಿತಾಯ ಓಂ ಗ್ರಾಂ, ಗ್ರ, ಗ್ರಂಥಿನಿ ನಮೋ [15]ವ್ಯಾಘ್ರಚೋರಾರಿ ಮಾರಿ ಸ್ಫೋಟಕ ಬಾಧಾಪ್ರಶಮನಕರಿ ಪದ್ಮಾವತಿ ಹ್ರೀಂ ಸ್ವಾಹಾ—

—

1. ಕಮಲೊ(ಳೊ)ಗ್ರ (ಕ) 2. ವ್ಯಾಘ್ರಭ್ರವಾರಾಹುದುಗ್ರೋಮಾಯು (ಗ) ವ್ಯಾಘ್ರೇಭವಾಗಹ ದುಗೋರ್ವಮಾಯು (ಕ) 3. ಖೋಪಸರ್ಗವಿ (ಘ) 4. ಕಲ್ಪದ್ರುಮಂ ರಾಮಂ (ಗ) 5. ಸಂಸಿದ್ಧಿಯಂ. 6. ತಚ್ಛಿಸುಮಾರಮಾರ ಮಕರಾದ್ಯಂಭಶ್ಚರಾನೀಕ ಲಾವಕ ಪಾರಪನಮಾದಿಯಾದ ಖಗಸಂದುಸಂ ರಟನ್ಮಾಕ್ಷುಕಾ....ತ್ರಾಸಕುಲಂ (ಗ) ತತ್ಸಿಸುಮಾರಶೂಕರ ಮಕಾರಾದ್ಯಂಭಶ್ಚರಾನೀಕಲಾವಕ ನೌರಾತಪಮಾದಿ (ಕ) ತಚ್ಛಪಶಿಂಶುಮಾರ....ಲಾವರ ಪಾರಾವತ (ಘ) ತಛ್ಛಿಷ (ಖ) 7. ಕಾಮುಖಿ (ಗ)(ಘ) 8. ಕ್ರೋಡಾಂಗದಿಂದಂ ನಖಾವಳಿಯುಂ ಬಾಲಕರುಂಕರಂ ಮುಳಿಮದಂತಾದಂತಿಯಂ (ಗ) 9. ನಖದಂತಾಹಳಿಯುಂ (ಗ) 10. ತೆಲ್ಲರಿಂ (ಗ) 11. ಕಾರಂಗಳಂ (ಗ) 12. ವದಿಸಿ ಪಿಡಿದೆಡೆಯಂ (ಗ) 13. ಕಾದ (ಕ) ಕಾಯಿದ (ಗ) 14. ನಿರ್ವಂಚಿನವಿಷಕ್ಕೆ ನಖಾನಖಿ ದಂತಾದಂತಿವಿಷಕ್ಕೆ ಮಂತ್ರಂ (ಕ) 15. ವ್ಯಾಘ್ರಂ ಕೋರಾರಿಮಾರಿ ಸ್ಫೋಟಕಂ ಶಬ್ದಪ್ರಶಮನ (ಗ)

* ಇನ್ನು ಪದಿಮೂರನೆಯಾಶ್ವಾಸವು (ಗ)

† ಈ ಅಧಿಕಾರದಾದಿಯಲ್ಲಿ ಶ್ರೀಶಬ್ದಾದಿಯಾದ ಕಂದಕ್ಕೆ ಪ್ರತಿಯಾಗಿ ವೃತ್ತವಿದೆ

### ಪುಲಿಕಚ್ಚಿದ ವಿಷಕ್ಕೆ.

ಚಂ|| ಸವಿನಯದಿಂದೆ ಮಂತ್ರಮನಿದಂ ಪಠಿಸಿರ್ದು ತರಕ್ಷುದಷ್ಟನಂ |
[1]ವಿವರಿಸಿ ನೋಡಿ ತನ್ನ ಖನಖಕ್ಷತಮಂ [2]ನವಸಿಂಧುವಾರದೊ ||
ಪ್ಪುವ[3]ದಳದಿಂದವೊಂದಧಿಕಮಾಗಿಹ ವಿಂಶತಿಸೂಳ್ಪಿರಂ ಕರಂ |
ತವಕದೊಳಂದು ಮಂತ್ರಿಸಿ ಬಱಿಕ್ಕಿಡೆ ಮರ್ದನ[4]ದಿಂ ಶುಭಾವಹಂ || ೫ ||

ಉ|| ಹಾಲೆಯ [5]ಪರ್ಣಮಂ ಮೆಱಸುಮಂ ಬೆರಸಿಕ್ಕಿ ದಿನತ್ರಯಂಬರಂ |
ಮೇಲೆ ಬಱಿಕ್ಕದಂ ತುಱಿದು ಪೂಸು[6]ವುದಾ ಮೊಱಗೆಂಬ ಭೂಜದೊ ||
ಳ್ಮೂಲಮನಂತು ಮೂಱುದಿವಸಂ ಬಿಡದಯ್ದೆ ಲೆನಾಗನೆಂಬು [7]ದುಂ |
ಟಾಲತೆಯೊಳ್ದಳಂಗಳುಮನಿಕ್ಕುವುದಂತಿರೆ ತದ್ವಿಷಾಪಹಂ || ೬ ||

ಮಾಲಿನಿ|| ಕುರುಟಿಗೆ ವರತುತ್ಥಂ ದಾರ್ವಿ ಸರ್ಪಾಕ್ಷಿಮೂಲಂ |
ಬೆರಸಿದ ಮಧುಕಾಖ್ಯಂ ರೌಹಿಣೀಯಂ ಪಟೋಲಂ ||
ಜರಠ[8]ಘೃತದೊಳಟ್ಟೀ ಯೆಲ್ಲಮಂ ಪೂಸಿ ಮತ್ತಂ |
ಕರಿಯನಿಡೆ ಬಱಿಕ್ಕಂ ವ್ಯಾಘ್ರದಷ್ಟಂಗೆ ಸೌಖ್ಯಂ || ೭ ||

ಮ|| *ಮರಿಚಂ ದೊಗ್ಗಳೆ ಮಾಲತೀದಳಚಲದ್ವೃಂತಾಕಪತ್ರಂ ಲಸ |
ತ್ತ್ರುರುಚಿಂಚಾತ್ವಗನಿಂದ್ಯ[9]ಕಾಜೆನಿಪಿವಂ ಕೂಡಿರ್ದು ದುಸ್ಸ್ಪರ್ಶಮಂ ||
[10]ಬೆರಸಲ್ ಟಂಕಣವೊಪ್ಪೆ ಮಾಡಿ ಕರಿಯಂ ತಂದಿಕ್ಕಲಾ ಪುಣ್ಣಮಾ |
ಸುರದಿಂದಂ ಪುಲಿ ಕರ್ಚಿದಂಗೆ ಹಿತಮಾ ವಿಶ್ವಂಭರಾಚಕ್ರದೊಳ್ || ೮ ||

ಕಂ|| ಎರಡರಿಸಿನಮಂ [11]ಜಾಜುನು |
ನರೆದು ಚಮೂರೋಗ್ರದಂತ [12]ನಖಜಕ್ಷತದೊಳ್ ||
ಪರಿಕಿಸಿಡೆ ಮಾಣ್ಗುಮದು ಸ |
[13]ತ್ಪುರುಷಮನೋಗೇಹರತ್ನ ದೀಪವಿಲಾಸಾ || ೯ ||

ಹತ್ತರಿಕೆಯ ರಸವೊಂದಂ |
ಮತ್ತಂ ಮಧುಯುಕ್ತಮಾಗಿ(ಗೆ) ಪೂಸಲೊಡಂ ಪ |
ಲ್ಗೊತ್ತಿದ [14]ಪುಣ್ಗಳ್ ನಖದಿಂ |
ದೊತ್ತಿದ ಪುಣ್ಣೆಯ್ದೆಮಾಣ್ಗುಮಿಂತಿದು ಸಿದ್ಧಂ || ೧೦ ||

1. ತಿನರಿಸಿನೋಡಿ (ಗ) 2. ನನಸಿಂಧು (ಗ) 3. ತಳಿಸಿಂದ (ಕ) 4. ನದಂ (ಗ) 5. ಪಂಣಮಂ (ಕ) 6. ಪೂಸುವುವೊಱಗೆಂಬ(ಗ) 7. ದುಂಡಾಲತೆ (ಗ) ದಂದಾಲತೆಱಳ್ದಳಂ (ಕ) 8. ಘೃತದಗಟ್ಟೆ (ಕ) ಜರದಘೃತದೊಳಟ್ಟಂತೆಲ್ಲ (ಗ) 9. ಕಾಜೆನಿಪಿವಂ (ಘ) 10. ಬೆರಸಿರ್ದಂ ಕಣ—ಕರ್ರಿಯಂ (ಘ) ಬೆರಸಿಬ್ದಂಕಣ (ಕ) 11. ಜೂಜುಮ (ಗ) 12. ನಖದಕ್ಷತ(ಕ) ನಖದಕ್ಷತ (ಗ) 13. ತ್ಪುರುಷಮವೊಗೆಹ (ಕ) 14. ಪುಣ್ಗಳು ನಖದಕ್ಷತದೊಳ್ ಪರಿಕಿಸೆಡೆಮೊಣ್ದು ಮಿಂತಿದೆಸಿದ್ಧಂ (ಗ)

* (ಕ) ಪ್ರತಿಯಲ್ಲಿಲ್ಲ



ಉ|| [1]ನಿಂಬದ ಪರ್ಣಮುಂ ಸೊಗದೆಯುಂಗುರು ಹಾಲೆಯ [2]ಸೊಪ್ಪಿದಲ್ತೆ ಲೇ |
ಸಿಂ[3]ಬಿನಮಿರ್ದ ಬಂಜೆ ಮಡುವಾಗಲುವೊಪ್ಪುವ [4]ಭದ್ರಮುಸ್ತೆಯಿಂ ||
ತುಂ ಬಿಳಿಯಂದದೊಳ್ಗಣಜಿಲೆಂಬಿವನೊಪ್ಪಿರೆ ಕೂಡಿ ಪೂಸೆ ತಾಂ |
ನಿಂಬೆಯ [5]ಪಣ್ಗೊಳಿರ್ಪ ಪುಳಿಯಿಂ ಪುಲಿ ಕೊಂಡೊಡೆ ಮಾಣ್ಗುಮಾಕ್ಷಣಂ || ೧೧ ||

ಕಂ|| ಕರಡಿ ಪುಲಿ ಬೆಕ್ಕು ನಾಯ್ ಸೂ |
ಕರ ನಕುಲ ಹಯಾದಿ ನಖಮುಖ[6]ಕ್ಷತದೆಡೆಯೊಳ್ ||
ಮರದರಿಸಿನಮಂ ಪೂಸಲ್ |
ಪರಿಹರಿಕುಂ ತದ್ವಿಷಂ [7]ವಿವರ್ಜಿತಕುಮುತಾ || ೧೨ ||

ಕ್ರೂರಮೃಗಂಗಳ [8]ವಿಷಮಂ |
ವಾರಿಸುಗುಂ ಬಿಳಿಯಗಣಜಿಲೊಂದಱ ಬೇರಂ ||
[9]ಚಾರಿಸಿ ಪೂಸಿದೊಡೆಂದೀ |
ಧಾರಿಣಿಗಱಿವಂತೆ ಪೇಳ್ದನುಭಯ [10]ಕವೀಶಂ || ೧೩ ||

ಚಂ|| *ರಜನಿ ಸುದಾರ್ವಿ ಬಾವುಜಿಗೆ ಬೇವಿನ ಬಿತ್ತು ರಸಾಂಜನಂ ತಿಲ |
ವ್ರಜ ತುಳಸೀ ಗುಡೂಚಿ ಯಿವಱಿಳ್ಬೆರಸೊಪ್ಪೆ ಕಱುಂಕೆ ಸರ್ಷಪಂ ||
ನಿಜದೆ ಸಮಾನಮಾಗರೆದು ಲೇಪಿಸೆ ಸರ್ಪಮೃಗಾದಿಯಿಂದಮಂ |
ಡಜಕುಲದಿಂದಮುಗ್ಗಲಿಸಿದುಗ್ರವಿಷಂ ಪರೆಗುಂ ಬುಧೋತ್ತಮಾ || ೧೪ ||

*ಚಂ|| ಹರಿ ಕರಿ [11]ಬಭ್ರು ಬೆಕ್ಕು ಮುಸು ಮಾನವ ನಾಖು ವೃಕಂ ವರಾಹ ಕು |
ಕ್ಕುರ ಪುಲಿ ಮುಖ್ಯಮಾ(ಪಾ)ದ ಚರಸತ್ವದ ದಂತನಖಾದಿ ನಟ್ಟು ನಿ ||
ತ್ತರಿಸಲಶಕ್ಯಮೆಂದೆನಿಪ ಪುಣ್ಗರೆದಿಕ್ಕುವು[12]ದಿತ್ಥಿಯಿಂದೆ ಪಾ |
ಲ್ವೆರಸಿದ ಪುತ್ರಜೀವಿಯನೆ ಪಾನಮನೀಯೆ ವಿಷಾಪ[13]ಹಾರಕಂ || ೧೫ ||

ಚಂ|| ಕರಿವೊದ[14]ಲಾಗಿಱುಂಪೆ ಕಡೆಯಾದ ಚರಾಂಗವಿಷಂಗಳೆಲ್ಲಮಂ |
ಪರಿಹರಿಸಲ್ಕೆ ಬಂಜೆಮಡುವಾಗಲ[15]ನಿಂಬಿನೊಳಂಬುವಿಂದದಂ ||
[16]ಬೆರಸಿರದೊಪ್ಪವಂಜನದೊಳಂತೆ ವಿಲೇಪನ [17]ನಸ್ಯಪಾನದೊಳ್ |
ಪರಿಕಿಸಲೊಂದೆ ಸಾಲದೆ ವಿದಗ್ಧಶಿರೋಮಣಿ ಮಂಗನುಕ್ತಿಯಿಂ || ೧೬ ||

1. ನಿಂಬಿಯ (ಗ) 2. ಸೊಪ್ಪಡಲ್ತೆ (ಕ) 3. ಬಿನಮುರ್ದ್ದಬಂಜೆ (ಗ) 4. ರುದ್ರಮುಷ್ಟಿ (ಗ)(ಕ) ಭದ್ರಮುಷ್ಟಿ (ಖ) 5. ಪಣ್ಗನೊಳ್ಪುಳಿಯೊಳಂ ಪುಲಿಕೊಂಡೊಡೆ ಮಾಣ್ಗುಮಾಕ್ಷಣಂ (ಘ) (ಕ) ಪಣ್ಗೊಳಿರ್ಪ ಪುಳಿಯಿಂ (ಕ) 6. ಕ್ಷತದೊಳ್ ಮಾಮರದರಿಸಿನ (ಗ) 7. ವಿವರ್ಜಿತಕುಮುದಾ (ಗ) 8. ವಿಷಮನಿವಾರಿ (ಕ) (ಗ) 9. ಚಾರಿಸಿ ಪೂಸಲೊಡೆಂದೀ (ಗ) ಚಾರಿಸಿ ಪೂಸಿದೊಡೊಂದಿದ (ಕ) 10. ಕವೀಂದ್ರಂ (ಗ) ಕನೀಶಂ (ಗ) (ಈ ಪಾಠದಿಂದ ಲೇಖಕಪ್ರಮಾದದ ಪರಾಕಾಷ್ಠೆಯು ವ್ಯಕ್ತವಾಗುವುದು.) 11. ಬಚೆಬೆಕ್ಕುಕುಸುಮಾನವಿನಾಖು (ಕ) ಮಾನಸುನಾಯಿವೃಕಂ (ಖ) 12. ದತ್ಥಿಯಿಂದೆ (ಕ) 13. ಹಾರಣಂ (ಕ) ಷಾಪಹಂ (ಘ) 14. ಲಾಗಿರುಪೆ—ಯಾದಚರಾಚರಂಗಳಂಪರಿ (ಗ) ಯಾದ ಸಮಸ್ತವಿಷಂಗಳೆಲ್ಲಮಂ (ಕ) ಲಾಗಿಱಂಪಿಡಿಯಾದ (ಖ) 15. ನಿಂಬೆಯೊಳಂಬುವಿಂ. 16. ಬೆರಸರೆದೊ (ಕ) 17. ಪಾನನಸ್ಯದೊಳ್.

* (ಗ) ಪ್ರತಿಯಲ್ಲಿಲ್ಲ.

*ಕಂ|| ಪಾಲುಂ ಶರ್ಕರೆಯುಂ ವರ |
[1]ಶಾಲೀಯಾನ್ನಂಗಳಿಂತಿವೇ ಪಥ್ಯಕರಂ ||
ಸಾಲದೆ ಕೃತ್ರಿಮವಿಷನಿ |
ರ್ಮೂಲನಮಂ ಮಾಳ್ಕುಮೆಂದಪಂ [2]ಬುಧಮಂಗಂ || ೨೯ ||

ಬೆರಸುವುದು ಪುತ್ರಜೀವಿಯ[3] |
ತಿರುಳೊಂದಂ ನಿಷ್ಕಮಾತ್ರಮಂ ಪಾಲೊಳದಂ ||
ಭರದಿಂದೀಂಟಿಸೆ ನಾನಾ |
[4]ಗರಳಂಗಳನಱುಗುಮೆಂದನುಭಯಕವೀಶಂ || ೩೦ ||

## ಕೆಯ್ಮಸಕಕ್ಕೆ.

ಕಂ|| [5]ಪಂಬಲಿಸದೆ ಪಲವಂ ತಾಂ |
ನಿಂಬದಳಂ ವೃಷಭಮಾಪಟೋಲಂ ಪ್ರತ್ಯೇ ||
ಕಂ ಬೆರ[6]ಸೊಪ್ಪಲ್ ಮಾಗ(ಲ)ಧ |
ದಂಬುವಿನಿಂದಷ್ಟಗುಣಮುದರ್ಕೆಂಬಿವಱಿಂ || ೩೧ ||

ಮಱುಗಿಸಿ [7]ಪದಾವಶೇಷದೊ |
[8]ಳಱೆವುದು ಗೋಘೃತಮನದಱ ಸರಿಯಂ ಮತ್ತಂ ||
[9]ಮೆಱೆವಣಿಲೆಯ ಚೂರ್ಣಮನಿ |
ಟ್ಟುಱುವ ತದರ್ಧಮನೆ ಕಾಸುವುದು ಘೃತಮುಱಿಯಲ್ || ೩೨ ||

ಅದು ಕಳೆಗುಂ ಪಾತಕರಿ |
ಕ್ಕಿದ ವಿಷಮಂ [10]ತುಪ್ಪಮಂತದಂ ಭಕ್ಷಿಸೆ ಸಾ ||
ಲದೆ ಪಲವಱೊಳೇಂ[11] ಫಲಮೇಂ |
ದು(ಸು)ಧೀವರಂ ಪೇೞ್ದನಲ್ತೆ ಮಂಗಕವೀಶಂ || ೩೩ ||

ಮ|| ಸಮಮಾಗಲ್ ಗೃಹಧೂಮದೊಳ್ ಜಲಯುತಂ [12]ತತ್ತಂಡುಲೀಮೂಲಮಂ |
ಕ್ರಮದಿಂದಿಟ್ಟರೆ ತಚ್ಚತುರ್ಗುಣ [13]ಘೃತಕ್ಷೀರಾಜ್ಯದಿಂ ಕಾಸೆ ತ |
ತ್ಪ್ರಮಿತಂ [14]ತುಪ್ಪದನಿತ್ತದಾಗಲದನೀಂಟಲ್ ಕ್ರೂರನಾರೀಜನಂ |
[15]ಭ್ರಮೆ(ಯಿ)ಗೆಂದಿಕ್ಕಿದ (ನೇಕ)ಭೇದದ ವಿಷಂ ತೀರ್ಗುಂ[16]ಬುಧಾಳಿಪ್ರಿಯಾ || ೩೪ ||

1. ಶಾಲಿಯನ್ನಂಗಳಿವೆ ಪಥ್ಯತರಂ (ಕ) 2. ಮಂಗಬುಧಂ (ಕ) ಮಾಳ್ಕೆಂದ ಮಂಗಸುಸಂಗಂ (ಗ) ಮೆಂದರಪಗತಕಲುಷಃ (ಘ) 3. ಜೀವಿಯ ಮಱೆವಣಿಲೆಯಲೆ (ಕ) (ಗ್ರಂಥಪಾತ) 4. ಗರಳವನಱುಗುಮೆಂದ (ಕ) 5. ಸಂಚಳಿಸದೆ (ಕ) 6. ಸೊಪ್ಪಲ ವಂಗಲದಂಬುಲಿನಿಂದಷ್ಟಗುಣ ಮದಕೆಂಬುದರಿಂ (ಗ) 7. ಸದಾವ (ಕ) 8. ಳೆರೆವುದು (ಗ) 9. ವಣೆಯೆಲೆಯ ಚೂರ್ಣವನಿಟ್ಟವಱತದರ್ಧಮನೆ ಕಾಸುವುದು (ಕ) ಚೂರ್ಣವನಿಟ್ಟುರುವ ತದರ್ಧ (ಗ) 10. ಮಂ ಭಕ್ಷಿಸೆ ಸಾಲದೆ (ಕ) ಮಂಬಿಡದೆಯುಂ ತೆದು ಭಕ್ಷಿಸೆ (ಗ) 11. ಳಂಫಲವೆಂದಿದಮೊಂದಂ ಪೇೞ್ದ (ಗ) ಮೆಂದುದಿ ದೇವರಂಪೇೞ್ದ (ಕ) 12. ಸತ್ತಂಡುಲೀ (ಖ) 13. ಘ್ರುತಂ ಕ್ಷೀರಾ (ಕ) ಹೃತಕ್ಷೀರಾ (ಘ) 14. ತುಪ್ಪಮುದಾಗಲಿತ್ತೊಡದನೀನೀಂ, (ಕ) ತುಪ್ಪದಿನಿಕ್ಕಡಾಗಲದನೀಂ(ಗ) 15. ಭ್ರಮೆಯಿಂದಿ(ಕ) 16. ಬುಧಾಳಾಪಪ್ರಿಯಾ(ಕ)
* (ಘ) ಪ್ರತಿಯಲ್ಲಿ ಹಿಂದುಮುಂದಾಗಿದೆ.



ಕಂ|| *ಏಲಾತ್ರ್ಯೂಷಣ ಜೀರಕ |
ತಾಲೀಸದಳಾಹ್ವಮೆಂಬಿವಂ ಚೂರ್ಣಿಸಿ ಸ ||
ಲ್ಲೀಲೆಯೊಳಿಮ್ಮಡಿ ಸಿತದೆ ನಿ |
ರಾಲಸ್ಯಂ ಮೆಲುವುದಖಿಳವಿಷಹರಮಕ್ಕುಂ || ೩೫ ||

ಇನವಾರದಂದು ತಪ್ಪದು |
ಜಿನಿಜಿನಿಯಂ [1]ಹಸ್ತಿಕರ್ಣಿಯಂ ತೊಳಸುಗೆ [2]ನೀಂ ಪಿ ||
ಟ್ಟನೊಳಿಡಿದು ತುಪ್ಪದಿಂದಂ |
ತಿನೆ ಕೃತ್ರಿಮವಿಷಮನಂತದಱುಗುಮವಶ್ಯಂ || ೩೬ ||

ಉ|| ಚುಂಚಿ(ಚ)ನ(ಲು) ಕಟ್ಟವತ್ತಿಗೆಯ ಬಿತ್ತುಗಳಂ ಪುಡಿಮಾಡಿ ಮತ್ತದಂ |
[3]ಸಂಚಿತಮಪ್ಪವೋಲ್ ನವಣೆಯಕ್ಕಿಯೊಳೆಮ್ಮೆಯ ತಕ್ರದಿಂದದಂ ||
ನೀಂ ಚರಿತಾರ್ಥಮಂತಡುವುದಂಬಲಿಯಿಂ ಬೆರಸುಂಬುದಾದಿಕಂ |
[4]ಚಂಚದೆನಿಪ್ಪ ತುಪ್ಪಮನೆ [5]ವಾಂತಿಕರಂ ಹಿತಕೃದ್ಗರಾಪಹಂ || ೩೭ ||

ಕಂ|| *ಅಮೃತಲತೆ ಮಾದಳ[6]ಫಳಂ |
ಕಮನೀಯಮೆನಿಪ್ಪ ಶುಂಠಿ ಸೈಂಧವ[7]ಸಹಿತಂ ||
ಅಮರ್ದಿರೆ ಭಕ್ಷಿಸೆಯುಂ ಕೃ |
ತ್ರಿಮವಿಷಹರಮಕ್ಕುಮೆಂದನಮಳಚರಿತ್ರಂ || ೩೮ ||

*ಮಡುವಾಗಲ ಬೇರಿನೊಳರೆ |
ಕೊಡ [8]ನೀರಿನೊಳಗರೆದು ವಟಕಂಗಳನನುವಾ ||
ದೊಡೆ ತಿನಲಾಗೊಂದೊಂದಂ |
ತಡೆಯದೆ [9]ಕೆಯ್ಮಸಕ ಕಿಡುಗು ದಿವಸಕ್ರಮದಿಂ || ೩೯ ||

ಘೃತಮಂ ಲೊಕ್ಕಿಯ [10]ರಸಸಂ |
ಯುತಮೆನೆ ಸೇವಿಸಲದಱುಗುಮಹಿತಸ್ತ್ರೀನಿ ||
ರ್ಮಿತಮೆನಿಸಿದ ಕೆಯ್ಮಸಕಂ |
ನುತಮುಗುಳಿಯ [11]ಧೀಶಮಂಗರಾಜನ ಮತದಿಂ || ೪೦ ||

ಶಂಕಿಸದೆ ಕುಡುವುದೊಪ್ಪದೊ |
[12]ಳಂಕೋಲೆಯ ಮೊಳ(ಱ)ಗಿನೆಸೆವ ಕೋರಕಮಂ ತಾಂ ||
[13]ಬಿಂಕದೊಳಬಲಾಕೃತಕಾ |
ತಂಕಂ ಕೆಯ್ಮಸಕಮಱುಗುಮೆಂಬರಭಿಜ್ಞರ್ || ೪೧ ||

1. ಹಸಿಕಂಣಿಕೆಯಂ (ಕ) 2. ಟ್ಟನೊಡಿದುದು (ಕ) 3. ಚಿತ್ರಮಿಪ್ಪವೊಲ್ (ಕ) 4. ಚುಚದಿನಿಪ್ಪ (ಕ) 5. ತಿಕರಾಹಿತ ಕೃದ್ಗರಾಪಹಂ (ಘ) ಕೃದ್ಗತಾಪಹಂ (ಕ) ಕೃದ್ಗರಳಾಪಹಂ (ಗ) 6. ಫುಳಿ (ಕ) ಫುಳ (ಖ) 7. ಸೈಂಧವಮಿತ್ಯೇತದಮರ್ದಿರೆ (ಕ) 8. ನೀರೊಳಕ್ಷಮಾತ್ರವಟಕಂಗಳನಾದೊಡೆ (ಕ) 9. ಕೆಯ್ಮಸಕಮಱುಗು (ಘ) 10. ರಸಯುತಮುತಂ (ಕ) 11. ಯಧಿಪ (ಗ) 12. ಳಂಕೊಲೆಯಂ (ಘ) 13. ಬಿಂಕದಲಲನಾ (ಗ) (ಘ)
* (ಗ) ಪ್ರತಿಯಲ್ಲಿಲ್ಲ.

ಕಂ|| ತುಱುವೆಯ [1]ಕಾಯ್ಗಳುಮಂ ಮಂ |
ಗುಱು[2]ವಳ್ಳಿಯನಿಡಿದ ಚೂರ್ಣಮಂ ಶರ್ಕರೆಯಿಂ ||
ನೆಱೆ[3] ತಿಂದು ಬಿಸಿಯನೀರಂ |
[3]ಕಿಱಿದುಗೊಳಲ್ಕಱಿಯದುೞಿಗುಮೇ ಕೆಯ್ಮಸಕಂ || ೪೨ ||

ವ|| ಇದಂ ಅಯ್ದುದಿನಂ ಕೊಂಬುದು[4]

ಕಂ|| *ವಿನುತಕುಬೇರಾಕ್ಷಿಯ ದಳ |
ಮನೆ ಪಿಂಡಿದ ರಸದೊಳಿಟ್ಟು ಕಡಲೆಗಳಂ(ತಾಂ) ||
ನೆನೆಯಿಕ್ಕಿ ಪುರಿದು ಮೆಲೆ ದಶ |
ದಿನದೊಳೆ ಕೆಯ್ಮಸಕ[5]ಮೆಯ್ದೆ ಕಿಡುಗುಮಮೋಘಂ || ೪೩ ||

*ಗರುಗದ ರಸ[6]ಮಮೃತಲತೋ |
ತ್ಕರರಸಮೊಪ್ಪುವ ಘೃತಂ ಸಮಾನದೊಳಿರೆ ಶ ||
ರ್ಕರೆವೆರಸಿ ಕುಡಿಯಲ್ಕಾ ಸ್ತ್ರೀ |
[7]ಚರಿತದ ಕೆಯ್ಮಸಕಮುೞಿಗುಮೆಂಬುದಮೋಘಂ ||೪೪ ||

ಎಡೆಯಕ್ಕರಂ|| ಉತ್ತರಣೆಯೆಸೆವ ಬಿತ್ತಂ ಕಱಿಯೊಳೀಂಟಲ್ |
ಮತ್ತೆ ಪೆಱತೇಂ ವಮನವಕ್ಕುಮದು†ಬಱಿಯಂ ||
ಪತ್ತುದಿನ [8]ಮಂಗುರುವನಜದುಗ್ಧದಿಂದಂ |
ಯೆತ್ತಿ ಕುಡಿಸಲ್ ಪರೆಗುಮಲ್ತೆ ಕೆಯ್ಮಸಕಂ || ೪೫ ||

ಕಂ|| *[9]ಹಿತಕೃನ್ಮಯೂರಶಿಖೆಯಂ |
ಕತಕದ ಬಿತ್ತುಗಳನೀಂಟುಗಾಡಿನ ಪಾಲಿಂ ||
ತಿಳಿಯೊಳ್ ? [10]ಮೂಕೊಱತಿಯನೆ |
ಚ್ಚತಿಶಯದಿಂ ಕಣ್ಗೆ ಕೃತಕ [11]ವಿಷಮದು ಕಿಡುಗುಂ || ೪೬ ||

*[12]ಬಾದೇಂ ಮಯೂರಶಿಖೆಯಂ |
ಪಾದರಿ(ಯೊಳ್) ಯಂಜ(ಪ)ನಿಸಿದುತ್ತರಾಸೆಯ [13]ಬೇರಂ ||
ಭೇದಿಸಿ ಪಾಲಿಂ[14]ದೀಂಟ |
ಲ್ಕಾದರದಿಂ ಕೃತ್ರಿಮೋಗ್ರ ವಿಷಮಿರದೞಿಗುಂ || ೪೭ ||

---

1. ಯಿಗಳಂಮಂ (ಕ) 2. ವಳ್ಳಿಯ ಗಿಡದ (ಘ) ವಳ್ಳಿಯನಿಡಿ ಚೂರ್ಣ (ಗ) 3. ಕಿಱಿದು ಕೊಳಲ್ಕಯ್ದುದಿನಮುದೞಿಗುಮವಶ್ಯಂ (ಘ) 4. ಕೊಂಬುದುಪಾಲೋಗರಪಥ್ಯ. 5. ಕಮಿರದೆ (ಕ) 6. ಮಮೃತೋತ್ಕರ ಸಿರಮೊಪ್ಪುವಮಾನದೊಳಿರೆ(ಕ) 7. ಚರಿತಂ (ಕ) 8. ಮಂಗುರ ಮನುಜದುಗ್ಧದಿಂ (ಕ) 9. ಹೃತಕೃ (ಘ) 10. ಯೊಳ್ಕೊಱತಿಯ (ಕ) 11. ವಿಷಮಿರದೞಿಗುಂ (ಘ) 12. ಬಾದಿಂ (ಕ) 13. ಬೇರೊಳ್ (ಘ) 14. ದರೆದೀಂಟಾದರದಿಂ (ಕ)

* (ಗ) (ಘ) ಪ್ರತಿಗಳಲ್ಲಿಲ್ಲ.

† ಲಲಿತವೃತ್ತ (ಘ) ೨ ನೆಯಪಾದದಲ್ಲಿ (ಎಡೆಯಕ್ಕರದಲಕ್ಷಣ ವಿರುವುದು)



ಕಂ|| [1]ಅರೆದೀಂಟು [2]ಕೆಂಪಿನಗಸೆಯ |
ವರಮೂಲಮನೆಸೆವ ದುಗ್ಧದಿಂ ಪಾತಕಿಯರ್ ||
ಬೆರಸಿಕ್ಕಿದ ವಿಷಮುೞಿಗುಂ |
ನಿರುಪಮಗುಣಿ ಮಂಗರಾಜನನುಮತದಿಂದಂ || ೪೮ ||

[3]ವಂಚಿಸಲೇಂ ಶ್ವೇತಾರ್ಕನ |
ಪಂಚಾಂಗಮನೆಸೆವ ತುಪ್ಪದಿಂ ಶರ್ಕರೆಯಿಂ ||
[4]ಸಂಚಿಸದೆ ಕುಡಿಸೆ ಕಿಡುಗುಂ |
[5]ಪಂಚತ್ವಮನೀವ ಕುಲಟೆಯರ ಕೆಯ್ಮಸಕಂ || ೪೯ ||

ಪೆರ್ಗುರುಟಿಗೆಗಳ ಬೇರಂ |
ತಗ್ಗಳದಿಂ ಬೆಳೆದ ಬಿಳಿಯ ಗುಳ್ಳದ ಬೇರಂ ||
[6]ಕೊಗ್ಗ(ಗ್ಗ)ಲಳೆಯಂಬಲಿಯನ |
ಟ್ಟಿಗ್ಗಿಲ್ಲದುಣಲ್ಕೆ ಕೃತಕವಿಷಮಿರದೞಿಗುಂ || ೫೦ ||

[7]ಅಂಕೊಲೆಯ ಮೂಲಮಂ ನಿ |
ಶ್ಶಂಕತೆಯಿಂ [8]ಕುಡಿವುದೊಪ್ಪುವಾಡಿನ ಪಾಲಿಂ ||
ಭೋಂಕನೆ [9]ವಾಂತಿಯದಕ್ಕುಂ |
ಸೋಂಕಿದರಂ [10]ತಿನ್ಬ ಖಳೆ(ಳ)ಯ(ರ) ಕೃತ್ರಿಮಮುೞಿಗುಂ || ೫೧ ||

ಭೌಮದಿನದಲ್ಲಿ [11]ನಯದಿಂ |
ಮೌನದೊಳಂ [13]ತಿಂಗೆ ಕಿಱಿಯಕಡಸಿಗೆ ಯುದಱಿರೊಳ್ ||
ಮಾನಿತ [13]ಪರ್ಣಮನಾಗಳ್ |
ಮಾನಿನಿಯರ ಕುಬುದ್ಧಿ[14]ಜನಿತವಿಷಮಿರದೞಿಗುಂ || ೫೨ ||

ಸಂಚಿಸಿ [15]ತೊಱೆದವನಂಗಳ |
ಪಂಚಾಂಗಮನರೆದು ಕುಡಿಯೆಯುಂ ಮೇಣ್ ಜಂಭೀ ||
ರಾಂಚಿತಬೀಜಂ ಪುಳಿಸಹಿ[16] |
ತಂ ಚರಿಸಲ್ [17]ಫ(ಪ)ಲಮ(ವ)ನುೞಿಗುಮೇ ಕೆಯ್ಮಸಕಂ || ೫೩ ||

---

1. ದೀಂಟಿ (ಗ) 2. ಕೆಲಬಿನಗಸೆ (ಕ) ಕೆಂಪಿನ ಗರಿಕೆಯ (ಘ) 3. ಲಂಚಿತದ ಶ್ವೇತಾ (ಕ) ಅಂಚಿ ಡದಶ್ವೇತಾ (ಗ) 4. ವಂಚಿಸದೆ (ಗ) (ಕ) ಕುಡಲ್ (ಕ) ಕುಡಿಸಲ್ (ಖ) ಕುಡಲ್ಕಳಿಗುಂ (ಘ) 5. ಕೊಳಲ್ಕೆಡುಗುಂ ಸಂಚಿತ್ವವ (ಗ) 6. ವೊಗ್ಗಲಳೆಯಂಬಿಲ (ಘ) ತೊಗ್ಗಳಲೆಯಂಬಲಿಯ ನಟ್ಟಿಕ್ಕಿದು ಣಕ್ಕೆ ಕೃತಂ (ಗ) ಲಳೆಯಂ ನಟ್ಟಗಿದುಣಲ್ಕೆ (ಕ) 7. ಅಂಕೋಲಮೂಲಮಂ (ಗ) 8. ಕುಡಿವತೊಪ್ಪು ವಾಡಿನ (ಕ) (ಘ) 9. ವಮನಮುದ (ಘ) 10. ತಿನ್ಬಬಳೆಯ (ಕ) (ಘ) 11. ತರ್ಪುದು (ಘ) 12. ತಾಗೆ (ಗ) 13. ಪರ್ಣಂಗಳುಮಂ (ಘ) 14. ಯರಬುದ್ಧಿವಿನುತ (ಗ) 15. ತೊಡದವನಂ (ಕ) 16. ಸಹಿತಂ ಕಂಚರಿಸಲ್ಫಲಮನೀಗುಮೇ (ಗ) ಪಲವುಮರ್ದ ನಱಿಗುಮವಶ್ಯಂ (ಘ) 17. ಪಲವು ಮರ್ದನೞಿಗು ಮವಶ್ಯಂ (ಘ)

ಕಂ|| ಮೂಕೊಱತಿಯ ರಸವೊಂದಂ |
ಪ್ರಾಕೃತಶರ್ಕರೆಯೊಳಿಕ್ಕಿ ಕುಡಿಸಲ್ ಕಳೆಗುಂ ||
ಶಾಕಿನಿಯರ್ ಬೆರಸಿಕ್ಕಿ ವ[1] |
ಶೀಕರಿಸಿದ ಮರ್ದುಗಳು[2]ಮದುಂ ಪ್ರಶಮಿಸುಗುಂ || ೫೪ ||

[3]ಗುಳ್ಳದ ಮರವಸಲಂಗುರ |
ದೊಳ್ಳಿಯ ಬೇರ್ಗ್ಗಳನೆ ತಂದು [4]ಬೆನ್ನೀರಿಂದಂ ||
ಉಳ್ಳುದನೆ ಕುಡಿಯಲದಱಿಂ |
ಕಳ್ಳಿಯರಿಂ ಪುಟ್ಟದಿಕ್ಕುಗುತ್ತಂ ಕಿಡುಗುಂ || ೫೫ ||

ಉಲಿಗನ ಸೊಪ್ಪಿನ [5]ರಸದೊಳ್ |
ತಿಲತೈಲಮನೊಂದುಗೂಡಿ ಕುಡಿಸ[6]ಲ್ಕಿಡುಗುಂ ||
ಖಳಮಾಯಾವಿಗಳೆನಿಸಿದ |
ಲಳನೆಯರಿಕ್ಕಿದ [7]ಮಹಾಮಯಂ ಗುಣನಿಲಯಾ || ೫೬ ||

[8]ಮೆಲುವುದು ಹುಳ್ಳಿಯ ವಿಲಸ |
ದ್ದಲಮಂ ಜಂಭೀರಫಲರಸಂಗೂಡಿ [9]ಕೊಳಲ್ ||
[ಕುಲಟೆಯ[10]ರಾ ಪಾತಕಿಯರ್ |
ಮೆಲಿಸಿದ ಭೋಜ್ಯದಮದಂಗಳದಱಿಂ ಕಿಡುಗುಂ || ೫೭ ||

ಘನನಾದಿ ಪುನರ್ನವಿ ಯುಲಿ |
ಗನ ಬೇರ್ಗಳ ನೆಲೆಗಳಂ[11]ಸಜಂಭೀರರಸಂ ||]
ತಿನಲದಱಿಂ ಪುಂಶ್ಚಳಿಯರ್ |
[12]ಕುನಯಗಳಿಂ ಸಮೆದ ಕೃತ್ರಿಮಂಗಳ್ ಕಿಡುಗುಂ || ೫೮ ||

ರಾಗದೊಳಂ ಬೆರಸುಗೆ ಗಿಣಿ |
ಮೂಗನ ಗೆಡ್ಡೆಯನೆ ಬೆಣ್ಣೆಯೊಳ್ ತಿಂಬುದದಂ ||
ಮೇಗಱಿಯ [13]ದಬಳೆಯರ್ ಗತ |
ರಾಗಿಗಳಾಗಿಸಿದ ಕೃತ್ರಿಮಂಗಳ್ ಕಿಡುಗುಂ || ೫೯ ||

1. ಬೆರಸಿಕ್ಕಿದ ಸ್ವೀಕರಿಸಿದ (ಗ) (ಕ) 2. ಮದಂ. 3. ಗುಳ್ಳದ ಮದವಸಲೆ (ಕ) ಗುಂಪಸಲೆ ವೊಳಿಯಂಗುರ | ಪೆಂಪಿನಬೇರ್ಗಳನೆತಂದು ಬೆನ್ನೀರಿಂದಂ || ಕಂಪಿಸದೀಂಟಲು ಮದಱಿಂ ವೊಂಪಿಸುವುದು ಬೇಗಕಳ್ಳಿಯರ್ಕೆಯ್ಮಸಕಂ|| (ಗ) (ಈಕಂದವು ಹೇಗೆ ಮಾರ್ಪಟ್ಟಿರುವುದೆಂಬುದು ಗಮನಿಸತಕ್ಕುದು.) 4. ಜಲನಿಂದಂ (ಕ) 5. ರಸದೊಳಂ (ಕ) 6. ಲ್ಕಳೆಗುಂ (ಘ) 7. ಮಹಾವಿಷಂ (ಘ) 8. ಮೆಲುವುಬೆಲಹುರಿಯ (ಗ) 9. ಗೂಡಿಯುದಂ (ಘ) ಖಳರ್ (ಕ) ಖಳಲ್ (ಖ) 10. ಯರಿಕ್ಕಿದರತಿಪಾತಕಿ (ಕ) ಕುಲಟೆಯರಿಕ್ಕಿದ ವಿಷಮಂ | ಕಳೆಗುಂ ವರಮಂಗರಾಜ ನನುಮತದಿಂದಂ (ಘ) (ಕ) 11. ಸಜ್ಜಂಭೀರ (ಗ) 12. ಕುನಾಯಿಗ (ಗ) 13. ಮೇಗಱಿದ ಖಳೆಯುರ್ಗತರಾಗಿಸಿದ (ಗ)



‡ ಉ|| ಮೆಲ್ಲಿದ[1]ರಂತೆ ಬಂದು ಕರೆಯಲ್ ಖಳರುಣ್ಬೊಡೆ ಪೋಪೊಡಂತೆ ಕಾ |
ಱ್ಮೊಲ್ಲೆಯ ಬೀಜ[2]ರಾಜಿಗಳ ನುಂಗುವುದುಣ್ಬುದು ಮೇಗೆಯಂತದಂ ||
ನಿಲ್ಲದೆ ವಾಂತಿಯಕ್ಕುಮದಱಿಂದವರಿಕ್ಕಿದ ಕೃತ್ರಿಮೋತ್ಕರಂ |
ಪೊಲ್ಲಮೆಗೆಯ್ಯಲಾಱದಿದು ಮಂಗಬುಧಾಂಬುಜಭಾನುಭಾಷಿತಂ || ೬೦ ||*

ಕಂ|| †ಕರ್ಪೂರದೊಂಡೆಯ ಕನಕದ |
ವೊಪ್ಪವ[3]ಕೊಳುಗುಳಿಕೆಯೆಲೆಹುಲಿ(ರಿ)ಯ ತನಿರಸಮಂ ||
ತಪ್ಪದೆ ಮರ್ದಿಸಿ ತನುವಿಂ |
ಗಪ್ಪಣೆ[4]ಯಾದಂತೆ ಕೊಳಲಖಿಳ ಕೃತ್ರಿಮಮಱಿಗುಂ || ೬೧ ||

[5]ತೊಂಡಿನ ತೊಱ್ತರ್ ಪಾಪದ |
ಪಿಂಡಮೆನಿಪ್ಪಂಗನಾಜನಂ ಬೆರಸಲ್ ತಾ[6] ||
ಮುಂಡ ವಿಷಂ ಸಂಹರಿಕುಂ |
ತೊಂಡೆಯ ರಸಮಂ ಶರೀರದೊಳ್ [7]ಮರ್ದಿಸಲುಂ || ೬೨ ||

ಉ|| ಭಂಡೆಯರಂ(ದು)ಡಖಂಡ[8]ರುಧಿರಾದಿಗಳಂ ಬೆರಸಿಕ್ಕೆ ಭೋಜ್ಯದೊಳ್ |
[9]ಕೊಂಡಿರದಾಗಳಂತೆ ತಲೆಗೇಱಿದೊಡಂ ಮರು[10]ಳಾದವಂಗೆ ಮುಂ ||
[11]ಕೊಂಡರೆದೆಚ್ಚ ನೀಲಿಯ ರಸಂಗಳನೊತ್ತುವುದಂತೆ ನೆತ್ತಿ[12]ಯೊಳ್ |
ಕೊಂಡದರುಳ್ಳ ಮೂಲಮನೆ ನೀರೊಳವಿಱಂಟಿಸೆ ತದ್ವಿಷಾಪಹಂ || ೬೩ ||

ಉ|| ಬನ್ನಿಯ [13]ಮೂಲಮಂ ಭರದೊಳರ್ಚಿಸಿ ಮೌನದೆ ಸಿದ್ಧಯೋಗದೊಳ್ |
ಸನ್ನಿಧಿಯುತ್ತ [14]ರಾಸೆಯ ತದೀಯ ಸುಕೋಮಳಮಪ್ಪ ಮೂಲಮಂ ||
ಸನ್ನುತಮಪ್ಪ ಯಂತ್ರಮನಿದಂ ಬರೆದಿಂತಿದಱಿಂದೆ ರಕ್ಷೆಯಂ |
ನನ್ನಿಯೆನಲ್ಕೆ ಕಟ್ಟೆ ನಯಯೋಗದೊಳರ್ಚಿಸಿ(ಸು)ಭಾವಶುದ್ಧಿಯಿಂ || ೬೪ ||

## ರಕ್ಷೆ.

ಕಂ|| ಶುದ್ಧಾಂತರಂಗನಾಗಿಯೆ |
ಸಿದ್ಧದಿನಂ ತಂದು ಕಾಡ ವೊಲ್ಲೆಯ ಬೇರಂ ||
ಬದ್ಧಮೆನೆ [15]ಸಮೆದ ರಕ್ಷೆಯ |
[16]ಸಿದ್ಧಂ ಕೆಯ್ಮಸಕದಂಗೆ ಹಿತಮಂ ಮಾಱ್ಕುಂ || ೬೫ ||

1. ರಂದೆ. 2. ರಾಜಯನೆ (ಗ) 3. ಕಾಳುಗುಳಿಕೆಯೆಲೆ ಹುರಿಯತಗಿರಸ (ಗ) 4. ಯಾದಖಿಳ ಖಳರ ಕೃತ್ರಿಮಕೆಡುಗುಂ (ಗ) 5. ತೊಡರ್ಕೊತ್ತಿರ್ಪಾಪದ (ಗ) 6. ತಾಂಮುಂಡವಿಷಂ ಪರಿಹರಿಕುಂ(ಗ) 7. ಮರ್ದಿಸಿಯುಂ (ಗ) ಪೂಸಲೊಡಂ (ಘ) 8. ರತಿರಾದಿಗಳಂ (ಗ) 9. ಪಿಂಡಿರದಾಗ (ಗ) 10. ಳಾಗದವಂಗೆ. 11. ಕೊಂಡರೆದಚ್ಚನೀಲಿಯ (ಗ) 12. ಯೊಳಂಡಡರುಳ್ಳಮೂಲ (ಗ) 13. ಬನ್ನಿಯ ಬೀ(ಭೂ)ಜಮಂ (ಗ) 14. ರಾಣೆಯುಡದಿಯುಸಕೋ(ಗ) 15. ಸಮೆದು(ಗ) 16. ಸಿದ್ಧಸಿದ್ಧ ಕೈಮಸ (ಕ)

* (ಘ) ಪ್ರತಿಯಮೂಲಪ್ರತಿಯಲ್ಲಿ ಇಲ್ಲಿಗೆ ಗ್ರಂಥವು ಮುಗಿದಿದೆ. ‡ ೬೪-ನೆಯಪದ್ಯ ಇಲ್ಲಿದೆ (ಗ)

† ಇಂತು ನಾನಾಪ್ರಕಾರದ ಸ್ನಾನಪಾನಂಗಳಿಂದಮೊಪ್ಪುವ ತಂತ್ರಂಗಳುಂ ಮುಂದೆ ಪೇೞಲ್ಪಟ್ಟುದು ಮದೆಂತೆಂದೊಡೆ—

ತಂದು ಮಡುವಾಗಲೊಪ್ಪುವ | ಕಂದಮುನಜದುಗ್ಧದಿಂದೆ ಕುಡಿಸಲ್ ಕಳೆಗುಂ ||
ಕಂದುಂ ಕುಂದುಂಟೆ ? ನರ | ಗಂದಿಕ್ಕಿದ ಮರ್ದುಗಳನದಂ ಗುಣನಿಳಯಾ || (ಘ)

*ದುಷ್ಟದುರಿತಾರಿಯಂ ಹರಿ |
ವಿಷ್ಟರನಂ ಯಂತ್ರಮಧ್ಯದೊಳ್ ಸ್ಥಾಪಿಸುತುಂ[1] ||
ಅಷ್ಟೋತ್ತರ ಶತಸುಮಮಂ |
ಸ್ಪಷ್ಟಮೆನಲ್ಕಿಕ್ಕು ತತ್ಪದಾಂಬುಜಯುಗದೊಳ್ || ೬೬ ||

[2]ಯಂತ್ರ—

ಕ್ರೋಂ ಕ್ರೋಂ ಕ್ರೋಂ
ಕ್ರೋಂ ದೇ ಕ್ರೋಂ
ಗ್ರೋಂ ಗ್ರೋಂ ಗ್ರೋಂ
(ಕ್ರೋಂ)(ಕ್ರೋಂ)(ಕ್ರೋಂ)

ವ|| (ಯಂತ್ರಮಧ್ಯದಲ್ಲಿ ದೇವದತ್ತನ ಬರೆದು ಅದರ ಪೊರವಳಯದಲ್ಲಿ ಕ್ರೋಂ ಆಂ ಬರೆದು ಈ ಮಂತ್ರಾಧಿದೇವತೆಗೆ) ಯಂತ್ರಾಧಿಪತಿಗೆ ಪುಷ್ಪವನಿಕ್ಕುವ ಮಂತ್ರಂ—

ಮಂತ್ರಂ—ಓಂ,ಆಂ, ಕ್ರೋಂ [3]ಎಂದರ್ಚಿಸಿ ರಕ್ಷೆಯಿಂ [4]ಕಟ್ಟಲಾ(ಗ)ದರಹಿತಬುದ್ಧಿಯಿಂ ಮಾಡಿದ ಕುಟಿಲಂಗಳ್ ಕಿಡುಗುಂ—

ಕಂ|| ಮನುಜರ ಕೃತ್ರಿಮದಿಂದಂ |
ದನಿಯೊಡೆಯಲ್ [5]ತುಪ್ಪದೊಡನೆ ಗುಳ್ಳದ ಬಿತ್ತಂ ||
ತಿನಲದಱಿಂದಾತಂ ಪಿಕ |
ನಿನಾದನೆನಿಕುಂ [6]ಬುಧಾಬ್ಜವನಕಳಹಂಸಾ || ೬೭ ||

ಚಂ|| ಪೆಱರ [7]ಕುಚೇಷ್ಟಿತಂ ಜ್ವರಮ[8]ದಾದೊಡೆ ವರ್ಣಮ[9]ದೊಂದಱಾಕಳಂ |
ಕಱಿದದರಾಜ್ಯಮಂ ತಲೆಯೊಳೊತ್ತಿ ಸಮಂತ್ರಕ [10]ಮಱುತ್ತಿಯಾದಿಯಾ ||
ದಱಿಕೆಯ ಪಾಲ್ಮರಂಗಳೆಸೆವ [11]ತ್ವಗನಿಂದಿತಯುಕ್ತಮಾಗಿರಲ್ |
ನೆಱೆ [12]ತೊಳೆಯಲ್ಕಮಟ್ಟ ಕಱಿಯಿಂ ಬಿಡುಗುಂ ಜ್ವರಮಾತನಂಗದಿಂ || ೬೮ ||

ತನ್ಮಂತ್ರಂ—ಓಂ, ನಮೋ ಜ್ವ(ಜ್ವಾ)ಲಿನಿ [13]ನೀರೇಜ(ವಾಸಿ)ನಿ(ಪಾ)ಪರಿಘೆ—

ಮ|| ವಿಲಸಚ್ಚಂದನ ರಕ್ತಚಂದನ ರುಜಾವಾಳ ಪ್ರಿಯಂಗ್ವಾಖ್ಯಮಂ |
ಜಲದಿಂ ತೇದು ಸಮಂತ್ರಕಂ ತನುಗೆ [14]ಲೆಪ್ಪಂಗೆಯ್ಯಲಾ ಪಾತಕರ್ ||
[15]ಕೊಲೆಗೆಂದಿಟ್ಟಭಿಚಾರದುಷ್ಟತರಮುಂ ದಾಹಂ ಜ್ವರಂ ಸ್ಫೋಟಕಂ |
ನೆಲೆಗೆಟ್ಟೋಡುಗುಮೆಂದಿದಂ ತಿಳಿಸಿದಂ ಶ್ರೀಮಂಗ[16]ರಾಜೋತ್ತಮಂ || ೬೯ ||

ತನ್ಮಂತ್ರಂ—ಓಂ ನಮೋ(ಭಗವತೇ)ಓ(ಬ)ಡ್ಡಾಮರೇಶ್ವರಾಯ [17]ಕಂಹ(ಂಗಿ)ನಿಮನಮುಕ್ತಂಚ ದುರ್ಗಾಯ ಸ್ವಾಹಾ.

1. ತಂದಷ್ಟೋತ್ತರ (ಗ) 2. (ಗ) ಪ್ರತಿಯಲ್ಲಿ ಯಂತ್ರಕ್ಕೆ ಸ್ಥಳಬಿಟ್ಟಿದೆ ಯಂತ್ರವನ್ನು ಬರೆದಿಲ್ಲ. ತನ್ಮಂತ್ರೋದ್ಧಾರ ಮೆಂತೆಂದೊಡೆ ಯಂತ್ರ—ಈ ಯಂತ್ರಾಧಿಪತಿಗೆ (ಗ) 3. ಇಂತರ್ಚಿಸಿ (ಗ) 4. ಕೊಟ್ಟಲಾ ರಾ ರಾತಿಬುದ್ಧಿಯಿಂ (ಗ) 5. ಯೊಡದಂ ತಪದೊಡನೆ—ಮೆಲಲದಱಿಂ (ಕ) 6. ಬುಧಕುಳಾಬ್ಜವನಕಳಹಂಸಾ (ಕ) (ಖ) ನಿಸದನುವುಕ್ಕುಂ ಸರಸ್ವತೀಮಣಿಗತಾ (ಘ) 7. ಪೆರರಕುಚೇಷ್ಟೆಯಿಂ (ಗ) ಪರರಕು (ಕ) 8. ದಾಗಲು (ಗ) 9. ಮುದೊಂದದಾಕಳಂ ಕರಿದದರಾಜ್ಯ (ಗ) 10. ಮತ್ತೆ (ತ್ತಿ)ಯಾದಱಿಕೆಯ (ಗ) ಮತ್ತಿಯಾದಿ.ಯದಿಯಾದಱಿಕೆಯ (ಕ) 11. ತ್ವಗನಿಂದಿತಯುಕ್ತ (ಕ) 12. ತೊಳೆಯಲ್ಕಮಟ್ಟಕಱಿಯಿಂ (ಗ) 13. ನಿಲೆಜನಿವಾಪರಿಪಿ (ಕ) 14. ಲೆಪ್ಪಂಗೆಯೆ (ಕ) 15. ತೊಲೆಗಂತೊಟ್ಟಭಿಚಾರುದೂಷಕರಮಂ. 16. ರಾಜಾತ್ಮಕಂ (ಕ) ರಾಜಾಹ್ವಯಂ (ಘ) 17. ಕಹನಿಕ್ತಚ (ಕ)
* (ಗ) ಪ್ರತಿಯಲ್ಲಿಲ್ಲ.



ಕಂ|| *ಮೊಸರಂ ಜೇನೆಯ್ಯಂ ಭಾ |
ವಿಸಿ ಪೂಸಲ್ ಕೃತ್ರಿ[1]ಮೋದ್ಭವ ಸ್ಫೋಟಕಮುಂ ||
ದೆಸೆಗಿಡುಗುಂ [2]ದೇವಳಿಗೆಯ |
ವಸುಧಾಜನಮುಖ್ಯಮಂಗರಾಜನ ಮತದಿಂ || ೭೦ ||

ಅತ್ತಿಯ ಪಣ್ಣಿನ ರಸಮಂ |
ಬಿತ್ತರದಿಂ ಬೆಳೆದ ಬಿಳಿಯ[3]ಕರ್ಬಿನ ರಸಮಂ ||
ಮತ್ತೆನ್ನದೀಂಟಲಿಕ್ಕಿದ |
ಬತ್ತಲೆ ಪರಿಸುವ[4] ಮರುಳ್ತನಂಗಳ್ ಕಿಡುಗುಂ || ೭೧ ||

[5]ಶಮರಹಿತರ್ ಖಳರಿಕ್ಕಲ್ |
ಬಮೆಗೊಂಡ ನರಂಗೆ ಮಾಯಲೆಱೆವುದು ಪಾಲಿಂ ||
ಕ್ರಮದಿಂ [6]ಪಾಲಂ ಶರ್ಕರೆ |
ಯುಮ[7] ಸೀಂಟಲ್ ತಿಳಿಗುಮಖಿಳಬುಧಜನಮಿತ್ರಾ || ೭೨ ||

[8]ಅಣಿಕಿಸಿ ಕೆಲಬರ್ [9]ಕೆರಹಿನ |
ಕುಣಿಯಾಳಟ್ಟೆಯೊಳೆ [10]ಸವೆಯೆ ಪಾದದ ಪುಣ್ಣಂ ||
ಕ್ಷಣದಿಂದಮಕ್ಕಿಗರ್ಚಿಂ |
ಗಣನೆಯೊಳಂ ತೊಳೆಯಲವರ ಕೃತ್ರಿಮ[11]ಮಱುಗುಂ || ೭೩ ||

*ಪಿರಿದುಂ ತಂಬುಲದೆಡೆ(ಲೆ)ಯೊಳ್ |
ಪರಿಣಮಿಸಲ್ ಮದ್ದುರ್ ಮತ್ತದುಂ ತಲೆಗೇಱಿಲ್ ||
ಮರುಳಾದವಂಗೆ ಮಾಡುವ |
ಪುರುಷಾರ್ಥಪ್ರದಮಿದೊಂದನಾಂ ವಿವರಿಸುವೆಂ || ೭೪ ||

ಘಱಿಲನೆ ನೇಱಿಲ[12]ತೊಕ್ಕಂ |
ಪಿ(ತು)ಱಿದ ರಸಂ ಗೋಘೃತಾನ್ವಿತಂ ಶರ್ಕರೆಯಿಂ ||
ವಿಲಸಿತಮೆನಿಸಿದ ಪಾಲಂ |
[13]ದಳಿದಾ ಮೊಘೆ(ಗೆ)ಯೆನಿತನಿತ್ತು ಕೊಂಡ ಬಱಿಕ್ಕಂ || ೭೫ ||

ನೀಡಿರದೆ ತಲೆಯೊಳಂ ಹಿಮ |
[14]ಗೋಡುವ ನೀರ್ಗಳನೆ [15]ಪೊಯ್ಯಲಂತದು ತಿಳಿಗುಂ ||
ಈಡಿತಮಿಂತಿರಲಿದಕಂ |
ನಾಡಾಡಿಯ ಮದ್ದ್ರದೇವುದಮಳಚರಿತ್ರಾ || ೭೬ ||

1. ಮೋದ್ಭೋದ್ಭವ ಸ್ಫೋಟಕಂ (ಕ) 2. ದೀವಳಿಗೆ (ಕ) 3. ಕಬ್ಬಿನ (ಗ) 4. ಪರಿಸು ಮರುಳ್ತನಂಗಳ್ ತಿಳಿಗುಂ (ಗ) ಮತ್ತಲೆ ಪರಿಹರಿಸುವ ಮರುಳ್ತನಂಗಳೆಲ್ಲಂ ಕಿಡುಗುಂ (ಕ) 5. ಶರಮುಹಿತರ್ (ಕ) ಸವೆರಹಿತರ್ಬಳರಿ (ಗ) 6. ಪಾಲುಂ ಶರ್ಕರೆ (ಕ) 7. ನೀಂಟಲೆರಗುಂ ಮಖಿಳಬುಧಜನೈಕಮಿತ್ರನ ಮತದಿಂ (ಗ) 8. ಅಣಕಿಸಲೇಕೆ (ಕ) ಅಣಕಿಸಿರ್ಕೆಲ (ಗ) 9. ತೆರಹಿನ (ಗ) 10. ಸಮೆಯೆ ಪುಣ್ಣೊಳ್ ಮಣಲಿದಿಂದ ಮಕ್ಕಿಗರ್ಚಿಂ ಗಣನೆಯೊಳ ಪಿರಿದುತಂಬುಲ (ಕ) 11. ಕೆಡುಗುಂ (ಗ) 12. ತ್ವಕ್ಕಂ (ಕ) 13. ದಳದೊಳಮುಘೆಯ ನಿತ್ತನಿತ್ತು (ಕ) ದಳದೊಂ ಮೊಘೆ(ಗೆ)ಯನಿತ್ತುಕೊಂಡು (ಗ) 14. ಗಾಡುವ (ಗ) ನಿಗ್ಗಳಲಗೆ ಪೊಯ್ಯ (ಕ) 15. ತಂದುಪೊಯ್ಯಲ್ ತಿಳಿಗುಂ ಈಡಿದ ಮಿಂತಿದಲ್ಕಂ ನಾಡಾ (ಗ) ಈಡಿತ ಮಿಂತಿರದಿರಲ್ಕಂ (ಕ)
* ಈ ಕಂದಗಳು (ಗ) ಪ್ರತಿಗಳಲ್ಲಿಲ್ಲ.

ಕಂ|| ಎಳ್ಳೆಣ್ಣೆಯೊಳಂ ಕುಡಿ (ದಿ) ಸುವು |
ದೊ(ದು)ಳ್ಳಿಹ(ಯ) ಜಾತೀಫಲಂಗಳಂ [1]ಮೂವೆಯದಂ ||
ಪುಳ್ಳಕ್ಷೀರದೊಳಂ ಸಿ(ೞ) | [2]
ಗ್ಗಿಲ್ಲ(ಗೊಳ್ಳ)ದವೋಲ್ ಕುಡಿ(ದಿ)ಸುಗಂತ [3]ದುಂ ಪರಿಪಡುಗುಂ || ೭೭ ||

*ಕು (ಗು) ದಿಗೊಂಡ ಪೊೞ್ತುಱೊಳ್ ಮ |
ತ್ತದನಿೞಿಪಲದೊಮ್ಮೆರ್ಗೊಮೆರ್ ಯಂತದ[ನ]ಱಿಯ ||
ಲ್ಕದನಿೞಿಹಿ ಭಾಗಮಂ ಮಾ |
ೞ್ಪುದು ಮಡಗಿರಿಸುವುದು ಬೞಿಯಮಾ ಪೋೞ್ಗಳುಮಂ || ೭೮ ||

*ಉದಯಾಸ್ತಮಾನದಲ್ಲೀ |
ವುದು ಕೃತ್ರಿಮಜನ್ಯವಿಷದ ನೀರ್ಗುಂದಲ್ ಸ ||
ತ್ವದಪವಣಱಿದು ಬೞಿಕ್ಕು |
ಣ್ಬುದು ಮಧುರಮೆನಿಪ್ಪಭೋಜ್ಯಮಂ ಹಿತಮಕ್ಕುಂ || ೭೯ ||

ಚಂ|| *ಇದಖಿಳಕೃತ್ರಿಮೋಗ್ರವಿಷ ದರ್ಪಘನಾಘನ [ಚಂಡ]ಮಾರುತಂ |
ಉ(ವಿ)ದಿತ ತನುವ್ಯಥಾ ಭಯ ಸರೋರುಹಮತ್ತಗಜಂ ಬುಧಾಳಿಯಿಂ ||
ತಿದನೊಲಿದೞ್ತಿಯಿಂ ಬರೆವುದಾದರದಿಂದಮೆ ನೋೞ್ಪುದೆಂದು ಕೋ |
ವಿದರಿಗಮೋಘಮಾಗಲೊರೆದಂ ವಿಭುಮಂಗಬುಧಂ ಧರಿತ್ರಿಯೊಳ್† || ೮೦ ||

— ಗ ದ್ಯ —

ಇದು

ಸಕಲವಿದಮಲ ಜಿನೇಂದ್ರೋಕ್ತಸಿದ್ಧಾಂತಪಯಃಪಯೋನಿಧಿಪಾರಗ
ಶ್ರೀಪೂಜ್ಯಪಾದಮುನೀಂದ್ರ ಚಾರುಚರಣಾರವಿಂದ
ಗ ಂ ಧ ಗು ಣಾ ನ ಂ ದಿ ತ ಮಾ ನ ಸ ಂ
ಶ್ರೀಮದಖಿಲಕಲಾಗಮೋತ್ತುಂಗ
ಮ ಂ ಗ ವಿ ಭು
ವಿರಚಿತಮಪ್ಪ

## ಖಗೇಂದ್ರ ಮಣಿದರ್ಪಣದೊಳ್

[4]ಕೃತ್ರಿಮವಿಷಹರಣ ಚಿಕಿತ್ಸಾಧಿಕಾರಂ
ಚ ತು ರ್ದ ಶ ಂ.
(ಮಂಗಳಮಹಾಶ್ರೀ.)

—

1. ಮೂಮದಿಂ (ಗ) 2. ಸಿಗ್ಗೊಳ್ಳಿದವೋಲ್ (ಕ) 3. ತದಂಕುಡಿಯೊಳ್ (ಕ) 4. ಕೃತ್ರಿಮ ವಿಷಹರ ಚಿಕಿತ್ಸಾಪ್ರಕರಣಮೆಂಬೀ ಪದಿನಾಲ್ಕನೆಯಾಶ್ವಾಸವು ಸಮಾಪ್ತಮಾದುದು (ಗ)
* (ಗ) ಪ್ರತಿಯಲ್ಲಿಲ್ಲ.
† ಈ ಅಧಿಕಾರಾಂತ್ಯದಲ್ಲಿಯೂ ಮಾಲಿನೀವೃತ್ತವಿಲ್ಲ.

# ಪಂಚದಶಾಧಿಕಾರಂ

## ಬಾಷ್ಪ(ಷ್ಟ) ಚಿಕಿತ್ಸಾಪ್ರಕರಣಂ.

ವ|| ಬಾಷ್ಪ ವಿಧಾನ ಚಿಕಿತ್ಸೆಯಂ ಪೇೞ್ವೆಂ ||

ಕಂ|| * ಶ್ರೀಮತ್ಪರಮಾತ್ಮ[1]ನೆನಿ |
ಪ್ಪಾಮದರತಿರಾಗದೋಷರಹಿತನನೊಸೆದಾಂ ||
ಪ್ರೇಮದೊಳಂ [2]ವಂದಿಸಿಯೆ ಮ |
ನೋಮುದದಿಂ ಬಾಷ್ಪ(ಷ್ಟ)ಭೇದಮಂ ವಿವರಿಸುವೆಂ || ೧ ||

*ಅಪ್ರಮಿತವೀರ್ಯನಾ(ನಂ) [3]ಜಗ |
ತೀಪ್ರಿಯತಮವಾದಿಯಂಘ್ರಿ [4]ಪದ್ಮಂ ಗಳ್ಗೊ ||
ಪ್ಪೆ ಪ್ರಣತನಾಗಿ ಬಾಷ್ಪ(ಷ್ಟ)ವಿ |
ಷಪ್ರಹರಣಮಪ್ಪ ವೈದ್ಯಮಂ ಪ್ರಕಟಿಸುವೆಂ || ೨ ||

ಮ|| ಕ್ಷಿತಿಯೊಳ್ ಬಾಷ್ಪ(ಷ್ಟ)ಮೆ ಕೋಟಿಭೇದಮದು ತಾನೆಂಬತ್ತುನಾಲ್ಕೆಂಬ ಸೂ |
ಚಿತಮುಂಟಲ್ಲಿ ಸಮಸ್ತರಂ ತಿಳಿಪ[5]ಲೆಂದಾನೆಲ್ಲಮಂ ಪೇೞ್ದೊಡಂ ||
ವಿತತಂ ಶಾಸ್ತ್ರಮದಕ್ಕು [6][ಮಂತಱಿವ] ವರ್ಗಾಲಸ್ಯಮೆಂದಿಂತಿದ |
ಪ್ರತಿಮಂ ತಾನೆನೆ ಪೇೞ್ವೆನಾಂ ಕಿಱಿದಱಿಂ ತತ್ಸಾರಮಂ ಸಾಂಗದಿಂ || ೩ ||

ಶಾ|| [7]ಪಿತ್ತಶ್ಲೇಷ್ಮಸಮೀರ [8]ಸನ್ನಿಯುರಿ ಕಾ(ಖಾ)ಸಂ ಛರ್ದಿ ಮೂರ್ಛಾಹ್ವ[9]ಯಂ |
ಮತ್ತಾರಕ್ತಜಡಂ ಭ್ರಮಂ ಭ್ರಮಣೆಯುಂ [10]ಶಲ್ಯಾಸ್ಥಿಶುಭ್ರಾಸಿತಾ ||
ಯತ್ತಂ ಖಂಡಿತ [11]ಹಿಕ್ಕೆ ಸೊಕ್ಕುಸಹಿತಂ ಸಿಂಗಿ ಕ್ರಿಮಿ ಪ್ರ(ದೃ)ಷ್ಟಮಂ |
ತತ್ತದ್ಭೇದಮ [12]ನಾಚಿಕಿತ್ಸೆಸಹಿತಂ ಪೇೞ್ವೆಂ ಮನೋರಾಗದಿಂ || ೪ ||

ವ|| ಅದೆಂತೆಂದೊಡೆ ||

### (೧) ಪಿತ್ತಂ.

ಕಂ|| ಪಿತ್ತೋದ್ರೇಕಂ ಪುಗುೞಿಂ[13] |
ಚಿತ್ತಭ್ರಮೆ ಯೆಂಬಿವಕ್ಕು [14]ಮಂಗಮ[ದುಂ]ತಾ ||
ನೆತ್ತಂ ಹಳದಿಯವರ್ಣಂ |
ಬೆತ್ತಿರ್ಪುದು ಪೈತ್ಯಮೆನಿಪಬಾಷ್ಪ(ಷ್ಟ)ದಭೇದಂ || ೫ ||

1. ನೆಪ್ಪಾ (ಗ) 2. ಮದಿಸಿಯಿ (ಗ) 3. ಜಗದಿ (ಗ) ಜನತಾ (ಘ) 4. ಗಳಿಗೊಪ್ಪೆ ಪ್ರಣುತಮಾ(ನಾ)ಗಿ(ಗ) ಜಲರುಹಯುಗರಂ | ಸುಪ್ರಣತ (ಘ) 5. ಲೆಂತಾನೆಲ್ಲ (ಗ) 6. ಕ್ಕುಮೆಂಬರವರ್ಗಾಲಸ್ಯ—ಪೇೞ್ದೆ (ಗ) ಪೇೞ್ದೆನಾನಿದಂ. ಪೇೞ್ದೊಡಂವಿತತಂ ಶಾಸ್ತ್ರಮದಕ್ಕುಮಂತದನೆ ಬಗೆವರ್ಗಾಲಸ್ಯಮೆಂದಿಂತಿದಂ (ಕ) ತೆಱದಱಿಂ (ಕ) 7. ಪಿತ್ತಂ (ಗ) 8. ಸನ್ನುಸುರಿಕಾಸಂ ದರ್ದಿಮೂರ್ತಾ (ಕ) 9. ಹ್ವಮೂಂ (ಕ) ಹ್ವಮುಂ (ಖ) 10. ಶಲ್ಯಸ್ಥಿಶುಭಾಶಿತಾಯುಕ್ತಂ (ಕ) ಯಂತಿಖ್ಯಾಸ್ಥಿಶುಭ್ರಾ ಶಿರೋಯತ್ತಂ (ಗ) 11. ಹಿಕ್ಕು ಸುಕ್ಕುಸಹಿತಂಸಂಗಿಕ್ರಿಮಿ (ಕ) 12. ನಾಚೆಚ್ಚೆಸಹಿತಂ (ಕ) ನಾಚಿಕಿತ್ಸೆಯೊಡನಾಂ (ಎಂದಿರಬಹುದು( 13. ಪುಗಳಂ (ಗ) 14. ಮಂಗಮದುತಾಂ (ಗ) ಮಂಗವಾದಂತಾ(ಗ)
* ಇದು (ಕ) (ಖ) ಪ್ರತಿಗಳಲ್ಲಿಲ್ಲ.

ಅದರ್ಕೆ (ಔಷಧಂ)—

ಕಂ|| ಕೞಿ[1]ಪುಣಿಸೆಯೆಲೆಯ ರಸದಿಂ |
ತೊಳೆವುದು [2]ಪುಣ್ಣಂ ಸಮುದ್ರಫಲಮಂ ಬೞಿಯಂ ||
ಕಳಿಯಿಂ ನಸ್ಯಾಂಜನಮಂ[3] |
ತಳಿವಿಲ್ಲದೆ ಮಾಡೆ ತದ್ವಿಷಂ ಪಱಿಪಡೆಗುಂ || ೬ ||

೨ ಶ್ಲೇಷ್ಮಂ (ಕಫ)

ಕಂ|| ರಸಿಗೆಗಳೊಸರ್ಗುಂ [4]ಗಾಯದ |
[5]ದೆಸೆಯಿಂ ಬಾಯಿಂದೆ ಲೋಳೆ ಸುರಿಗುಂ ಮತ್ತಂ ||
ಮುಸುಡೆಯ್ದೆ ಬಾವುದುಂ ಭಾ |
ವಿಸೆ [6]ಬಧಿರತೆಯಕ್ಕುಮದುವೆ ಕಫದ ವಿಶೇಷಂ || ೭ ||

ಅದರ್ಕೆ (ಔಷಧಂ)—

ಕಂ|| [7]ಅಮದರ್ಾ ಚ(ತ)ಗಚೆಯ ರಸದೊಳ |
ಮಮರಿಯೊಳಂ ತೊಳೆದು ಗಾಯಮಂ ಹಾಲೆಯ ಬೀ ||
ಜಮನೆಚ್ಚಲಮರಿಯಿಂ[8] ಕ |
ಣ್ಗಮದಂ ನಸ್ಯಮನೊಡರ್ಚೆ ಬಾಷ್ಪಂ ಕಿಡುಗುಂ || ೮ ||

೩ ವಾತಿಕಂ.

ಕಂ|| [9]ವಾತಿಕಮೆನಿಸಿದ ಬಾಷ್ಪ |
[10]ಕ್ಕೇತೊದಳಂಗದೊಳೆ ಶೂಲೆ ಪುಟ್ಟುಗು[11]ಮೆತ್ತಂ ||
ಮಾತೇಂ ತೊಳೆವುದು ಕತ್ತೆಯ |
[12]ಗೋತದೊಳಂ ಮೇಘನಾದಿವೆರಸಂತದಱಿಂ || ೯ ||

ವ|| ಅಂತಾಪುಣ್ಣಂ ತೊಳೆದ[13]ಬೞಿಕಂ ಮದ್ದು—

ಕಂ|| ಆಮೇಘನಾದಿಯೆಂಬಭಿ |
ರಾಮ[14]ತೆಯೌಷಧಿಯ ಮೂಲಮಂ ಮರ್ದಿಸಿ ಸು ||
ಪ್ರೇಮದೊಳಂ ಪಾನಾಂಜನ |
[15]ನಾಮ[ಸ] ನಸ್ಯಮನೊಡರ್ಚೆ ತದ್ವಿಷಮೞಿಗುಂ || ೧೦ ||

1. ಕಳಿಹುಣಿಸೆ (ಕ) (ಗ) 2. ಪಣ್ಣಂ (ಕ) 3. ನದಿಂಕಳು (ಗ) 4. ಖಾಯದ (ಗ) ಘಾಯದ (ಕ) 5. ದೆಸೆಯಿಂದ ಆಲೊಳೆ (ಕ) 6. ಬಧಿರತ್ರಯಕ್ಕುಮದುವೇ ಕಪದಬಾಷ್ಪವಿಶೇಷಂ (ಗ) ಬರದಿತೆಯಕ್ಕುಮಿದುವೆ ವಿಷದವಿಷಂ (ಕ) 7. ಅಮುದ್ದಾತಗ (ಗ) 8. ರಿಯಿಂ ಕಣಮುದಂ (ಗ) 9. ವಾಂತಿಕ (ಕ) 10. ಕೆರೋಗದೊಳಂಗದೊಳುಮಾಲೆ (ಕ) ಕೆತೊದಳಂಗ (ಗ) 11. ಟ್ಟುಗೆಮತ್ತಂ (ಗ) 12. ಗೋತ್ರದೊಳಂ (ಗ) 13. ತೊಳೆವುದು (ಕ) ಘ್ನತ (ಘ) 14. ದಮೂಲಿಕೆಯ (ಘ) 15. ನಾಮಸನಸ್ಯ (ಗ)



೪ ಸನ್ನಿ.

ಕಂ|| ಸಂನಿಯ [1]ಬಾಷ್ಪದೆ ನಾಡಿಯೊ |
ಳಂ ನಸು ಮಿಡುಕಿಲ್ಲ ಪುರ್ಬನಾಡಿಸುಗುಂ ಮ ||
ತ್ತಂ ನಾಲಗೆ ಬೀಱ್ಗಂ[2] ತಾಂ |
ತಂನಂ ಮಱೆದಿರ್ಕ್ಕು [3]ಮದಱಿನಿದುವೆ ನಿದಾನಂ || ೧೧ ||

ಅದರ್ಕೆ (ಔಷಧಂ)—

ಕಂ|| ಒಡಗೂಡಲ್ [4]ಕುಲಿಗನ ರಸ ||
ದೊಡನಾಡಿನ ಮೂತ್ರ[5]ವೆರೆದು ತೊಳೆವುದು ಪುಣ್ಣಂ ||
ಪಡೆಮಾತೇಂ ಸನ್ನಿಯ [6]ಪು |
ಣ್ಪಡೆದಂ ಜೀವಿಸುವುದರಿ(ದೆ)ದು ಭೂಮಂಡಲದೊಳ್ || ೧೨ ||

೫ ಉರಿ.

ಕಂ|| ಉರಿಯೆಂಬ ಬಾಷ್ಪದೊಳ್ [7]ನೀರ್ |
ಸುರಿಗುಂ [8]ಕಣ್ಣಿಂದೆ ದಂತಶೂಲೆಯು [9]ಮಕ್ಕುಂ ||
ಉರಿಗುಂ ಸರ್ವಾಂಗಂ ಬಾಯ್ |
ಕರ[10]ಮಾಱುಗುಮಿಂತಿದರ್ಕೆ ಪೇೞ್ವೆಂ ಮದ್ದಂ || ೧೩ ||

ಅದರ್ಕೆ ಔಷಧಂ—

ಕಂ|| [11]ಸರಿಯಾಗಿ ಹಾರಿವಾಣದ |
ಗರುಗದ ರಸಮುವಱೊಳೊಂದಿಸಮರಿಯನಂತಾ ||
ಯೆರಡಱ [12]ಸರಿಯಿಂ ತೊಳೆವುದು |
ನಿರುತಂ ಕೂಷ್ಮಾಂಡಫಲರಸಂಗಳೊಳಂ[13] ಮೇಣ್ || ೧೪ ||

ರಾಜಿಸುವ ಕುಂಬ[14]ಳಂಗಳ |
ಬೀಜಂಗಳ ತಿರುಳನೆಸೆವ ಶರ್ಕರೆಯಿಂ ತ ||
ದ್ಭಾಜಿತಫಲರಸದಿಂದಂ |
ಯೋಜಿಸಿ [15]ಕುಡಿಯಲ್ಕಮಂತದುಪ[ಶಮ]ಮಕ್ಕುಂ || ೧೫ ||

1. ಬಾಷ್ಪದೊಳನ್ನಸು (ಕ) ಬಾಷ್ಪಡೆನಾಡಿ (ಗ) 2. ಬಱ್ದಂ (ಕ) 3. ಮದರಿಗಿದುವೆ (ಗ) ಮದಱಿನಿದುವೆ (ಕ) 4. ಗುಲಿಗನ ರಸಮೊನಾಡಿನ (ಗ) ರಸದೊಳಾಡಿನ (ಕ) 5. ಮರದು (ಗ) 6. ಪಣ್ಬಡೆದಂ (ಗ) ಪಣ್ಪೆಡೆದಂ (ಕ) 7. ನಿಪುರ್ರಿಸ್ಪುರ್ರಿಗುಂ (ಕ) 8. ಕಣ್ಣಿಂಗೆ (ಗ) 9. ಯುದಕ್ಕುಂ (ಗ) 10. ಮೂರುಗು ಬಿಂನದಕ್ಕೆ ಪೇಳುವೆ (ಗ) 11. ಸಿರಿಯಾಗಿ ಹಾರಿವಾಳದ (ಗ) 12. ಸರಿಯಂ(ಗ)(ಕ) 13. ಳೊಳು(ಕ) ಳೊಳಂ(ಘ) 14. ಳದಷಡ್ಬೀಜಂ(ಗ)ಗಳ........ತಿರುಳ(ಕ) 15. ಮಂತದುಪವಿಷಮುಕ್ಕುಂ (ಕ) ಕುಡಿಸಲ್ಕೆ ಮಂತದುವಿಷಮುಕ್ಕುಂ (ಗ)

### ೬ ಕಾಸಂ.

ಕಂ|| ಪರಿಕಿಸೆ [1]ಕಾಸದ ಬಾಷ್ಪ |
ಕ್ಕೆರಡುಂ ದೃಷ್ಟಿಗಳ[2] ಮಾಂದ್ಯಮಕ್ಕುಂ ಕೆಮ್ಮುಂ ||
ಪಿರಿದಕ್ಕುಂ ನಾಲಗೆ ತೆರೆ[3] |
ದಿರದುಬ್ಬಸಮಕ್ಕುಮದಱ ತೆಱನಂ ನರರೊಳ್ || ೧೬ ||

ಅದಕ್ಕೌ (ಔಷದಂ)[4]

ಕಂ|| ಆಕಳಮೂತ್ರದೊಳಂ ಸವಿ |
ವೇಕಂ ಗಣಜಿಲೆಯ ಕೊನರನರೆದು ಬಱಿಕ್ಕಾ ||
ಲೋಕಿಸಿ ತೊಳೆವುದದಂ ನಿ |
ರ್ವ್ಯಾಕುಳದಿಂ ಮಾಱಿಕ್ಕೆ ನಸ್ಯಪಾನಾಂಜನಮಂ || ೧೭ ||

*ವ|| ಅದಱಿಂದಾ ಬಾಷ್ಪಂ ಪ್ರಶಮಿಸುಗುಂ—

### ೭ ಛರ್ದಿ-

ಕಂ|| ವಮನದ ಬಾಷ್ಪಕ್ಕಂ ತಾಂ |
ಕ್ರಿಮಿಗಳ್ [5][ಬಾಯಿ]ಂದೆ ಸುರಿಗುಮಡಿಗಡಿಗಂ ತಾಂ ||
ವಮನಮದಕ್ಕುಂ ಗಾಯಂ |
ಸಮನಿಸಿದೆಡೆ[ಯಿಂದೆ ಕೂಳೆ ಸುರಿಗುಮವಶ್ಯಂ || ೧೮ ||

†ಕರಿಮೂತ್ರದೊಳಂ ಬೆರಸುಗೆ |
ಕುರುಟಿಗೆಯ ರಸಂಗಳಂ ಕ್ಷತಸ್ಥಾನಮುಮಂ ||
ಭರದಿಂದೆ ತೊಳೆದು]ಘಾಯಮ |
ನಿರದಾರಯ್ವುದು ಬಱಿಕ್ಕೆ ನಿರ್ಮಾಕ್ಷಿಕದೊಳ್ || ೧೯ ||

### ೮ ಮೂರ್ಛೆ.

ಕಂ|| ಮುಚ್ಛೆಯ ಬಾಷ್ಪಕ್ಕಾಗಳೆ |
[6]ಮುಚ್ಛೆ [ಯುಮಾ]ಕ್ಷಣದೆ ಹಾಸ್ಯಮುಂ [7]ಶೋಕ[ಮುಮಾ] ||
[8]ಬಿಚ್ಚತ[ದ] ನಟನಮುಂ ಪ |
ಲ್ಪಚ್ಚನಮಪ್ಪುದು [9]ಮನೂನ(ಮು) ಮಾಣ್ಬುದುಮಕ್ಕುಂ || ೨೦ ||

---

1. ಕಾಷ್ಟದ (ಗ) ಕಾಸದ (ಕ) 2. ಗಳುಮಾಂದ್ಯರಿಕ್ಕು (ಗ) 3. ತೆಗೆದಿರ (ಕ); ತೆರದಿರ(ಗ) 4. ವ|| ಇದಕ್ಕೆ ತೊಳಹ(ಗ) 5. ಗಾಯದಿಂದೆ(ಕ) 6. ಮುಚ್ಛೆಯದಾಕ್ಷಣದಹಾಸ್ಯಮುಂ ಶೋಕಂತಾಂ || (ಕ) 7. ಶೋಕಂತಾ (ಕ) 8. ಬಿಚ್ಚತ ನಟನಮುಂಪ (ಕ) 9. ಮಾನ ಮಾಣ್ಬುದು (ಕ) ನಟನಮುಲ್ವಚ್ಚನಮುಪ್ಪುದು ಮಾನಮುಣ್ಬುದುಮುಕ್ಕುಂ (ಗ)

* (ಗ) ಪ್ರತಿಯಲ್ಲಿಲ್ಲ.

† ಗ್ರಂಥಪಾತವುಳ್ಳ ೧೮, ೧೯-ನೆಯ ಪದ್ಯಗಳು ಎಲ್ಲಾ ಮಾತೃಕೆಗಳಲ್ಲಿಯೂ ಒಂದೇ ಕಂದಪದ್ಯದಂತೆ ಬರೆದಿದೆ. ಮೈಸೂರು ಸರ್ಕಾರದ ಓರಿಯೆಂಟಲ್ ಲೈಬ್ರರಿಯಲ್ಲಿರುವ (ನಂ 84) ಪ್ರತಿಯಲ್ಲಿ ಮಾತ್ರ ಎರಡು ಕಂದಗಳೂ ಬೇರೆಬೇರೆ ಯಾಗಿ ದೊರಕುವುವು.



ವ|| ಅದಕ್ಕೌಷಧಂ.

ಕಂ|| ಗಾಯಮನೀಕ್ಷಿಸಿ ತೊಳೆವುದು |
ಪಾಯದೊಳಂ [1]ತುಷ್ಟ್ರಮೂತ್ರದಿಂ ತ್ರಿಕಟುಕಮಂ ||
ಶ್ರೇಯಸ್ಕರ[2]ಮೆನಲೆಚ್ಚುವು |
ದಾಯತಮೆಸೆವಕ್ಷಿಗಳ್ಗೆ ಹಿತಕರಮಕ್ಕುಂ || ೨೧ ||

### ೯ ರಕ್ತಂ.

ಕಂ|| ರಕ್ತದ ಬಾಷ್ಪಕ್ಕಂತಾ |
ರಕ್ತಮೆ ತಾಂ ಸುರಿಗುಮೆಸೆವ ಬಾಯಿಂ ಮೂಗಿಂ ||
ವ್ಯಕ್ತಂ ಲಿಂಗ[3]ದೊಳೆಂಬುದಿ |
ದುಕ್ತಂ ಕಣ್ ಪಚ್ಚನುಗುರ್ಗಳುಂ ಬಿಳಿದಕ್ಕುಂ || ೨೨ ||

ಅದಕ್ಕೌಷಧಂ—

ಕಂ[4]|| ಅದನೊಟ್ಟೆಯ ಮೂತ್ರದೊಳೊಂ |
ದಿದ ಮೂತ್ರದೆ ಕನಕರಸದೊಳಂ ತೊಳೆವುದುಮಂ ||
[5]ತದಱುಪಶಮಮಕ್ಕುಂ [6]ಜಿನ |
[7]ಪದಪಂಕಜಮಧುಪನೆನಿಪ ಮಂಗನ ಮತದಿಂ || ೨೩ ||

### ೧೦ ಜಡಂ.

ಕಂ|| ಜಡಬಾಷ್ಪದವನ ನಾಲಗೆ |
ಜಡಮಕ್ಕುಂ ಸ್ಫೋಟ[8]ಕಂಗಳಂ[ಗ]ದೊಳಕ್ಕುಂ ||
[9]ನುಡಿಯುಂ ಬಱಲ್ಗಂ ಮೂಗಿನ |
ಯೆಡೆ ತುಱಿಸುಗುಮಿಂತಿವೆಯ್ದೆ ತಚ್ಚಿಹ್ನಂಗಳ್ || ೨೪ ||

ವ|| ಅದರ್ಕೆ ಮದ್ದು—

ಕಂ|| ಈಡಿತದಿಲುಮಿಚ್ಚೆಯ ಪುಳಿ[10] |
ಗೂಡಿದ ಸೌತೆಯ[11]ಫ[ಳೋ]ಕ್ತ ರಸದಿಂ ತೊಳೆಯಲ್ ||
ಈಡಿತದರಿಸಿನಮಂ ಕರಿ |
ಮಾಡಿ ನಿಯೋಜಿಸಿದ ನಸ್ಯದಿಂದುಪಶಮಿಕುಂ || || ೨೫ ||

---

1. ತರ್ಪಮೂತ್ರದಿಂ(ಕ)ದಷ್ಟವಾತ್ರದಿ(ಖ) 2. ಮೆನೆಪೆಚ್ಚು(ಗ) 3. ದೊಳೀಗದುಳುಕ್ಕಂ ಕಣ್ಬಚನಗುಗುರ್ಗಳು ಬೆಳಸಕ್ಕುಂ (ಗ) ಚ್ಚನುಗರ್ಗಳುಂ ಬೆಳುಪಕ್ಕುಂ(ಕ) 4. ಅದನೊಟ್ಟೆಯ ಮೂತ್ರದೊಳಂ ನರಮೂತ್ರದೆ(ಗ) 5. ತದುಪವಿಷಮಕ್ಕುಂ(ಗ) 6. ಜನಪದಪಂಕಜ(ಗ) 7. ಪದಪಂಕಜ ಜಮನೆನಿಪ ಮಂಗನನು ಮತದಿಂದಂ (ಗ) 8. ಕಂಗಳುಗಳೊಳಕ್ಕುಂ ನಡಿಯಿಂಬಳಲ್ಗಂ ಮೂಗಿನಯರೆ ಕುಡಿಸುಗು ಮಿಂತಿರ್ಪ್ಪದೆ ತಚ್ಚಂನಗಳು (ಗ) 9. ನುಡಿಯುಂ ಬಳಲುಂ (ಕ) 10. ಪುಳಿಯೊಡಗೂಡಿದ ಸೌತೆಯ ಫಲದರಸದಿಂ ತೊಳೆಯಲ್ಕೀಡಿತ ದರಿಸಿನ (ಕ) 11. ಫ(ಳ)ದಾರಸದಿಂ (ಖ)

## ೧೧ ಭ್ರಮೆ.

ಕಂ|| ಭ್ರಮೆಯೆಂಬ[1]ಪೆಸರ ಬಾಷ್ಪಂ |
ಭ್ರಮೆಯನೆ[2] ಮಾೞ್ಕುಂ ಶರೀರಮುಂ [3]ಕಂಪಿಸುಗುಂ ||
ಕ್ರಮದಿಂ ರೋಮಮುದಿರ್ಗ್ಗುಂ |
ಸಮನಿಸಿ [4]ಜಲವೊಸಗುರ್ಮಂತಿರಲ್ ಕಡೆವಾಯಿಂ || ೨೬ ||

ಅದರ್ಕ್ಕೌಷಧಂ—

ಕಂ|| ನಳನಳಿಪ ಕಾಗೆದೊಂಡೆಯ |
ಬೆಳೆದಿರ್ದ ಕುಮಾರಿಯೆಸೆವ [5]ರಸದಿಂ ಬೆರಸಾ ||
ಕುಳವೇಂ ಮೂತ್ರದೊಳೊಂ[ದಲ್] |
ತೊಳೆದು ಹರೀತಕಿ(ಯ)ಯಿನಮರಿಯಿಂದೆಸೆ ಮಾಣ್ಗುಂ || ೨೭ ||

## ೧೨ ಭ್ರಮಣೆ.

ಕಂ|| [6]ಭ್ರಮಣೆಯ ಬಾಷ್ಪಕ್ಕೆ ಶಿರೋ |
ಭ್ರಮಣಂ ಬೞಲಿಕೆಗಳಕ್ಕುಮೀಕ್ಷಿಸೆ ಕೂಷ್ಮಾಂ ||
ಡಮಿರಲ್ [7]ತತ್ಫಲರಸದಿಂ |
ದಮೆ ತೊಳೆವುದು ತ[ಥ್ಯ]ಮಾಮಯಂ ಪರಿಹರಿಕುಂ || ೨೮ ||

## ೧೩ ಶಲ್ಯಂ.

ಕಂ|| ಶಲ್ಯವೆಸರಾದ ಬಾಷ್ಪದೊ |
ಳೆಲ್ಲಂ [8]ಕೃಶಮಕ್ಕುಮಾಶರೀರಂ [9]ನಖರು ||
ಕ್ಪ[ಲ್ಲ]ಟಿಸಿ ಪಚ್ಚನಕ್ಕುಂ |
ಪೊಲ್ಲಂ ಜ್ವರಮಕ್ಕು ಪರೆಯದಿರ್ಕುಂ ಮೂತ್ರಂ || ೨೯ ||

ಅದರ್ಕೌಷಧಿ—

ಕಂ|| ಅಂಗುರೆಸೆವಾಡುಸೋಗೆಯ |
ಸಂಗತಮೆನೆ [10]ಕಾಗೆದೊಂಡೆಯೆಲೆಯಂ ಬೆರಸೇ ||
ಕಾಂಗದಜದುಗ್ಧದಿಂದರೆ |
[11]ದಂಗದ ಗಾಯಮನೆ ತೊಳೆವುದಂತದನೆ ವಲಂ || ೩೦ ||

---

1. ಪೇರ (ಕ) 2· ಭ್ರಮೆಯಂತು (ಗ) 3. ಕಲ್ಪಿಸುಗುಂ. 4. ಜಲತೋಪಸರ್ಗಮಂತೆ ಕಟವಾಯಿಂ (ಗ) 5. ರಸಮ ನಾಕುಳವೆಂ—ನಮರಿಂತೊಳೆಮಾಣ್ಗುಂ (ಗ) ಮೂತ್ರದೊಳೆಂತೊಳೆದುಹರೀ (ಕ) 6. ಭ್ರಮಣೆಯ (ಗ) 7. ಮಿರಲ್ ಫಲರಸದಿಂದವೆ ತೊಳೆವುದು ತದ್ಯಾಮಾಮಯ ಪರಿಹರಿಕುಂ (ಗ) ತೊಳೆವುದು ತದಾಮಯಂ (ಕ) ತದ್ಭವಾಮಯಂ (ಘ) 8. ಕೃತಮಕ್ಕುಂ (ಗ) 9. ನಖರುಕ್ಪಟಿಸೆ ಪಚ್ಚನಕ್ಕುಂ ಸೊಲ್ಲಂ ಜ್ವರಮಕ್ಕುಸರೆಯದಿಕ್ಕುಂ ಮೂತ್ರಂ (ಕ) 10. ಗೋಡೆದೊಂಡೆ (ಖ) 11. ಸಂಘತಘಾಯಮನೆ ತೊಳೆವುದಂತದನೆಲ್ಲಂ (ಗ)



ಕಂ|| [1]ಚೆಚ್ಚರ ದಕ್ಷಿದ್ವಿತಯದೊ |
ಳೆಚ್ಚುವುದಂತದನೆ ನಸ್ಯಮಂ [2]ಮಾೞ್ಪುದದೇ ||
ನಚ್ಚರಿ ಹಿತಮೆಂಬಿಳೆಯೊಳ್ |
ಸಚ್ಚರಿತಮುನೀಂದ್ರವಚನಮುಂ ತಪ್ಪುಗುಮೇಂ || ೩೧ ||

## ೧೪ ಅಸ್ಥಿ.

ಕಂ|| ದುಷ್ಟತರಮೆನಿಸಿದಸ್ಥಿಯ |
ಬಾಷ್ಪದೊಳೆಲು ಕರಗಿ ಘಾಯದಿಂದಂ ಬೀೞ್ಗುಂ ||
ಕಷ್ಟ ಪ್ರಮೇಹಮಕ್ಕುಮ |
ರಿಷ್ಟಂ ತದ್ದೃಷಣ ಪಾತಮಂತದು ಕಷ್ಟಂ || || ೩೨ ||

ಅದರ್ಕೌಷಧಂ—

ಕಂ|| ಘನನಾದಿಯ ರಸ[3]ದಿಂ ಕೂ |
ಡಿ[ನೃ]ಮೂತ್ರದೆ ತೊಳೆವುದೇೞನಾಗಳೆ ಮತ್ತಾ ||
ಘನನಾದಿಯ ಮೂಲಮನಂ |
ಜನಪಾನಾದಿಯೊಳೆ ರಚಿಸಲದು ಹಿತಮಕ್ಕುಂ || ೩೩ ||

## ೧೫ ಶ್ವೇತಂ.

ಕಂ|| [4]ಮಾತೇಂ ಪೞ್ತಿಯ [5]ತೊಳೆವೋಲ್ |
ಶ್ವೇತಾ(ಖ್ಯ)ಸ್ಪದ ಬಾಷ್ಪದಿಂದಮಕ್ಕುಂ ಗಾಯಂ ||
ವಿ(ಪಿ)ೀತಾಂಗರಕ್ತಮುಂ ಪುರು |
ಹೂತಂಗಮಸಾಧ್ಯ[7]ಮ[ದು] ಸದೇವರಿನೞಿಗುಂ || ೩೪ ||

ಅದರ್ಕೌಷಧಂ—

ಕಂ|| ಆನೆಯ ಲಂಡದ ರಸದಿಂ |
ಜಾನಿಸಿ ವಟಫಲಮನರೆದು ತೊಳೆದಾ ಕ್ಷತಮಂ ||
ಭೂನುತಮೆನೆ ಕಣವಚೆಗಳ |
ನಾನೆಗಲ್ಪುದೞಿಂದೆ ರಚಿಸು ನಸ್ಯಾಂಜನಮಂ || ೩೫ ||

---

1. ಚೆಚ್ಚರ ಮಕ್ಷಿತದೀಯದೊಳೆ (ಗ) 2. ಮಾೞ್ಪುದರೆನಚ್ಚರಿಹಿತ........ಮುನಿವಚನ (ಗ) ವಚನಮುಂ ತಪ್ಪುಗಮೇ (ಕ) 3. ಮಂತಾಡಿನಮೂತ್ರ (ಘ) ನರಮೂತ್ರಂತೊಳೆ (ಕ) ನೃಮೂತ್ರದೊಳೆವುದೆರನಾಗಳೆಮತ್ತಾ ಜನನಾದಿ (ಗ) 4. ಮತ್ತೇಂ (ಗ) 5. ತೊಳೆಯಲ್ (ಕ) 6. ಶ್ವೇತಾಖ್ಯದ (ಗ) ಶೇತಾಸ್ಪದ (ಕ) 7. ಸಾಧ್ಯಮುದಸದೆವರಿಗಳಿಗುಂ (ಕ) ಹೂತಂಗಮ ಸಾಧ್ಯಂಮುದು ಪೇದಯಿವರಿಗಳಿಗುಂ (ಗ) ಮಸಾಧ್ಯಮೌಷಧಂಗಳಿನೞಿಗುಂ (ಎಂದಿರಬಹುದು)

## ೧೬ ಅಸಿತಂ.

ಕಂ|| [1]ಗಾಯಂ ಕರಿದಪ್ಪುದು ತ |
[2]ತ್ಕಾಯದ ನಿಜಕಾಂತಿ ಕಿಡುಗುಮಸಿತಾಕೃತಿಯಾ[3] ||
ಶ್ರೀಯಿಂ ವಮನಂ [4]ಪಿರಿದ |
ನ್ಯಾಯದ ನೆಲೆ ಕೃಷ್ಣನೆಂಬ ಬಾಷ್ಪದಿನಕ್ಕುಂ || ೩೬ ||

ಅದರ್ಕೆ ಔಷಧಂ—

ಕಂ|| ಕುದುರೆಯ ಮೂತ್ರಂ ಜಂಭೀ |
ರದ ಫಲರಸಯುಕ್ತಮಾಗೆ ತೊಳೆವು[5]ದು[ತಾಂ]ಗಾ ||
ಯದ ಬಾಯಂ ಗುಂಜಿಯನು[6] |
ಳ್ಳುದುದಂ [7]ಕಣ್ಗೆಸಲೆ ಬಾಷ್ಪದಾ ವ್ಯಥೆ ಕಿಡುಗುಂ || ೩೭ ||

## ೧೭ ಖಂಡಿತಂ (ಖಂಡಂ.)

ಕಂ|| [8]ಖಂಡವೆಸರೆಸೆವ ಬಾಷ್ಪದೆ |
ಖ(ಪಿ)ಂಡಮನೇ ಕಾರುತಿರ್ಪ [9]ನೇಱಿನ ಬಾಯಿಂ ||
ಖಂಡಂಗಳೆ ಬೀೞ್ಗಂ ಬಸಿ |
ಱುಂಡವೊಲುಬ್ಬರಿಸೆ ನೇತ್ರಮುಂ ಬಿಳಿದಕ್ಕುಂ || ೩೮ ||

ಅದರ್ಕೆ ಔಷಧಂ—

ಕಂ|| ತೊಳಸಿಯ ರಸದೊಳ್ [10]ಬೆರಸಲ್ |
ನಳನಳಿಸುವ [11]ಲೋಯಿಸರದ ರಸಮಂತದಱಿಂ ||
ತೊಳೆಯಲ್ಕಂತಾ [12]ಬಾಷ್ಪದ |
ಮಲಮಱುಗುಂ ಸುಖದೊಳಿರ್ಕುಮಂತಾ ಪುರುಷಂ || ೩೯ ||

## ೧೮ ಹಿಕ್ಕೆ.

ಕಂ|| [13]ಹಿಕ್ಕೆಯ ಬಾಷ್ಪಮದೆಂತೆನೆ |
ಬಿಕ್ಕಱು[14]ಕೆಗಳಕ್ಕುಮಕ್ಷಿಯೊಳ್ ತಿಮಿರಂ ತುಂ[15] ||
ಬಿರ್ಕುಂ ತನು ಕೆಯ್ಕಾಲ್ಗ[16]ಳೊ |
ಳಕ್ಕುಂ [17]ನಿಶ್ಚೇಷ್ಟೆಯಂತದರ್ಕುಪಶಮನಂ || ೪೦ ||

1. ಘಾಯಂ (ಗ) 2. ತ್ಕಾಯಜ (ಗ) 3. ಕೃತಿಯುಂ (ಗ) 4. ಪಿರಿದುಂ ನ್ಯಾಯನೆಲೆ (ಗ) 5. ವುದುಘಾಯದ (ಕ) 6. ನೊಳ್ಳಿದುದಂ (ಗ) 7. ಕಣ್ಗೆಸಲು ಬಾಷ್ಪವ್ಯಥೆಗಳ್ ಕಿಡುಗುಂ (ಕ) 8. ಖಂಡಕ್ಕೆ ವೆಸರೆಸೆವ ಬಾಷ್ಪಖಂಡ (ಕ) 9. ತಿರ್ಪನೆರಿನ........ಬೀಳ್ಗುಬಸುರುಂಡ—ನೇತ್ರಮಂ (ಗ) 10. ದೊಳರಸಲ್ಲಳನಳಿ (ಕ) 11. ಲೊಯಿಸರಮಂತದಱಿಂ (ಗ) 12. ಬಾಷ್ಪದಿಮದವಳಿಗುಂ—ತಾಪ ರುಷಂ (ಕ) ಯಲ್ಕಂತಾಬಾಷ್ಪದ (ಗ) 13. ಹಿಕ್ಕೆಂಬ ಬಾಷ್ಪಮೆಂತೆನೆ (ಗ) 14. ಬಿಕ್ಕುಳಿಸಿದರಸಮಂತ ದಱಿಂ ತೊಳೆಯೆಳಗಕ್ಕು ಮಕ್ಷಿಯಾತಿಮಿರಂ ತುಂಬಿರ್ಕುಂ—ಯಂತಕ್ಕು ಪರಮನಂ (ಕ) 15. ತುಂಬಿ ಕ್ಕುಂ (ಗ) ತಾಂ (ಘ) 16. ಕೆಯ್ಕಾಲ್ಗಳುಮಕ್ಕುಂ (ಗ) 17. ನಿಶ್ಚೇಷ್ಟೆಯುಂ (ಗ)



ಅದರ್ಕೆ ಔಷಧಂ.—

ಕಂ|| ನಿಂಬೆಯ ಪುಳಿಯುಮನಮರಿಯು |
ಮಂ ಬೆರಸುವು[1]ದವ(ನ)ಱ ಗಾಯಮಂ ತೊಳೆವುದು ಮ ||
ತ್ತಂ ಬಿಡದಾರಯ್ವು[2]ದದ |
ಕ್ಕಿರ್ಂಬಿನ ಪಥ್ಯಕ್ರಮಂಗಳಿವು ಮುಖ್ಯಂ[ಗಳ್] || ೪೧ ||

## ೧೯ ಸುಕ್ಕು.

ಕಂ|| ಸುಕ್ಕಲ್ತೆ[3]ಧನುರ್ವಾತದ |
ತಕ್ಕನವೋಲ್ ತೆಗೆದುಮಂಗಮಂ ಪೆಱಗಣ್ಣ(ಣ್ಣ)ಂ ||
ಪಕ್ಕದೊಳೆ[4] ಶೂಲೆಗಳಲೆಗ |
ಳಕ್ಕುಂ ಕೆಂಪುಗುರ್ಗಳೊಳ್ [5]ಬಸಿರ್ ತೆಗೆದಿರ್ಕುಂ|| || ೪೨ ||

ಅದರ್ಕೆ ಔಷಧಂ—

ಕಂ|| ಸ್ಫುಟಮಾದ ಮೂತ್ರದೊಳೆ ತಾಂ |
ವಟವೃಕ್ಷದ ನಾರ ರಸಮನೊಂದಿಸಿ ತೊಳೆ(ದುಂ)ದಾ ||
ಝುಟಿತೆಯೊಳೆ ಪುತ್ರಜೀವಿಯ |
[6]ಘಟಯಿಸಿ ಲೋಚನದೊ[7]ಳೆಚ್ಚಲಂತದು ಮಾಣ್ಗುಂ || ೪೩ ||

## ೨೦ ಸಿಂಗಿ.

ಕಂ|| ಸಿಂಗಿಯ [8]ಬಾಷ್ಪದೆ ಕಣ್ಗಳ್ |
ಪೊಂಗಿ[9]ರ್ಕುಂ ಬಾಯ್ಗೆ ಪೊಗೆಯ ನಾತಮದಕ್ಕುಂ ||
ಬಿಂಗದವೋಲ್[10] ಬಿರಿದುದಿರ್ಗುಮ |
ದಂಗಜ್ವರಮಕ್ಕುಮದು ಕರಂ ಕಷ್ಟತರಂ || ೪೪ ||

ಅದರ್ಕೆ ಔಷಧಂ—

ಕಂ|| [11]ಮೂತ್ರಂ ಜಂಭೀರಂ ಕರಿ |
ಮೂತ್ರಂ ಲೇಸಪ್ಪ ಬಂಜೆ ಮಡುವಾಗಲಿವಂ ||
ಮಿತ್ರಜನಮೆಱೆ[3]ದು[12]ತೊಳೆಯಲ |
ಮಿತ್ರಂ ಬಾಷ್ಪಕ್ಕೆ ಸಿಂಗಿಗಮುಳಚರಿತ್ರಾ || ೪೫ ||

1. ದವನ ಕಾಯಂತೊಳವುದು (ಗ) 2. ಪಥ್ಯಕ್ರಿಮಿಗಳೆಂಬಲೀಮುಖ್ಯಂ (ಗ) ದುತಕ್ಕಂಬಿ.... ಳೆಂಬಿವೆ ಪಥ್ಯಂ (ಘ) 3. ದನುವಾತದತಕ್ಕ (ಕ) ತನುರ್ವಾತದಲ್ಕೆನವೊಲ್ತೆಗುಗುಮಂಗಮಂ (ಗ) 4. ಶೂಲೆಗಳಕ್ಕುಂ (ಗ) 5. ಪಸಿರ್ (ಗ) 6. ಘಟಯಿನೆ (ಗ) 7. ಳೆಚ್ಚಲು ತದುಮಾಣ್ಗುಂ (ಗ) 8. ಬಾಷ್ಪದೆ ಬಾಯಿಗಲ್ಪೊಂಗಿರ್ಕುವಣ್ಣೆಹೊಗೆಯು ನಾತಮದಕ್ಕುಂ ಬಿಂಗದೊಳ್ ಬಿರಿದುರ್ಗಮುದಂಗ ಜ್ವರಮಕ್ಕುಮದೆಕರಂ ಕಷ್ಟತರಂ (ಗ) 9. ರ್ಕುಂ ಇಂಬಾಇಗೆ (ಕ) 10. ಬಿರಿದುದಿರ್ಗುದು ದಂಗಜ್ವರ(ಕ) ಬಲಿದುದಿ (ಘ) 11. ಮೂತ್ರಂ ಜಂಬೀರರಸ ಕರಿಮೂತ್ರ (ಗ) (ಘ) 12. ತೊಳೆಯುಮಿತ್ರಂ (ಗ)

೨೧ ಕ್ರಿಮಿ.

ಕಂ|| ಕ್ರಿಮಿಬಾಷ್ಪದ ಗುಣದಿಂದಂ |
ಭ್ರಮೆಯುಂ [1]ಕ್ರೋಥಂಗಳಕ್ಕುಮುರಿಮೂತ್ರಂ ತಾಂ ||
ಕ್ರಿಮಿಕುಲ[2]ಮುರ್ಬುಗು ಮೇಱೆನೊ |
ಳವೋಘ[ಮೆನೆ] ಬಾಯ ಬಸಲೆಯುಂ ಸಂಭವಿಕುಂ || ೪೬ ||

ಅದರ್ಕೆ ಔಷಧಂ.

ಕಂ|| ಒರಸುಗೆ ನಿಂಬೆಯ [3]ಪುಳಿಯೊಳ್ |
ಸುರಸುರಿಕೆಯ ಪತ್ರದಿಂದೆ [4]ತೊಳೆವುದು ಬಱಿಕಂ ||
[5]ತಿರದತಿಬೇಗದೊಳಿತ್ತಂ |
ವಿರಚಿಸಿ ಗೋಮಯದ ಕಟ್ಟೆಯಂ [6]ಸುತ್ತೆವರಂ || ೪೭ ||

ಭ್ರಾಂತಿಲ್ಲದೆ ಕುರಟಿಗೆಯೆಲೆ |
ಯಂ ತೀವಿದ ರಸಸಮನ್ವಿತಂ ಸುಣ್ಣದ ಕ ||
ಲ್ಲಂ ತೀವಿ ಕ(ತ)ಡೆದು [7]ಗಾಯದೊ |
ಳಂ ತೊಳೆವುದು ಮುನ್ನಿನಂತೆ ತದ್ವಿಷಮುಱಿಗುಂ || ೪೮ ||

೨೨ ಶೋಭೆ.*

ಕಂ|| ಭಾವಿಸೆ ಶೋಭೆಯ ಬಾಷ್ಪಂ |
[8]ಬಾವುದು[9] ಮೆಯ್ಯೆಡೆ ನುಡಿಯುವ ನಾಲಗೆ ಬೀಱ್ಗಂ ||
ಜೀವಿಸುಗುಂ ಬ್ರಾಹ್ಮಿಯ [10]ಸ ||
ದ್ಭಾವಗುಡೂಚಿಯ ರಸಂಗಳಿಂ ತೊಳೆಯಲೊಡಂ || ೪೯ ||

ಅದರ್ಕೆ ಔಷಧಂ—

ಕಾಕೆಯ ಸೊಪ್ಪಿನ ರಸಮಂ |
ಮೂಕೊಱತಿಯ ರಸಮನಾದೊಡಂ [11]ಮೇಣ್ ಬೆಳೆದ ||
ದರ್ಾ[12]ಕೌಡೆಯ ಫಲರಸಮಂ |
ವ್ಯಾ[13]ಕುಳಮೇನರೆದು ತೊಳೆಯೆ ವಿಷಬಾಷ್ಪಹರಂ || ೫೦ ||

ವ|| ಇಂ ಸರ್ವಬಾಷ್ಪಕ್ಕೆ—

ಕಂ|| ಕರಿಮೂತ್ರದೊಳಂ ತೊಳೆವುದು |
ಪರಿಕಿಸೆ ಬಾಷ್ಪಂಗಳಾವು [14]ದಾದೊ[ಡಂ]ಮೇಣ್ ||
ಕರಿಯಿಕ್ಕಿದ ಲಂಡದ ರಸ |
[15]ಮುರುಹಿತಮುದಱಿಂದೆ ತೊಳೆದೊಡಂ ಹಿತಮಕ್ಕುಂ || ೫೧ ||

1. ಕ್ರೋಥಂಗಡಕ್ಕು (ಗ) 2. ಮರ್ಬುಗುಂಮೇರಿನೊಳಮವೋಘಂ ಚಾಯ (ಗ) 3. ಪುಳಿಯಲು (ಕ) 4. ತೊಳೆದುಬಱಿಕ್ಕಂ (ಗ) (ಘ) 5. ತಿರಲತಿಬೇಗದೊಳಿತ್ತಂ ವಿರಚಿಸಿ (ಗ) 6. ಸುತ್ತವರಂ (ಕ) 7. ಘಾಯದೊಳಂ (ಕ) 8. ಬಾಹುದು (ಕ) 9. ಮೆಯ್ಯೆದೆಯ್ದೆ ನುಡಿವ ಮೆಯ್ಯಂತೆ (ಗ) ನುಡಿವ? ನುಡಿನಾಲಗೆ (ಘ) 10. ಸದ್ಭಾವ ಗಡೂಚಿರಸಂ (ಕ) 11. ಮೇಣೆಳದಿರ್ದಾ (ಕ) 12. ಕೌಟೆಯ (ಗ) 13. ಕುಲಮೆನೆ ಅದುಕೊಳೆಯೆ (ಗ) ಕುಳಮೇನಱದುತೊಳೆ ವಿಷಂ ಬಾಷ್ಪಹರಂ(ಕ) 14. ದಾದೊಡೆಮೇಣ್ (ಕ) ದಾದೊಡಂಮೇಣ್ (ಗ) 15. ಮರುಹಿಮದರಿಂದೆ (ಗ)

* ನಾಲ್ಕನೆಯ ಪದ್ಯದಲ್ಲಿ ಬಾಷ್ಪಗಳ ಹೆಸರನ್ನು ಹೇಳುವಾಗ "ಕ್ರಿಮಿ(ಪು)ಪ್ರಷ್ಟಮಂ" ಕ್ರಿಮಿ ಮತ್ತು ಪ್ರಷ್ಟ(ಷ್ಟ)ಎಂದು ಬಾಷ್ಪಭೇದವನ್ನು ಹೇಳಿದೆ. ಇಲ್ಲಿ ಮಾತ್ರ ಕ್ರಿಮಿಯಾದ ಬಳಿಕ ಶೋಭೆ ಎಂದಿದೆ.



ಕಂ|| *[1]ನರರೇತೋಮಲಮೂತ್ರಾಂ |
ತ[ರ]ದೊಳೆ ಪ್ರತ್ಯೇಕಮಾವುದಾದೊಡಮೊಂದಂ ||
ದೊರಕಿದುದನೆ(ನ)ಱೆ(ರೆ)ದು ತೊಳೆವುದು |
ಪರಿಹರಿಕುಂ ಬಾಷ್ಪ[2]ದುಗ್ರವಿಷಮೆನಿತನಿತಂ || ೫೨ ||

ಹುಲಿಯ ಮಲ ಹು(ರಿ)ಲಿಯ ತುಪ್ಪಂ |
ಹುಲಿಯಂಗದ ರುಧಿರಮಿವ[3]ಱೊಳೊಂದೊಂದಂ ತಂ ||
ದಲ[4]ಸದೆ ತೊಳೆಯಲ್ ತನುವಿಂ |
ತೊಲಗುಗು[5]ಮಾವಾವ ಬಾಷ್ಪಮಾದೊಡಮಚಿರಂ || ೫೩ ||

ಅಳುಕದೆ [6]ಗಾಯದ ಬಾಯಂ |
ತೊಳೆವುದು ನರಮೂತ್ರದಿಂದಮರೆವುದು ಮತ್ತಂ ||
ಮೊ(ತೊ)ಱಗಿನ ತಿಗುಡಂ ಕಡಲೆಯ |
ಹುಳಿಯಂ ಬೆರಸರಿದೆನಿಪ್ಪ ಬಾಷ್ಪಂ ಕಿಡುಗುಂ || ೫೪ ||

†ತೊಳೆವುದು ಕಡಲೆಯ [7]ಗಿಡುವಿನ |
[8]ಪುಳಿಯಿಂ ಕರಿಮೂತ್ರದಿಂದೆ [9]ತೊಯ್ದ ಱವೆಯೊಳಂ ||
ತೊಳೆ[10]ದೊರಸಿ ಕರಿಯ ಲಂಡಂ |
ಗಳನಿಕ್ಕಿಯೆ [11]ಕಟ್ಟೆ ಬಾಷ್ಪಮೆಲ್ಲಂ ಕಿಡುಗುಂ || ೫೫ ||

ಅಂಕೋಲೆಯ [12]ಮೂಲಂ ನಿ |
ಶ್ಶಂಕಂ ಜಂಬೀರರಸ ನೃಮೂತ್ರಸಮೇತಂ ||
ಭೋಂಕೆನಲರೆದುರೆ(ಂ) [13]ತೊಳೆಯಲ್ |
ತಾಂ ಕಳೆಗುಂ ಸಕಲಬಾಷ್ಪದತ್ಯುಗ್ರತೆಯಂ || ೫೬ ||

ಚಂ|| ಮಿಟಮಿಟನೀಕ್ಷಿಸುತ್ತಿರದೆ ಕಳ್ಳಿಯ[14]ಪಾಲಿನೊಳಿಟ್ಟು ಮರ್ದಿಸಿಂ |
ಕುಟಜದ ಮೂಲಮಂ ತೊಳೆವುದಂತದಱಿಂ ಪಗೆಯಸ್ತ್ರಧಾರೆಯಿಂ ||
[15]ಘಟಯಿಸಿದೇಱ ಬಾಯನದಱಿಂ ಚತುರುತ್ತರಮುಪ್ಪತೀತಿಯು |
ತ್ಕಟತರಬಾಷ್ಪಭೇದವಿಷಮೆಯ್ದೆ ಕರಂ ಕಿಡುಗುಂ ಖಗೋತ್ತಮಾ || ೫೭ ||

1. ನರರೆಕೊ (ಕ) 2. ಪಗ್ರ (ಕ) 3. ಮಿವರಲೊಂದೊಂದಂ (ಗ) 4. ಸದೆಮೇಣ್ ತೊಳೆಯಲ್ ತನುವಿಂ (ಕ) 5. ಮಿವನ ಬಾಷ್ಪಮಾದೊಡ (ಕ) ತೆಱದ ಬಾಷ್ಪದವಿಷಮಂ (ಗ) 6. ಘಾಯದ ತೊಳವುದು....ಧಿಂದೆ ಅರೆವುದು.— ಹುಳಿಯಲಿಬ್ಬರಸರಿದೆನಿಪ್ಪ (ಗ) 7. ಗಿಡವಿನ (ಗ) 8. ಪುಳಿನ ಪುಳಿ ಇದಂ—ತಳೆದೊರಸಿ (ಕ) ಪುಳಿಯಿಂನರಮೂ (ಘ) 9. ತೊಯಿದರುವೆಯದಂ (ಗ) 10. ದರಸಿ (ಗ) 11. ಬಟ್ಟೆಯ ಬಾಷ್ಪಮೆಲ್ಲಂಕಿಡುಗುಂ (ಗ) 12. ಮೂಲಂ (ಗ) ಬೇರಂ (ಘ) 13. ತೊಳೆಯಲ್ ಕಳೆಗುಂ ಸಕಳಬಾಷ್ಪಂ ದುಗ್ರತೆಯ (ಕ) ತೊಳೆಯಲ್ಕಂ ಬಾಷ್ಪದುಗ್ರೋಗ್ರತೆಯಂ (ಗ) 14. ಪಾಲೊಳಗಿಂಟು (ಘ) 15, ಘಟಯಿಸದೇರಬಾಯನದರಿಂ—ಮುಪ್ಪಸ್ಥಿತಿಯುತ್ಕಟ ತಮಾಲಬಾಷ್ಪ(ಗ) ಘಟೆಅಬಾಯನದಱಿಂ— ಮುಪ್ಪಸೀತಿ ಯುತ್ಕಟತನಬಾಷ್ಪ (ಕ)

* (ಗ) ಪ್ರತಿಯಲ್ಲಿಲ್ಲ.

† ಈ ಕಂದವೂ ಇದರ ಹಿಂದಣ ಕಂದವೂ (ಗ) ಪ್ರತಿಯಲ್ಲಿ ೫೪-ನೆಯ ವೃತ್ತವಾದ ಬಳಿಕ ಬರೆದಿದೆ.

ಚಂ|| [1]ಕುರುಟಿಗೆ ಹಾರಿವಾಳದ ರಸಂಗಳೊ[2]ಳಾಲದ ಪಾಲನಿಂಬಿನಿಂ |
[3]ಬೆರಸಿಡು ತಾಮ್ರನಾಳಿಯೊಳೆ ತುಂಬದಱಿಂದೊರಸುತ್ತೆ ಪುಣ್ಣುಮಂ |
ಭರದೊಳವೆಲ್ಲಮಂ ತೊಳೆಯಲಸ್ತ್ರ[4]ದೊಳೂಡಿದನೇಕಬಾಷ್ಪಮಂ |
ಪರಿಹರಿಕುಂ ನರಂ ಸುಖದೆ ಬಾೞ್ಗುಮಿವುಂ ವಿಭುಮಂಗನುಕ್ತಿಯಿಂ || ೫೮ ||

ಮ|| ಇದು ಬಾಷ್ಪಂಗಳ ಭೇದಮಿಂತಿದು ಚಿಕಿತ್ಸಾಸಾರಭೇದಂಗಳೆಂ |
ಬುದನೆಲ್ಲಂದದೆ ಭಾವಿಸಿಂತು ನೆಱೆ[3] ಪೇೞ್ದಂ ಸರ್ವವಿದ್ಯಾಬ್ಧಿಮ ||
ಧ್ಯದೊಳಿಷ್ಟಾರ್ಥಫಲಪ್ರ[5]ದಾಯಿ ಯೆನಿಸಿರ್ದಾ ಪಾರಿಜಾತಂ ದಯಾ |
ಸ್ಪದಮಂಗಂ ಮುಗುಳೀಪುರಪ್ರಭು ಲಸಚ್ಛ್ರೀಸಂಗಮಂಗಾತ್ಮಜ(ಕ)ಂ || ೫೯ ||*

— ಗದ್ಯ —

ಇದು

ಸಕಲವಿದಮಲ ಜಿನೇಂದ್ರೋಕ್ತಸಿದ್ಧಾಂತಪಯಃಪಯೋನಿಧಿಪಾರಗ

ಶ್ರೀಪೂಜ್ಯ ಪಾದಮುನೀಂದ್ರ ಚಾರುಚರಣಾರವಿಂದ

ಗಂಧಗುಣಾನಂದಿತಮಾನಸಂ

ಶ್ರೀಮದಖಿಲಕಲಾಗವೋತ್ತುಂಗ

ಮಂಗವಿಭು

ವಿರಚಿತಮಪ್ಪ

## ಖಗೇಂದ್ರ ಮಣಿದರ್ಪಣದೊಳ್

ಚತುರುತ್ತರಾಶೀತಿ[6] ಬಾಷ್ಪ(ಷ್ಟ)ಚಿಕಿತ್ಸಾವಿವರಣಂ

ಪಂಚದಶಂ.

(ಮಂಗಳಮಹಾಶ್ರೀ.)

---

1. ಕುರುಟಿಗೆಯ ಹಾರಿವಾಣ (ಗ) 2. ಲಾಲದ(ಗ) ರಾಲದ(ಕ) 3. ಬೆರಸಿದು ತಾಮ್ರನಾಳಿಕೆಯೊಳ್ ತುಂಬಿದಱಿಂ ದೊರಸುತ್ತ (ಕ) 4. ದಲೂಡಿದ (ಕ) ದೆಲ್ಲೂಡಿ (ಗ) 5. ದಾಯಿರೆ ಮೆನಿಸಿರ್ದಾ. 6. ಬಾಷ್ಪಚಿಕಿತ್ಸಾವಿವರಣಂನಾಮ ಪಂಚದಶಾಶ್ವಾಸಂ (ಗ) ತ್ಸಾವಿವರಂ ಪಂಚದಶಾಧಿಕಾರಂ (ಕ)

* ಇಲ್ಲಿಯೂ ಮಾಲಿನೀವೃತ್ತವಿಲ್ಲ.

# ಷೋಡಶಾಧಿಕಾರಂ

### ಸಮಸ್ತನಿರ್ವಿಷಚಿಕಿತ್ಸಾಪ್ರಕರಣಂ

### ಸಂಕೀರ್ಣಾಧಿಕಾರಂ.

ಕಂ|| *ಶ್ರೀರತ್ನತ್ರಯ [1]ವಿನುತಾ |
ಧಾರಂ[ಸು]ರ ರಾಜವಂದ್ಯನೆಮಗೀಗೆ ಮದೀ ||
ಯಾರೋಗ್ಯಮನೆ [2]ಮನೋಹರ |
ದೂರಂ ಶು(ಸಿ)ದ್ಧೋಪಯೋಗಮಂ ವೀರಜಿನಂ || ೧ ||

*ಶಾ|| ನಾಗಾಕೃಷ್ಟಿಯುಮಂ ಸಹಾಗಮನಮಂ ತತ್ಪ್ರೇಷಣಾಖ್ಯೋ(ಸ್ಯೋ)ದ್ಯದು |
ದ್ಯೋಗಾಲೋಕನ ಬಂಧನಂಗ[3]ಳನಮೋಘಂ ಕುಂಡಲೀಕೃತ್ಯನಿ ||
ರ್ವೇಗತ್ವಂ[4] ಘಟಸು(ಸಂ)ಪ್ರವೇಶನವರೇಖಾಮಂತ್ರಮಂ ತದ್ವಿಷೋ |
ದ್ಯೋಗೋದ್ಯೋಗಸುರಾವಧೂತ ವಿವಿಷತ್ವಾ(ತ್ವಾ)ದ್ಯಂಗಳಂ ಮತ್ತಮು(ಮ)ಂ || ೨ ||

ಕಂ|| *ನಾಗೋಚ್ಚಾಟನಮುಂ ನಯ |
ಯೋಗದೆ ಸಂಕೀರ್ಣದೊಳ್ ಪರಿಕಿಸಿಯೆ ಪೇ(ೞ್ವೆ)ೞ್ದಂ ||
[5]ರಾಗದೊಳಂ ಮಂಗಬುಧಂ |
ಯೋಗಾಮೃತಜಲಧಿ ಪೂಜ್ಯಪಾದರ ಮತದಿಂ || ೩ ||

†ಮ||ಸ್ರ|| ಕವಳಂ ಕ(ಗ)ಂಡೂಷೆಯುಂ ತದ್ವಿಹಿತಮೆನಿಪ ಭೇದಂ ದಲಾ ಪು |
ಣ್ಗವದ ಪ್ರಕ್ಷಾಳನಂ ಭೇಷಜವಿಧಿ ಕರಿಯೆಂಬಿಂತಿವಂ ಪೇೞ್ದಿನಾಂ ಪ ||
ತ್ತು ವಿಶೇಷಾರ್ಥಂಗಳಿಂದಂ ಜನಹಿತಮೆನೆ ಸಂಕೀರ್ಣದೊಳ್ ಕ್ಷೀರವಾರಾ |
ಶಿವರಂ ಧರ್ಮಾರ್ಥಕಾಮಂಗಳನೆ ಪಡೆವ ಪುಣ್ಯಾತ್ಮಕರ್ಗಿನ್ನವೋಘಂ || ೪ ||

ಚಂ|| ‡ಅ(ನಿ)ಯುತಮೆನಿಪ್ಪ ಮಂತ್ರಜಪಲಕ್ಷದೆ ಸಿದ್ಧಿಸುಗುಂ ದಶಾಂಗ(ಶ)ಹೋ |
ಮಯಜನದಿಂ ಸಹಾಗಮನಮುಂ ಫಣಿಯೊಪ್ಪುವುದೆಂದನಂತಜಿ ||
ನ್ಮಯಜಿನಸಿದ್ಧಸೂರಿ [ವರ]ದೇಶಿಕ ಸಾಧುಪದಾಬ್ಜಭೃಂಗನ[7] |
ದ್ವಯನಮಹಾವಿಲಾಸ [8]ಪ[ರ]ಮಂಗಮಹಾವಿಭು ಪೇೞ್ದ ಮಾೞ್ಕಿಯಿಂ || ೫ ||

ಕಂ|| [9]ಪ್ರಣ[ವಾದಿ] ಸ್ವಾಹಾಂತಂ |
ಭಣಿತಂ ತಾಂ ಚಿರಿಚಿರಿಪ್ರಮುಖ ಮಂತ್ರಮಿದಂ ||
ಫಣಿ[10]ಪಾಕೃಷ್ಟಿಗೆ [11]ಮಂತ್ರ[ಮ] |
[ನೆ]ಣಿಸುಗೆ [12]ತತ್ಪ್ರಮಿತ ಜಪಮನಿದು ಸಿದ್ಧಾಂತಂ || ೬ ||

---

1. ವಿನುಕಾರ ಧುರರಾಜ (ಗ) ವಿನುತಾಧಾರರಮಾರಾಜಿ 2. ಮನೋಹರಂ ದೂರಂ—ವಿರಹಾಣ್ (ಗ) - ವೀರಮಹಾ (ಘ) 3. ಗಳವೋಘಂ (ಗ) 4. ತ್ವಘಂಟು (ಗ) 5. ದಾ(ಭಾ)ಗದೊಳಂ (ಗ) 6. ಜಲದಿಂ (ಗ) 7. ನದೆಯುನಮಹಂ (ಕ) 8. ಪದ (ಕ) 9. ಪ್ರಣಮದೆ ಸ್ವಾಹಾಂತ್ಯಂ ವಣಿತಂತಾಂ ಚಿರಿಪ್ರಮುಖ (ಖ) ಪ್ರಣಸ್ವಾಹಾ ತ್ಯಂಬಣಿಕಂ ಚೀರಿಚೀರಿ 10. ವಾಕೃಷ್ಟಿಗೆ(ಕ)(ಗ) 11. ಮಂತ್ರಯೆಣಿಸುಗೆ (ಕ) 12. ತತ್ಪ್ರಣಿತ (ಕ)

* ಈ ಮೂರುಪದ್ಯಗಳೂ (ಕ) (ಖ) ಪ್ರತಿಗಳಲ್ಲಿಲ್ಲ.

† ಇದು (ಘ) ಪ್ರತಿಯಲ್ಲಿ ಮಾತ್ರ ಇದೆ.

‡ ನಿಯತ (ಘ) ಇದು (ಗ) ಪ್ರತಿಯಲ್ಲಿಲ್ಲ.

ತನ್ಮಂತ್ರೋದ್ಧಾರಂ—

ಮಂತ್ರಂ—ಓಂ[1]ಚಿರಿಚಿರಿದಿ(ಯಿ)ಂದ್ರವಾರುಣಿ [2]ಏಹಿ ಕಡ್ಡ(ಕುಡ್ಡ)ಸ್ವಾಹಾ ||

ವ|| ಈ ಮಂತ್ರದಿಂ (ಹತ್ತುಸಾವಿರ ಆಹುತಿಯಿಂ) [3]ತ್ರಿಮಧು ಗು[ಗ್ಗು]ಳದಿಂ ಮಾಡಲು (ಹತ್ತುಸಾವಿರ ಆಹುತಿಯಿಂ) ಈ ಮಂತ್ರಸಿದ್ಧಿಯದಕ್ಕುಂ—

**ಇದು ನಾಗಾಕೃಷ್ಟಿಮಂತ್ರಂ.**

### ಇನ್ನು ನಾಗಪ್ರೇಷಣ[4] ಮಂತ್ರ ವಿಧಾನಂ.

ಕಂ|| ಜಾತಿಫಣಿ[5]ಪ್ರೇಷಣವಹು |
ದೇತೊದಳಿಂ [6]ಹವನಮುಂ ದಶಾಂಶಂ ಜಾಪ್ಯಮ ||
ಶೀತಿಸಹಸ್ರಂ ಕರವೀ |
ರಾತಿಶಯಾರುಣ[7]ಲತಾಂತದಿಂ ಸಿದ್ಧಿಸುಗುಂ || ೭ ||

ವ|| ನಾಗಪ್ರೇಷಣ ಮಂತ್ರೋದ್ಧಾರಂ—

ಮಂತ್ರಂ—ಓಂ ನಮೋನಾಗಪಿಶಾಚಿ ರಕ್ತಾಕ್ಷಿಭ್ರುಕುಟಿಮುಖಿ [8]ಉಚ್ಛಿಷ್ಟ ದೀಪ್ತತೇಜಸ(?)[ಉಚ್ಛಿಷ್ಟಾಧಿಪತೇಽಂಜಸಾ] ಏಹಿ ಭಗವತಿ(ತೇ) ಹೂಂ ಫಟ್ ಸ್ವಾಹಾ—

ವ|| ಇದು ನಾಗಪ್ರೇಷಣಮಂತ್ರಮಿದಱಿಂದಂ—

ಮ|| ಸ್ರ||*ಸಿತದುಗ್ಧಾಜ್ಯಪ್ರಯುಕ್ತಂಗಳೊಳಿ [ಹ]ವನಮಂ ಮಾಳ್ಪುದೊಳ್ಪುಳ್ಳ ವಲ್ಮೀ |
ಕ ತದೀಯ(ಯಾ)ಸ್ಥಾನಸಾನ್ನಿಧ್ಯದೊಳೆ ವಿನಯದಿಂ [ದಂ] ಪ್ರಸೂನಂಗ[9]ಳಿಂ ಸಾ ||
ಧಿತಮಂತ್ರಂಮಾಡಿ ನಾಗಾಜ್ಞೆಯನು[10]ರಗನುಮಂ ತಿದ್ದಿ ತಾಂ ಪ್ರೇಷಿಸಲ್ಕಾ |
ಪ್ರತಿಮಂ [ತ ತ್ತದ್ವಿ] ಧಾನಪ್ರಥಿತವಚನಮಂ ಸೂಚಿಪೆಂ ಶ್ಲೋಕದಿಂದಂ || ೮ ||

ವ|| ಇದು ನಾಗಪ್ರೇಷಣಮಂತ್ರಮಿದಱಿಂದಂ—

*ಶ್ಲೋಕ|| ಪ್ರೇಷಿ[11]ತೋ(ತಃ)ಹ(ಸ)ವನೇನೇತಿ ಮಾ ಕಸ್ಯಾಪಿ ಪುರೋ ವದೇ[ತ್] ||
ಅನ್ಯಮಂತ್ರೇಣ ಮಾ[12]ಗಚ್ಛ ಮಾನಯಂ(?)ಭಕ್ಷಯಾಮುಖಂ(?) ||—

ವ|| ಎಂದು ಬಂದ ಸರ್ಪಂಗೆ ಆಜ್ಞಾಪಿಸಿ ಕಳುಹುವುದು.

**ಇದು ನಾಗಪ್ರೇಷಣವಿಧಾನಂ.**

1. ಓಂ ಚಿರಿದಿಂದ್ರವರಣಿ (ಕ) 2. ಎಹಿ ಕಡ್ಡ (ಕ) ಯೋಹಿಕಡ್ಡ (ಗ) 3. ಮದುಗುಳ್ಳದಿಂ ಹತ್ತ (ಕ) 4. ಪ್ರವೇಶಣ (ನ) (ಕ) (ಗ) 5. ಪ್ರವೇಶಣ ವಹುದೀತೊಳಿಂ (ಕ) 6. ಹಹನಮುಂ ದಶಾಂದ್ರ ಬಾಷ್ಪಮಸಂ|| ತತಿ (ಗ) 7. ತಾಂತಸಂಯುಕ್ತಮೆನಲ್ (ಗ) ಸುಪುಷ್ಪಸಂಯುಕ್ತಮೆನಲ್ (ಘ) ಉಚ್ಚಿಷ್ಟದಿಷ್ಟತೇಜಸೇಯೇಹಿ (ಘ) 8. ಉಚ್ಛಿಷ್ಟ ದಿಪತೇಜಸ ಏಹಿ(ಕ) ಯದಿಂಪ್ರಾಪ್ರಸೂನಂ (ಘ) 9. ಗಳಿಸಾಂ(ಕ) 10. ನುರಗನಂತಿದ್ದು ತಾಂಪ್ರೇಸಿಸಲ್ಕಾ ಪ್ರತಿಮಂ ತತದಿದಾನ—ಶೋಕದಿಂಹಂ (ಕ) 11. ತೋಹವನೆ ಲೆತಿಮಾಕಸ್ಯಾಪಿ ಪ್ರರೋವದೇತ್ (ಕ) 12. ಮಾ (ಗ)

* ಇದು (ಗ) ಪ್ರತಿಯಲ್ಲಿಲ್ಲ.



### ಇನ್ನು ನಾಗಸಹಾಗಮನವಿಧಾನಂ.

ಕಂ|| ತೇಜೋಂ(ಜ)ನಮಃ ಪ್ರಮುಖಮಂ |
ರಾಜಿತಮಂತ್ರಮನೆ ಪಠಿಸುತುಂ ಪೋಗಲ್ ನಿ ||
ರ್ವ್ಯಾಜಮವನೊಡನೆ ಬರ್ಕುಂ |
ಯೋಜಿಸಿ ತಾಂ "ಯಾಹಿ" ಎಂದೊಡಹಿ ತಾಂ ಮರಳ್ಗುಂ || ೯ ||

ತನ್ಮಂತ್ರೋದ್ಧಾರಂ—

ಮಂತ್ರಂ—ಓಂ [2]ನಮಃ(ಮೋ) ಸಹಸ್ರಜಿಹ್ವೆ [3]ಕುಮುದ್ಭಾಸಿನಿ (ಕೋದ್ವಾಸಿನಿ) ದೀರ್ಘಕೇಶಿನಿ ಉಚ್ಛಿಷ್ಟ ಭಕ್ಷಿಣಿ ಸ್ವಾಹಾ—ಏಹಿ (ಏಹಿ)

**ಇದು ನಾಗಸಹಾಗಮನಂ.**

ಯಾಹಿ—ಎಂದು ಯೋಜಿಸಿ ಮಂತ್ರಿಸೆ [4]ಮರಳಿಪೋಕುಂ (ಹೋಗುವುದು)

ಮಂತ್ರಂ—ಓಂ, ಹ್ರೀಂ, ಶ್ರೀಂ, [5]ಗ್ಲೌಂ, (ಹೂಂ,) ಕ್ಷೂಂ, ಠ, (ಃ) (ಠಃ) ಫಣಿಮುಖ(ಂ) (ಸ್ತಭಯ) ಸ್ತಂಭಯ.

ಎಂಬೀ ಮಂತ್ರದಿಂ [6]ಸರ್ಪಮುಖ ಸ್ತಂಭನಮಕ್ಕುಂ.

ಮಂತ್ರಂ—[7]ಹ್ರೂ(ಹೂ)ಂ, ಕ್ರೂ(ಕ್ಷೂ)ಂ, ಠ, (ಃ) (ಠಃ) ಸ್ತಂಭಯ.

ಎಂಬೀಮಂತ್ರದಿಂ[8] ಸರ್ಪಗಮನ (ಮುಖ)ಸ್ತಂಭನಂ.

ಮಂತ್ರಂ—ಹ್ರಾ(ಹಾ)ಂ, ಕ್ರೂ(ಕ್ಷೂ)ಂ, [9]ಠ (ಃ) (ಠಃ)

ಎಂಬೀಮಂತ್ರದಿಂ[10]ಸರ್ಪಂಗಳ ದೃಷ್ಟಿಯಂ ಕಟ್ಟುವುದು.

ಮಂತ್ರಂ—ಹಾ, (ಹಾಂ) ಠ (ಃ) (ಠಃ)-

[11]ಎಂಬೀಮಂತ್ರದಿಂ ಸರ್ಪದೃಷ್ಟಿಮುಖಗತಿಸ್ತಂಭನಂ, ಇಲ್ಲಿ ಪೋಗೆನೆ ಮಾಣ್ಗುಂ.

### ಇನ್ನು ಕುಂಡಲೀಕರಣ ವಿಧಾನಂ,

ಕಂ|| [12]ಸ್ವಯಮೋ(ಮ)ಂ ಸುವರ್ಣರೇಖಾ |
ಮಯಮಂ [13]ಬರೆದಿಂ ಬಱಿಕ್ಕಮದಱಗ್ರದೊಳಂ ||
[14]ನಯದಿಂ [15]"ಗರುಡಾಜ್ಞಾಪಯ |
ತಿ"ಯೆಂಬುದುಂ ಕೂಡೆ ಸೂಚಿತಂ ಸ್ವಾಹಾಂತಂ || ೧೦ ||

1. ತೇಜೋನಮಃ (ಗ) ತೇಜವಮಃ ಪ್ರಮುಖಮುಮಂ (ಕ) 2. ಓಂ ನಮೋಮಃ (ಕ) ನಮ ಸಹಸ್ರ (ಗ) 3. ಕಮುದ್ಭಾ (ಕ) 4. ಮರಗಿ (ಗ) 5. ಗ್ಲಾಂ (ಕ) 6. ಈ ಮಂತ್ರದಿಂ ಪಣಿಮುಖ ಸ್ತಂಭನ (ಗ) 7. ಹೂಂ; 'ಕ' ಮಾತೃಕೆಯಲ್ಲಿ 'ಸ್ತಂಭಯ' ಶಬ್ದವಿಲ್ಲ. 8. ಈ ಮಂತ್ರ ಅಹಿ ಗಮನ ಸ್ತಂಭ (ಗ) 9. ಹಾಂ, ಕ್ಷ್ಮಿ ಕಂಠ (ಕ) 10. ದಲ್ಲಿ (ಗ) 11. ಈ ಮಂತ್ರ ಸರ್ಪದ ಮುಖಗತಿದೃಷ್ಟಿ ಸ್ತಂಭನಮಕ್ಕುಂ, ಹಾಗೆನೆ ಹೋಹುದು. 12. ಸ್ವಯಮೊಂದು ಸುವರ್ಣಾ (ಗ) 13. ಬರದಿ (ಕ) 14. ತ ಮೆಂದಗ್ರದೊಳ್ ಕುರುವೆಂದು ಪದನಯದಿಂ (ಕ) 15. ಗಾಡಾಜ್ಞಾಪದಿಯೆಂಬುದುಂ (ಗ) ಗಡಾಜ್ಞಾಪಯತಿ ಯೆಂಬಿದುಂ (ಕ)

[1]ತ್ರಿವಿದಿ॥ ಬರೆ(ವು)ದು ಕುಂಡಲೀಕರಣ [ಮನ]ಗ್ರದೊಳ್ |
ಕುರು(ಕುರು)ಯೆಂದು ಪದಮನಱಿದಿಟ್ಟು ಮಂತ್ರದ |
ಚ್ಚರಿಯ ನೀಕ್ಷಿಪುದು ಬುಧರೆಯ್ದೆ ॥ ೧೧ ॥

ತನ್ಮಂತ್ರೋದ್ಧಾರಂ—

ಮಂತ್ರಂ—ಓಂ ಸುವರ್ಣರೇಖಾಯ ಗರುಡಾಜ್ಞಾಪಯತಿ ಕುಂಡಲೀಕರಣಂ ಕುರು(ಕುರು)ಸ್ವಾಹಾ—

ಇದು ನಾಗಕುಂ(ಮು)ಂಡಲೀಕರಣಮಂತ್ರಂ.

ಬಿಟ್ಟವೆನೆ ಹೋಹುದು.

### *ಇನ್ನು ಫಣಿಘುಟಿಪ್ರವೇಶಮಂತ್ರಂ.

ಕಂ॥ *ವಿಲಸತ್ಪ್ರಣವಪುರಸ್ಸರ |
ಲಲಲಲ[2] ಲಲ(ಲಾ)ಯೆಂಬಿವಂ ಬಱಿಕ್ಕಂ ಪಠಿಸಲ್ ||
ನಿಲಲಱಿಯದೆ ಘಟದೊಳ(ಮಾ)ನಾ |
ಕುಲದಿಂ ಪೋಗು[3]ಗುಮಹೀಶನಾದೊಡಮುಚಿರಂ ॥ ೧೨ ॥

ತನ್ಮಂತ್ರೋದ್ಧಾರಂ—

ಮಂತ್ರಂ—ಓಂ ಲಲಲಲ ([4]ಲಲ)ಸ್ವಾಹಾ.

ಇದು ಫಣಿಘುಟಿಪ್ರವೇಶಮಂತ್ರಂ.

### *ಇನ್ನು ರೇಖಾಮಂತ್ರಂ.

[5]ಕಂ॥ ಬರೆದೋಂ ಹ್ರಾಂ ಹ್ರೀಂ ಎನುತುಂ |
ಗರುಡಾಜ್ಞಾ ಠಠ ಯೆನುತ್ತೆ ಮತ್ತಂತದಱಿಂ ||
ಗರುಡನ ಮುದ್ರೆಯನಾಗಿಸಿ |
ಬರೆವುದು ಭೂರೇಖೆಯಂ ಫಣೀಶಂ ಮಣಿಗುಂ ॥ ೧೩ ॥

[ತನ್ಮಂತ್ರೋದ್ಧಾರಂ—

ಮಂತ್ರಂ—ಓಂ, ಹ್ರಾಂ, ಹ್ರೀಂ. ಗರುಡಾಜ್ಞಾ ಠ ಠ ಠ ಠ.]

[6]ಇದಱಿಂ ಗರುಡನ ಮುದ್ರೆಯಂ [7]ಹಿಡಿದು ಗೆರೆಯಂ ಬರೆಯೆ ಸರ್ಪಂ ದಾಂಟದು. ಬಿಟ್ಟವೆನೆ ಹೋಹುದು.

---

1. ಶ್ರೀಪದಿ (ಗ), ತ್ರಿಪದಿ (ಘ) ತ್ರಿವಿಧಿ - ಬರವುದು ಕುಂಡದ ತಿಖರಣಮನಱಿದಿಟ್ಟು ಮಂತ್ರದಚ್ಚರಿಯ ನೀಕ್ಷಿಪುದೊದಾರೆಯ್ದೆ (ಕ) ಬರೆದು ಕುಂಡಲೀಕರಣ ಸುಂದದರಗ್ರದೊಳ್ | ಕುರುಕುರು ಮಂತ್ರವಿಟ್ಟು ನಲವಿಂದೆ ಕುಂಡಲೀಕರಣದಚ್ಚರಿಯ (ಘ) 2. ಲಾ ಯೆಂಬಿವಂ (ಕ) 3. ಪುಗುಗುಂ ಫಣೀಶನಾದೊಡವ (ಕ) 4. ಲಾ ಸ್ವಾಹಾ (ಕ) ಲಾಲಾ ಇದು ಫಣಿಘುಟ. 5. ಬರೆದೋಂ ಹ್ರಾಂ ಹ್ರುರುಮೆನುತಂ। ಗರುಡಾಜ್ಞಾ ಠ ಠ. 6. ಇವಱಿಂ (ಕ) 7. ಹಿಡಿದು ಬರೆಯೆ (ಕ)

* ಇದು (ಗ) ಪ್ರತಿಯಲ್ಲಿಲ್ಲ. ಪ್ರವೇಶಕರಣಂ (ಘ)



ಇದು ರೇಖಾಮಂತ್ರಂ.

ಇಲ್ಲಿಂದಮೇಲೆ ಮೂಲ[1]ವಿಷದಾನಮುಂ ಪೇೞಲ್ಪಡುಗುಂ

ಕಂ॥ *ಬರೆದೋಂ ಕ್ರೋಂ [2]ಪ್ರಾಂ ತ್ರುಂ ಠಃ |
ಸ್ವರೂಪದಿಂ ಮೇಱಿವ ಮಂತ್ರಮಂ ಜಪಿಸಿ ಸ್ವಾ ||
ವರವಿಷಮಂ ಹೂಂಕಾರ(ಂ) |
ಕರದೊಳಗಿಟ್ಟಂ ಸಮಂತಭೀಕ್ಷಿಸಿ ರವಿಯಂ ॥ ೧೪ ॥

[3]ಪೂರಕಯೋಗದೊಳಿಕ್ಕಿದ |
ದಾರುಣತರ ವಿಷಮು[4]ನುಂಡೊಡಂ ತದ್ವಿಷದಾ |
ಕ್ರೂರತೆ ಯೞಿಗುಮ[5]ದೆಂದುಂ |
ದೂರೀಕೃತಕುಮತಮಂಗರಾಜನ ಮತದಿಂ ॥ ೧೫ ॥

ವ॥ ತನ್ನ ಹಸ್ತದೊಳ್ ಹೂಂಕಾರಮಂ ಬರೆದು ಆದಱ ಮಧ್ಯದೊಳೀಮಂತ್ರಮಂ ಬರೆದು ಆದಱ ಮೇಲೆ ಪರರಿಕ್ಕಿದ ಹಾಳಾಹಾಳವಿಷಮನಿಕ್ಕಿ ಯಾ ಮಂತ್ರದಿಂ[6] ಜಪಿಸುತ್ತಂ ಸೂರ್ಯಾವಲೋಕನಂಗೆಯ್ದು ಪೂರಕಯೋಗದಿಂ ಭಕ್ಷಿಸೆ ನಿರ್ವಿಷಂ.

ತನ್ಮಂತ್ರೋದ್ಧಾರಂ—

ಮಂತ್ರಂ—ಓಂ, ಕ್ರೋಂ, ಪ್ರಾಂ, (ಹ್ರೋಂ) ತ್ರುಂ, (ರುಂ) ಠಃ.

[7]ಇದು ವಿಷಭಕ್ಷಣಮಂತ್ರಂ.

ಕಂ॥ ಪ್ರತಿಪಕ್ಷಂಗೀವುದು [8]ಸಂ |
ಚಿತವಿಷಮಂ ನೀಲವರ್ಣಮಂ ಧ್ಯಾನಿಸಿ ಮಂ ||
ತ್ರಿತಮಂ ಗ್ಲೌ [9]ಗ್ಲಾ ಮೆಂದೊ |
ಚ್ಚತದಿಂ[ದಾ]ವಿಷಮನುಂಡೊಡಂ ವಿಷಮೞಿಗುಂ || ॥ ೧೬ ॥

ವ॥ ಇಂತು ಪ್ರತಿಪಕ್ಷಂಗೀವುತ್ತುಂ ನೀಲಧ್ಯಾನಮಂ ಭಾವಿಸೆ ವಿಷಾದಾನ ಮಂತ್ರಂ.

ಕಂ॥ ಕ್ಷಾರದ್ವಯ ದೊಡನಂಗುರ |
ಚೇರಂ ತಾಂ ಮೆ[ಲ್ದು]ವೈರಿಯಿಕ್ಕಿದ ವಿಷಮಂ ||
ಧೀರಂ ತಿನೆ 'ನಿರ್ವಿಷ' ಎಂ |
ದಾರಾಧ್ಯರ್ ದಿವ್ಯಮುನಿಗಳೆಲ್ಲರ್ ಪೇೞ್ಗಂ ॥ ೧೭ ॥

---

1. ವಿಷಮುಂ ಪೇಳಲ್ಪಟ್ಟುದು (ಗ) 2. ಹ್ರೋಂ ರುಂ (ಘ) 3. ಸೂರತ (ಗ) 4. ನುಂಡಡಂ (ಗ) ನುಂಡರಂ (ಖ) 5. ದೆಂದಂ (ಗ) 6. ದಿಂ ಸೂರ್ಯನಅವಲೋಕ—ನಿರ್ವಿಷಂ ತನ್ಮಂತ್ರಂ (ಗ) 7. ಇತಿವಿಷ (ಕ) 8. ಗೀಜ (ಘ) 9. ಗ್ರೋ ಘ್ವಾ ಮಂತ್ರೋ। ದ್ಗತಮಂ ಫಿ ಫಿ ಯೆನುತ್ತಮಿಗದದು ವಧಿಕಂ ॥ ೧೭ ॥ (ಘ). ಹ್ರಾಂ ರಿಯಬೆಚ್ಚರದಿಂ ಮೊದಲೊಳಿಕ್ಕಿದ ರಣದೊಳಂತಾಂ ಬೆಚ್ಚರಿತಗರಮತದಿಂ ದೊಚ್ಚತದಿಂ ವಿಷಮನುಂಡೊಡಂ ವಿಷಮೞಿಗುಂ (ಕ); ಗ್ರಾಂ ಮಂತ್ರೋದ್ಗತಮಂ ಪೆಣೆವಿನುತ್ತ....ರಿಗೆ ವಿದಜ್ಞಾ (ಗ)

*

ಕಂ||[1] ಚೊಚ್ಚಿಲೆಳಹೋರಿಯರ(ರೆ)ಣಂ |
ಬೆಚ್ಚರದಿಂ ತಗರಮಂತದಂ ಸಂಯೋಗಿಸಿ ||
ಒಚ್ಚತದಿಂ ವಿಷಮಕ್ಕೊಂ |
ದಚ್ಚರಿಯೇ ಮಂಗರಾಜನನುಮತದಿಂದಂ || ೧೮ ||

*ಬಾದಿಸೆ ಫಲವೇಂ ಚೊಚ್ಚಿಲೊ |
ಳೀದಾಗಳೆ ಹೋರಿಯರ(ರೆ)ಣಮಂ ಪಾಲಿಂದಾ ||
ಸ್ವಾದಿಸಿ ಕುಡಿಯಲ್ಕೆಲ್ಲಾ |
[ಭೇದದ] ವಿಷಂಗಳಾಕ್ಷಣಮಿೞಗುಂ || ೧೯ ||

[2]ಬಿಂಕದೊಳೇಂ ಪಾವಿಂ ನಿ |
ಶ್ಯಂಕತೆಯಿಂ ಪಿಡಿಸಿಕೊಂಬೊಡಂ [3]ವೆಲುವೆಲೆಯಂ ||
ಟಂಕಣಮಂ ಬೆರಸಿ ತಿನಲ್ |
ತಾಂ ಕುಳಿಕಂ [4]ತಿಂದೊಡಂ ವಿಷಂ ಪ್ರಶಮಿಸುಗುಂ || ೨೦ ||

ತಿಂಬುದ[5]ಗುಳ್ ಶುಂಠಿಯುಮಂ |
ತಂಬುಲದೆಲೆಯೊಡನೆ[6]ಬಿಳಿಯಮಿಂತೆಸೆವ ಫಣಾ ||
ಡಂಬರದ ಪಾವು ಕೊಂಡೊ[7]ಡ |
ಮಿಂ ಬಾೞ್ಗುಮವಂ ಸರಸ್ವತೀಮುಖತಿಲಕಾ || ೨೧ ||

ರಕ್ತಕರವೀರಮೂಲಂ |
ವ್ಯಕ್ತಮೆನಲ್ [8]ತಿಂಬುದೆಸೆವ ತಂಬುಲದೊಳ್ ಪ್ರಾ ||
ಗುಕ್ತ ಕರವೀರ[9]ಮೂಲಮ |
ನುಕ್ತಂ ಫಣಿಕೊಂಡವರ್ಗೆ ನಿರ್ವಿಷಮಕ್ಕುಂ || ೨೨ ||

ತನ್ನಂ ಕಚ್ಚಿ[10]ದುದಂ ತಾಂ |
ಪನ್ನಗನಂ ಮಗುೞ್ದು ಕಚ್ಚೆ ನಿರ್ವಿಷಮಕ್ಕುಂ ||
ತನ್ನಂ ಪಿಡಿ[11]ದೆಡೆಯಂ ವಿ |
ಚ್ಛಿನ್ನಮೆನಲ್ಕಡಿದಿಡಲ್ಕೆ ಜಂಗಮವಿಷಮುಂ || ೨೩ ||

1. ....ರಿಯ ಬೆಚ್ಚರದಿಂ ವೊದಲೊಳಿಕ್ಕಿದ ರಣದೊಳಂ ತಾಂ ಬೆಜೆರೆ ತಗರಮದದಿಂ ದೊಚ್ಚತದಿಂ ವಿಷಮನುಂಡೊಡಂ ವಿಷಮೞಗುಂ (ಕ)
ಚೊಚ್ಚಿಲ ಹಸುವಿನ ಹೋರಿಯೆ | ಬೆಚ್ಚರದೊಳ್ ವೊದಲೊಳಿಕ್ಕಿದರೆಣದೊಳಂ ||
ಬೆಚ್ಚರೆ ತಗರಮದಿಂಬಿಂ | ದೊಚ್ಚತದಿಂ ವಿಷಮನುಂಡೊಡಂ ವಿಷಮಿೞಗುಂ || ೧೯ || (ಘ)
2. ಬಿರಕದೊಲೆಪಾವಿಂ (ಗ) ಬಿಂಕದೊಳೆಪಾವಿಂ (ಕ) 3. ಮೆಲೆವೆಲೆಯಂ (ಗ) 4. ತಿಂದದಡಂ ವಿಶಂ ಶಮನಿಸುಗುಂ (ಗ) 5. ದಗುಳಿ (ಗ) ದಗುಳು (ಕ) 6. ಸೀಳಿಯಮೇಲೆಂತೆಸೆವ (ಗ) 7. ಡೊಡಮೇಂ ಬಾಳ್ಗುಮಮಂ ಸರಸ್ವತಿಯ ಮಣಿಮುಕುರಾ (ಗ) ಡೊಡಮೆಂದುಂ ಬಾಳ್ಗುಂ ಮನುಜರ್ ಸರಸ್ವತೀಮುಖತಿಲಕಾ (ಕ) 8. ಬುದೆದತಂ (ಕ) 9. ಮೂಲಮುಮತ್ತಂ (ಕ) 1(. ಡೊಡಂ (ಗ) 11. ದಡೆಯುಂ....ನಲ್ಕೊಡಿಡಡಕ್ಕೆ ಜಂಗಮವಿಷಂ (ಗ)

* (ಗ) ಪ್ರತಿಯಲ್ಲಿಲ್ಲ.



ಕಂ|| [1]ಪುಱು ಮುಟ್ಟಲ್ ಹೆಮ್ಮಿಟಲ(ದ)ವ |
ಬಿಳಿದೆನಿಸುವ ಗುಂಜಿಯೆಸೆವ ಮೂಲಮಿವಂ ತಾಂ ||
ಕಱಿಯಿಂ ಲೇಪಿಸಿ [2]ಕರ್ಚಿಸೆ |
ಕೊಱ[3]ಪಾವಿಂ ನಿರ್ವಿಷಂ ಶ್ರುತಾಬ್ಧಿಶಶಾಂಕಾ || ೨೪ ||

ಸೂತಮಪಾಮಾರ್ಗರಸಂ |
ಖ್ಯಾತಂಗಳಿವೊಂದಲೊಡನೆ ಮರ್ದಿಸೆ [3]ತನುವಿಂ ||
ಗೋತಹಿಯಂ ಪಿಡಿಸಲ್(ತಾಂ) |
ಮಾತೇಂ ವಿಷವೇಱದೆಂದನುಭಯಕವೀಶಂ || ೨೫ ||

*ಕಾಡವರೆ ಮಣಲು ಸುಣ್ಣಮಿ |
ವೀಡಿತವಜ್ರೋಪಮಾನ ತಿವುರೆನಿಸಿರ್ಕುಂ ||
ಮಾಡಿದ ಸುಣ್ಣದೊಳಂ ಮಳ |
ಲೂಡಿರೆ ರವಿದುಗ್ಧಮಿವಱ ತಿವುರೆ ವಿಷಘ್ನಂ || ೨೬ ||

*[4]ನವಿಲುಂ ಮುಂಗುರಿ [5]ಪರ್ದಿಂ |
ಬಿವಱುಗುರ್ಗಳನಿಕ್ಕಿ ಮತ್ತೆ ಹೆದ್ದುಂಬೆಯ ಬೇರ್ ||
[6]ಪವಣಿಸೆ ಕಿಱುದೇಗುವನಂ |
ತೆವರಂ ಪಾತಾಳಗರುಡನಂ [7]ಕೂಡಿದು ನೀಂ || ೨೭ ||

[8]ಯಂತ್ರಂ— 


ಕಂ|| ಬರೆದಿದ[9] ತಾಮ್ರದ ತಗಡಿನೊ |
[10]ಳಿರೆ ಯಂತ್ರಮದೊಂದೆ ಕೂಡಿ[11] ತದ್ಯೋಗಮ[12]ನುಂ ||
ಗುರಮಂ ಮಾಡಿಸಿ[13] ತನ್ನಯ |
ಬೆರಲೊಳ್ ತಳ್ತಿಕ್ಕಿ ಬಱಿಯಮಹಿಮಸ್ತಕದೊಳ್ [14]|| ೨೮ ||

ಹಸ್ತಮನಿಂಬಿನೊಳಂ ತ |
ದ್ವಿಸ್ತಾರದೊಳಿಕ್ಕಲಾತನಂ ಖಗಪತಿಯೆಂ ||
ದಸ್ತಮನಂ ಬಗೆದಹಿ ತ |
ನ್ಮಸ್ತಕಮಂ ನೆಗಪದಂತೆ ಸತ್ತವೊಲಿರ್ಕುಂ || ೨೯ ||

1. ತಿಗುರುಹುಳಿ ಕುಡಿಸೆ ಮುಟುಜೆಯ ಬೇರ್ಬಿಳಿದೆನಿಸುವ (ಕ) 2. ಕರ್ಚಿಸಿಕೊಳೆಪಾವಿಂ (ಕ) 3. ತನುವಿಂಗೊಸಮೇತಂ ಕುಡಿಯಿಸು (ಗ) 4. ರಕ್ಷೆ (ಎಂದು ಕ. ಪ್ರತಿಯಲ್ಲಿ ಬರೆದಿದೆ.) 5. ಪದ್ದೆಂಬವರಿಂಗುರ್ಗಳವಿರ್ಕೆ (ಗ) ದುರ್ದೆಂಬಿವ (ಕ) 6. ಪವಣಿಸಿತ ಕಿರುದೆಗುಮನಂತೆ (ಕ) 7. ಮಾಡದು (ಗ)
8. ಯಂತ್ರ—  9. ದಿದು (ಗ) (ಕ) ದಿಡು ?
10. ಳಿರಿ (ಕ) 11. ಮಾಡಿ (ಗ) 12. ಮಮಂಗುರಮಂ (ಕ) 13. ಮಾಡಿಸಿ ತನ್ನಯಬೆರಳೊಳ್ತಿಕ್ಕಿ ಬಱಿಯ ಅಹಿ (ಗ) ಮಾಡಿಸಿ ತನ್ನಯ ಶಿರದೊಳುಳ್ಪಕ್ಕಿ ಬಳಿಯಮಹಿ (ಕ) 14. ೨೭ ಮತ್ತು ೨೮-ನೆಯ ಕಂದಗಳು (ಗ) ಪ್ರತಿಯಲ್ಲಿ ಹಿಂದುಮುಂದಾಗಿವೆ.
* (ಗ) ಪ್ರತಿಯಲ್ಲಿಲ್ಲ.

ರಕ್ಷೆ—

ಕಂ|| [1]ಒಡಪೆರ್ಗುರುವಂಟಿಕೆಗಳ |
ನಿಡುಬೇರಂ ಬೆರಸಿ ಕೊಂಡು ನೀಲಿಯ ಬೇರಿಂ ||
ದೊಡನಿಕ್ಕಿ [2]ರಕ್ಷೆಯಂ ಕಟ್ಟ |
ಲೊಡಂ ಶುಭತಿಥಿಯೊಳಹಿಗಳಂಜುಗುವುದಱಿಂ || ೩೦ ||

ನೋಡಿರೆ ಪುಷ್ಯಾರ್ಕದೊಳಂ |
ಕೂಡಿದ ದಿನದಲ್ಲಿ [3]ತಂದ ಲಜ್ಜಲಿಕೆಯುಮಂ ||
ತಾಡಲ್ ರಕ್ಷೆಯನಾಗಿಯೆ |
ಕ್ರೀಡಿಸುಗುಂ [4]ಫಣಿಗಳೊಡನಿದೊಂದಚ್ಚರಿಯೇ || ೩೧ ||

ಲಜ್ಜಲಿಕೆಯ ಬೇರಂ ತಂ |
ದುಜ್ಜುಗದಿಂ [5]ಸಿದ್ಧದಿನದೊಳಂ ಪೂಸಲದೇಂ ||
ಕಜ್ಜಮಹಿಯೊ[6]ಡನೆ ತಾಂ ನಿ |
ರ್ಲಜ್ಜತೆಯಿಂ[7]ರಮಿಯಿಸುತ್ತುಮಿರ್ಪಂತು ಹಿತಂ || ೩೨ ||

ಸಿತಗಿರಿಕರ್ಣಿಕೆಯಂ[8]ತಂ |
ದು ತಿಷ್ಯರವಿಯಾದ ದಿ[9]ನದೊಳಂ ರಕ್ಷೆಯನಂ ||
ದತಿಶೋಭಾನ್ವಿತವಾಗ |
ಪ್ರತಿಮಂ ಕಟ್ಟಲ್ಕೆ ಮುಟ್ಟಲ[10]ಣ್ಮವು ಫಣಿಗಳ್ || ೩೩ ||

ಸಂಗತಮೆನೆ ಪುಷ್ಯಾರ್ಕದೊ |
ಳಂಗುರಮಂ ತಂದು ರಕ್ಷೆಯಂ ಕಟ್ಟಲ್ ಸ ||
ರ್ಪಂಗಳ್ [11]ಮುಟ್ಟವು ಮುಟ್ಟಲೊ |
ಡಂ ಗಡ ವಿಷಮಿಲ್ಲಮಮಳಗುಣಗಣನಿಳಯಾ || ೩೪ ||

ಕರಡಿಯ ದಾಡೆಯೊಳಂ ಮೇಣ್ |
[12]ಬೆರೆದೆಬ್ಬುವ ಪುಲಿಯ ದಾಡೆ(ಯಂ)ಯೊಳ್ ಮಾಡಿಸಿ ತಾಂ ||
ಗರುಡನ ರೂಪಂ ಕಟ್ಟ |
[13]ಲ್ಕರದೊಳವಂ ಗರುಡನೆಂದು ಫಣಿಗಳ್ [14]ಮಡಿಗುಂ || ೩೫ ||

---

1. ದೊಡನಂ ಪೆರ್ಗುರುಟಗೆಗಳ (ಕ) ವಡವಂಪೆರ್ಗುರುಟ (ಘ) 2. ರಕ್ಷೆಗಟ್ಟಲ್ ಗಡಗಡನಂನಡುಗಿ ಸರ್ಪಸತ್ತವೊಲಿರ್ಕುಂ (ಗ) 3. ತಂಡಲಜ್ಜಲಿಕೆ (ಕ) ತಂದುಕಜ್ಜರಿಕೆಯುಮಂ ಮಾಡಿಯೆ ರಕ್ಷೆಯ ಕಟ್ಟಲ್(ಗ) ರಕ್ಷೆಗಟ್ಟಲ್ಕೊಡನೆಸುದಿವಸದೊಳೆ ಫಣಿಗಳಂ ಜುಗುಮುಪಱಿಂ (ಘ) 4. ಳೊಡನಿಲದೊಂದ (ಕ) 5. ಸಿಡಿದಿನ (ಕ) 6. ಯೊಡನೆನಿರ್ಲ (ಕ) 7. ರಮಿಸುತ್ತಮಿರ್ಪಂದು (ಕ) 8. ತಂದುಪುಷ್ಯ (ಕ) ತಂದುಶಿಷ್ಯ(ಗ) 9. ದಿನದೊಂದು (ಗ) 10. ಲಮ್ಮವು (ಕ) (ಗ) 11. ಗಳ್ ಮುಟ್ಟದೊಡಂಗಡ (ಕ) ಮುಟ್ಟದೊಡಂಗಡ (ಗ) 12. ಬೊರದೆಬ್ಬುವ (ಗ) ನರೆದೆಬ್ಬುವ (ಕೆ) 13. ಲ್ಕರದೊಳವಂ (ಗ) 14. ಮಣಿಗುಂ (ಗ)



*ಕಂ|| ಕರ್ಕಶತನಮಂ ಮಾಡದೆ |
ತರ್ಕಂಗೊಳದಣ್ಣ ತಂದು ಮೋನದೊಳಂ ಹ ||
ಸ್ತಾರ್ಕದೊ[ಳಂ]ರಕ್ಷೆಯನಿರ |
ದರ್ಕನ ಮೂಲಮನೆ ಕಟ್ಟೆ ನಿರ್ವಿಷಮಕ್ಕುಂ || ೩೬ ||

ಮ|| ದವನಂ ಕೇಸರ ನಾಗಕೇಸರ ಲವಂಗಂ ದಾರ್ವಿ[1]ಯೆಂದಿಂತದೊ |
ಪ್ಪುವ ನೀರಿಂದೆ ತಮಾಲಪತ್ರಮು[2]ಗರೊಂದಂ ಮರ್ದಿಸಾ ರಕ್ಷೆಯಂ ||
ಜವದಿಂ [3]ನುಂಗುವ ರಕ್ಕಸಂ ಫಣಿ ಮಹಾವ್ಯಾಘ್ರಂ ನೃಪಂ ತಸ್ಕರಾ |
[4]ಟವಿಕರ್ ಮುಖ್ಯಮೆನಿಪ್ಪ ಸರ್ವಭಯಮುಂ[5]ಪೊರ್ದಲ್ಕಣಂ ಬರ್ಕುಮೇ || ೩೭ ||

ಇನ್ನು ಶಬ್ದನಿರ್ವಿಷಮಂತ್ರವಿಧಾನಂ

ಕಂ|| ಆರ್ಯರ್ ಪೇಳ್ದೀಮಂತ್ರಂ |
ಸೂರ್ಯಗ್ರಹಣದೊಳೆ ಮೋಕ್ಷಪರ್ಯಂತಂ [6]ತಾ ||
ತ್ಪರ್ಯದೊಳಾದನಿತಂ ಬುಧ |
ವರ್ಯಂ ಮಾಳ್ಪುದು ಜಪಂಗಳಂ ಸಿದ್ಧಿಸುಗುಂ || ೩೮ ||

ಶಾ|| ಪನ್ನಿರ್ಛಾಸಿರಮಪ್ಪಿನಂ ಜಪಮದುಂ ಸಾಧ್ಯಂ ಬಳಿಕ್ಕಂ [7]ಸದೋ |
ತ್ಪನ್ನೋದ್ಯೋಗದೆ ಮೂಱುಸಂಜೆಯೊಳೆ ತಾಂ ಪಂಚೋತ್ತರಾಹ್ವಂಗಳ ||
ಪ್ಪನ್ನಂ ತದ್ದಶಸಂಖ್ಯೆಯಿಂ ಪರಿಸೆಯುಂ ತಚ್ಛಬ್ದದಿಂ ನಿರ್ವಿಷಂ |
ನನ್ನಿ ಕ್ಷ್ಮಾತಳದೊಳ್ ಪ್ರಭಾವಭವನಂ ತಾನಲ್ತೆ ದೃಷ್ಟಂ ಬುಧಾ || ೩೯ ||

ತನ್ಮಂತ್ರೋದ್ಧಾರಂ—

ಮಂತ್ರಂ— ಒಲೆಯ[8]ಮುಟ್ಟೆ [9]ಅಜಿತ, ಉಚಿತ, ಮಘಾನಾಸ್ತಿಕ ಯೆಂ [10]ಬೊಕ್ಕಲಿಗುಂ ಪ ಹರಹರಸ್ವಾಹಾ—

ವ|| [11]ಅದಲ್ಲದೆಯುಂ

ಕಂ|| ಮುಂ ಪೇಳ್ದಂತೀಮಂತ್ರಮು |
ಮಂ ಪರಿಸಲ್ ಸಿದ್ಧಿಯಕ್ಕು[12] ಮೇಲಿಂಸೂಳ್ ನಿ ||
ಚ್ಚಂ ಪೇಳ್ದೊರ್ಕುಡಿತೆಯ ನೀ |
ರಂ ಪಾನಂಗೆಯ್ಯೆ ಶಬ್ದನಿರ್ವಿಷಮಕ್ಕುಂ || ೪೦ ||

---

1. ಯಿಂದಾದೆ ವೊಪ್ಪುವ (ಕ) 2. ಮುಗದೊಂದಲ್ಮರ್ದಿ (ಗ) 3. ನುಂಗುರತ್ಕಸಂ (ಗ) 4. ಟವಿಕಮ್ಮಮೆನಿಪ್ಪಸರ್ವ (ಕ) 5. ಸೋದರ್ಕಕ್ಕಣಂ ಬಿಕ್ಕುವೆ (ಗ) 6. ತತ್ಪರ್ಯದೊಳಾ ದವನಿತಂ (ಗ) 7. ಸುಘೋತ್ಪ (ಕ) ಸುಘೋತ್ಪಂನೊಂದೊಗದೆ ಮೂರುಮೂರು ಸಂಜೆಯೊಳೆ—ತದ್ವಶಸಂಖ್ಯೆ—ತಾಸಲ್ತೆ ದುಷ್ಟಂಬುಘಾ (ಗ) ತಂದಶಸಂಖ್ಯೆಯಿಂ ಪರಿಸಯುಂ—ತನ್ನೀಕ್ಷ್ಮಾತಳ (ಕ) 8. ಮುಡ್ಡಿ (ಗ) 9. ಅವುಚಿತ ಮಘೋನಾಸ್ತಿ (ಕ) 10. ಕ್ಕೆಯ್ಯೊವೊಕ್ಕಲಿಗುಪಹರಸ್ವಾಹಾ (ಗ) 11. ಯಿದಲ್ಲದೆಯುಂ (ಗ) 12. ಮೇಣ್ಣೂಳಂನಿ (ಗ)

* (ಗ) ಪ್ರತಿಯಲ್ಲಿಲ್ಲ.

ತನ್ಮಂತ್ರಂ—

[1]ಕಾಡದುಂ ಗಟ್ಟು ನಯಂಗಲ ಪಯಂಗಟ್ಟು ಣಲ್ವಾಸಿಯಗಟ್ಟು ಮಹ ದೇವಿಯ ಕೆಯ್ಯಶೂಲಂ ಬಿತ್ತುಂಗಟ್ಟು ಯೆಂನ ಕಟ್ಟು ಕಟ್ಟು ಪರಕಟ್ಟು ಕಟ್ಟಲ್ಲ ವೊಂಜುಂ ಬಾಳಿಗೆ ಹರ - ಗುರುಪ್ರಸಾದ - ಅಕ್ಕಿತಕ್ಕು - ಉಚಿತಕ್ಕು - ಕಾವಿ ಬಕ್ಕು - ವಿಷನಾಸ್ತಿ ಹರ - ಶಬ್ದ ನಿರ್ವಿಷಂ ಗುರುಪ್ರಸಾದ—

ವ|| ಈ ಮಂತ್ರಕ್ಕಂ [2]ಪೂರ್ವಕ್ರಮದಿಂ ತ್ರಿಸಂಧ್ಯಾಕಾಲದಲ್ಲಿ ಎಂಟೆಂಟು ಸೂಳ್ಜಪಿಸಿ ಯೊ[3]ರ್ಕುಡಿತೆನೀರಂ ಕುಡಿಯುತ್ತುಂ ಬರೆ ಶಬ್ದ[4]ನಿರ್ವಿಷಂ, ತನ್ನ ಮುಟ್ಟಿದ ಸರ್ಪಂ ಸಾಗುಂ—

ಇನ್ನು ದೂತನಿರ್ವಿಷಂ.

ಕಂ|| ಇಪ್ಪತ್ತೊಂದುಂ [5]ಸೂಳ್ವರ |
ವೊಪ್ಪುವ ಮಂತ್ರದೊಳೆ [6]ದೂತನಂ ಮಂತ್ರಿಸಿ [7]ತಂ ||
ದಪ್ಪುಮನೆ ಕುಡಿಸೆ ನಿರ್ವಿಷ |
ಮಪ್ಪುದು[8] ದಷ್ಟಂಗೆ ತಪ್ಪದಿದು ಪರಮಾರ್ಥಂ || ೪೧ ||

ತನ್ಮಂತ್ರಂ—

[9]ಅರೆಯಮೇಲಣಪಾಂಬು ಲಾಗಿಸಿ ಲಂಗಿಸಿದಡೆ, ಅರೆಗಳೊಡವುವು. ಶಿಲೆಗಳೆರಡು ಹೋಳಾದುವು. [10]ತಳಮುಟ್ಟಿದು [11]ನಾಗಲೋಕ ಕಾಳಿಂಗನಾಗನ ಕಂಠಮಂ ಸೀಳುವೆ ಯೆಳೆಯ ನಾಗನ [12]ಹೆಡೆಯಂ ಸೀಳುವೆಂ. ಎಪ್ಪತ್ತುಯೇಳುಕೋಟಿಯ ಹಾವನು [13]ಸರವಿಯನೆ ಮಾಡಿ ನುಂಗಿಡಂ. ಅಹ[14]ಮೆರೆಯ ಗರುಡನುಂ ಗುತ್ತಿಬಂದನೆ ವಿಷಮಿಲ್ಲ ವಿಷನಾಶನ[15]ವಾಗಿ ಯಿಳಿದೋಡುಗುಂ ಗುರುಪ್ರಸಾದ—

ಈ ಮಂತ್ರಕ್ಕಂ ಪೂರ್ವಕ್ರಮು, [16]ಪೂರ್ವಸೇವೆ.

**ಇದು ದೂತನಿರ್ವಿಷಂ.**

ಇನ್ನು ಸರ್ಪೋಚ್ಚಾಟನಮಂತ್ರಮಂ ಪೇಳ್ವೆಂ—

ಮಂತ್ರಂ—ಓಂ, ಹ್ರೀಂ, ಭ್ರೂಂ, ಕ್ಷೂಂ, ಹಂಸ, ಮಹಾಹಂಸ, ಪದ್ಮಹಂಸ ಶಿವಹಂಸ ಪರಮಹಂಸ, [17]ಜರಿಹಂಸ ಪಕ್ಷಿವಿಷಂ ಪಕ್ಷಿಯೇಣಾ. ಮೇಣಾಂ ಜಾಂಗಳಿಂಮಂತೊಲಗಿಸು ಊರೊಂತೊ ಜಯಪಕ್ಷಿಂ ಜಯ ಅಂಗಂ ತೊರೆಡಾಮರ[18]ರಯಿತೋ ನಿರ್ವಿಷೀಕರಣಂ—

1. ನಾಡುಂಗಟ್ಟು — ವಹದೇವಿ — ಚಿತ್ತಂ — ವೊಜುಂ—ಅಚ್ಚಿತಕ್ಕುಮಚ್ಚಿತ್ತಕ್ಕುಶಾವಿಬಕ್ಕುಂ (ಗ) 2. ಪೂರ್ವಕ್ರಮು ಪೂರ್ವಸೇವೆ (ಕ) 3. ಕುಡಿತೆ (ಗ) 4. ಬರೆನಿರ್ವಿಷಂ (ಗ) 5. ತ್ತೊಂದೇ (ಕ) 6. ಮಾತನಂ (ಕ) 7. ತಂದಪ್ಪವನೆ (ಗ) 8. ದು ದೂತಂಗೆ ದಷ್ಟಂಗೆ (ಕ) 9. ಅರಿಯಮೇಳಣ (ಗ) 10. ತಗಮುಟ್ಟಿ (ಗ) 11. ನಾಗಕಾಳಿಂಗನಾ (ಗ) 12. ಹೆಡತಲೆಯಂ (ಗ) 13. ಸರವೆಯೆನೆ ಮಾಡಿದ ನುಂಗಿದ (ಗ) 14. ಮೆಲೆಯ. 15. ವಾಯಿಗಳೆಗೊಡುಗುರು (ಗ) 16. ಈ ಮುಂದಣವಾಕ್ಯಗಳಿಲ್ಲ(ಗ) 17. ಜರೆಹಂಸ—ವಿಷಪಕ್ಷಿಣಾನಾಮೇಣಾ ಜಾಂಗುಳ್ರಮಂತೊ ಅಸುಣಂತೊಜಯ (ಗ) 18. ಡಾಮರೆ ಇತ್ತೊ (ಕ)



ಕಂ|| ಈ ಮಂತ್ರದಿಂದೆ ಮಂತ್ರಿಸಿ |
ದಾ ಮಳಲಂ ಮನೆಯೊಳೆಯ್ದೆ ತಳಿಯಲ್ ಪೋಕುಂ ||
ತಾಮಸಮಿಲ್ಲಂ ಸರ್ಪನ |
ನಾಮುಮುಮಿರದೆಂದು ಮಂಗರಾಜಂ ಪೇಳ್ದಂ || ೪೨ ||

ಕೃತಹಂಸಬೀಜಮೋಂ ಪ್ಲಾಂ |
ಪ್ರತಿಸರ್ಪಕುಲಾಯ [1]ಯಂಟತಾಂ? ಸ್ವಾಹಾ ಮಂ ||
ತ್ರಿತಸಪ್ತವಾರದೊಳುದಕ |
ದತಿಶಯದಿಂ ಸರ್ಪಮೋಡುಗುಂ ತದ್ಗೃಹದಿಂ || ೪೩ ||

ಕುರುಕಲ್ಲಾ(ಕುಲ್ಯಾ)ಕ್ಷರಮಂ ತಾಂ |
ಬರೆವುದು ‡ (ಷ) ಪಟ್ಕೋಣ? ಭವನಮಧ್ಯದೊಳಂ ತ ||
ದ್ಗರುಡಾಖ್ಯಬಂಧನ[2]ದೊಳಿಡ |
ಲುರಗಂ ಪೊಱಮಡುಗುಮೆಂದನುಭಯಕವೀಂದ್ರಂ || ೪೪ ||

* ವ|| ತದ್ವಿವರಣಂ - ಮನೆಯಲ್ಲಿ ಗೋಡೆಯಲ್ಲಿ ಗರುಡನಯಂತ್ರಮಂ ಬರೆದು ಅದಱ ಮಧ್ಯದೊಳೆ ಷ(ಪ)ಟ್ಕೋಣ? ಚಕ್ರಮಂ ಬರೆದು ತನ್ಮಧ್ಯದಲ್ಲಿ ಕುರುಕುಲ್ಯೆ ಸ್ವಾಹಾ ಎಂಬ ಯಂತ್ರಮಂ ಬರೆದಿಡೆ ಸರ್ಪೋಚ್ಚಾಟನಂ.

ಕಂ|| *ಗರುಡನ ಬರ್ಹಿಯ ಗಱಿಯೊಂ |
ದಿರೆ ನಕುಲನ ದಂತದಿಂ ಲಸದ್ಭುಜಪತ್ರಾಂ ||
ತರದೊಳ್ ಸುತ್ತುವುದೆತ್ತಂ |
ಬೆರಸಿರೆ ತಾಳೀಸಪತ್ರಮಿಂತಿರಲಯ್ದುಂ || ೪೫ ||

ಸೊಗಯಿಪ [3]ಯಂತ್ರಂ ತಾಮ್ರದ |
ತಗಡಿನೊಳಂ ಬರೆದಿರಲ್ಕಮದಱೊಳವಂ ತೀ ||
ವುಗದುಂ[4]ಗುರಮಂ ಮಾಡಿಸಿ |
ಬಗೆ ಸರ್ಪೋಚ್ಚಾಟನಂ ವಿದಗ್ಧಾಭರಣಾ || ೪೬ ||

ಮಂತ್ರಂ— 


ವ|| ಎಲ್ಲಾ ನಿರ್ವಿಷ[5]ಯೋಗಕ್ಕಂ, ಉಚ್ಚಾಟನಕ್ಕಂ ಇದೆ ಮಂತ್ರಂ.

ಈ ಯೋಗಮಂ ಯುಗಾದಿಯ [6]ಜಾಉದಿನಂ ಮಾಳ್ಪುದು.

1. ಹೂಂಫಟ್‌ಸ್ವಾಹಾ (ಎಂದಿರಬಹುದು) 2. ದೊಳಿರಲುರಗಂ. 3. ಮಂತ್ರಂ (ಕ) 4. ಡುಂಗುರಮಂ (ಗ) 5. ರೋಗಕ್ಕಂ (ಕ) 6. ಬಿದಿಗೆಯಲ್ಲಿ (ಗ); ಬಾಉದಿನ (ಕ)

* ಯಂತ್ರಂ—  ಮಂತ್ರ ಕ್ಷಿಪ ಓಂ ಸ್ವಾಹಾ, ಕಂ|| ಸೊಗಯಿಪ—ಭರಣಾ || ವ|| ಈ ಮಂತ್ರಮಂ ಯುಗಾದಿಬಿದಿಗೆಯಲ್ಲಿ ಮಾಡಿಸುವುದು, ಇದಾದಬಳಿಕ ತರಿಸುಗೆ ಪುಷ್ಪಾರ್ಕ || ಎಂಬ ಕಂದವಿದೆ (ಗ) ‡ ಷಟ್ಕೋಣ ಎಂದಿರಬಹುದು.

ಕಂ|| ತರಿಸುಗೆ ಪುಷ್ಯಾರ್ಕದೊಳೀ |
ಶ್ವರಿಯಂ ತಾಂ ಬಾಯೊಳಡಸಿ ಮಂತ್ರಮನಿಂತು ||
ಚ್ಚರಿಸಲ್ ವ್ಯಾಘ್ರೋರಗ ತ |
ಸ್ಕರ[1]ನೃಪರಿಂದಪ್ಪ ಭಯಮದೆಲ್ಲಂ ಕಿಡುಗುಂ || ೪೭ ||

ಆಮಂತ್ರಂ—ಓಂ, ಹ್ರೀಂ, ಮಾಂ ರಕ್ಷ.

ವ|| ಎಂಬೀಮಂತ್ರಮಂ ಜಪಿಸುತ್ತುಂ ಪೋಪುದು.[2]

ಕಂ|| *ರಾಗದೊಳಂ ಪುಷ್ಯಾರ್ಕದ |
ಯೋಗದೊಳೀಶ್ವರಿಯ ಮೂಲಮಂ ತರ್ಪುದು ವೇೞ್ ||
[3]ದಾಗುಡಿಯುಂ ಮನೆಯೊಳಿರಲ್ |
ನಾಗಕುಲೋಚ್ಚಾಟನಂ ದಿಟಂ ಸಂಭವಿಕುಂ || ೪೮ ||

ಚಂ|| ಅತಿಬಜೆ ಲೊಕ್ಕಿ ಸಜ್ಜರಸಮಂ [4]ಗು[ರು]ಗಿ(ವಿ)ಂಗುಳ ಬೇಳೆ ಬಾಳ ಸಂ |
ಗತಮೆನೆ ಕೇರ ಗೊಟ್ಟೆ ಘನಮೆಂಬಿವನೊಪ್ಪಿರೆ ಕೂಡಿ ಧೂಪಮಂ ||
ಪ್ರತಿಮಮೆನಲ್ಕೆ ತದ್ಗೃಹದೊಳಿರ್ಕೆ ಮಹೋರಗ ವೃಶ್ಚಿಕಾದಿ [5]ಮು |
ಖ್ಯತೆಯೆನಿಪಂಗಳೊಳ್ವನೆಯನಾಕ್ಷಣದಿಂ ಬಿಡುಗುಂ ಬುಧೋತ್ತಮಾ || ೪೯ ||

ಕಂ|| ನವಿಲುಂ ಮುಂಗುರಿ ಪರ್ದಿಂ |
ಬಿವಱ ಮಲಂ ಮೂತ್ರಮೊಂದಿರ[6][ಲ್] ಮರ್ದಿಸಿದಂ ||
ತವನಭಿಮಂತ್ರಿಸಿ [7]ಇಟ್ಟಂ |
ತವೆ ಸರ್ಪೋಚ್ಚಾಟನಂ ಲಸತ್ತಿಲಕದೊಳಂ || ೫೦ ||

ತನ್ಮಂತ್ರಂ—ಓಂ ನಮೋ ಭಗವತೇ ಪಾರ್ಶ್ವನಾಥಾಯ ಪಕ್ಷಿರಾಜಾಯ ಸರ್ಪಕುಲವಿಧ್ವಂಸನಾಯ ಸಮಸ್ತವಿಷಸಂಹರಣಾಯ, ದೇವೇಂದ್ರಮರ್ದನಾಯ ಹೂಂ ಫಟ್ ಸ್ವಾಹಾ—

ಎಂದು ಮಂತ್ರಿಸಿ "ಓಂ, ಕ್ಷಿಪ, ಸ್ವಾಹಾ" ಎಂದು ತಿಲಕಮನಿಡೆ ಸರ್ಪೋಚ್ಚಾಟನಂ—

ಇನ್ನು ಕವಳಪ್ರಯೋಗಮಂ ಪೇೞ್ವೆಂ.

ಕಂ|| ಬಾವುಜಿಗೆ ನೀಲಿ ಮು[8]ತ್ತದ |
ಪೂವಾವರೆ ಯಮದುರ್ಮವಳ್ಳಿ ಸೆಳ್ಳೆಂಬಿವಱೊಳ್ ||
ಭಾವಿತಗುಡ ಮೆಂದೊಂದೆನ |
ಲೇವಣ್ಣಿಪೆನಡಸಿ ಮೆಲೆ ವಿಷಾಪಹಮಕ್ಕುಂ || ೫೧ ||

1. ನೃಪೇಂದ್ರ ಭಯಮದೆಲ್ಲಂ (ಕ) 2. ಸರ್ವಜನವಶ್ಯಮಪ್ಪುದು (ಗ) 3. ದಾಗಡಿಯಂ ಮನೆಯೊಳಿರಲ್ (ಕ) 4. ರು (ಕ) 5. ಮುಖ್ಯತೆಯೆನಿಪಂಗಳ್ವನೆಯ (ಕ) 6. ಲ್ಕಂ (ಕ) 7. ಇಷ್ಟಂ ತವೆ (ಕ) 8. ನೆಲ್ಲಿ (ಘ)
* ಇಲ್ಲಿಂದಮುಂದೆ........ವರೆಗೆ (ಗ) ಪ್ರತಿಯಲ್ಲಿಲ್ಲ.



ಕಂ|| ನೆಲದಾಳ್ ಗಿಳಿಯಿಂದೆಂಗಂ (?) |
ಕಲಸುಗೆ ಬೆಲ್ಲದೊಳೆ ಮಾಱ್ಕಿ ತಚ್ಚರ್ವಣಮಂ ||
ನೆಲೆಗೊಳ್ಳದೆ ವಿಷಮುಱಿಗುಂ |
ಖಲಜನಸಂಸರ್ಗರಹಿತಮಂಗನ ಮತದಿಂ || ೫೨ ||

ಸಾರತರಮಪ್ಪ ಕುಟಜದ |
ಬೇರಂ [1]ತಾ ಕಱಿಕನೆಸೆವ ಬೀಜಂಗಳೊಳಂ ||
ಜೀರಗೆಯಂ ಪಲ್ಮಾಣಿಕ |
ಮೋರಂತಿರೆ ಕುಡಿಯೆ ಮತ್ತೆ ದಿವ್ಯೌಷಧಿಗಳ್[2] || ೫೩ ||

ಮ|| [3]ಹುಲಿಗಿಲ್ ತಂಡಸು ನುಗ್ಗಿ ಶುಭ್ರರವಿ ನೇಱಿಲ್ ತಾಱ[3]ಯಂಕೋಲೆ ನಾಂ |
ಗುಲಿಕಂ ಮಲ್ಲಿಗೆ[4]ಯಿಪ್ಪೆ ಕೈಪೆಸೊರೆ[5]ಯಾಜ್ಯಂ ಕೈತಕಂ ದಾರ್ವಿ ನಿ[6] ||
ಸ್ತುಲ ಮಪ್ಪೀಶ್ವರಿ [7]ಬೇವು ಮುತ್ತರಣೆಯಂ ಚೂರ್ಣಂಗಳಂ ಮಾಡಿ ತೀ |
ವಿ ಲಲಾಮೋದ್ಭವಕುಂಡಿಕಾಂತರದೊಳಂ ಬಯ್ತಿಟ್ಟು ಸುಸ್ಥಾನದೊಳ್ || ೫೪ ||

ಕಂ|| ಸೂತಕೆ ಪಾತಕ ವಿಲ್ಲದ |
ಪೂತಸ್ಥಾನದೊಳಮಿರ್ದುದಂ ಜಂಭೀರೋ ||
ದ್ಭೂತರಸದಿಂದೆ ಕುಡಿಸ |
ಲ್ಕೀ ತೊದಳೊಱಿಯಲ್ಕೆ ಪೂಸೆ ನಿರ್ವಿಷಮಕ್ಕುಂ || ೫೫ ||

ಉ|| ನೆಗ್ಗಿಲಗಸ್ತ್ಯಮುಂದೆ? ಯೆಸಗಂ ಕಣಿಗಿಲ್ ಕಿಱುದೇಗು ಚಿತ್ರಕಂ |
ನುಗ್ಗಿಲವುಂ? ಗುಲೀಶ್ವರಿ ನೆಲಾವರೆಯಾವರೆ ಗುಳ್ಳ ನುಗ್ಗಿ ಕಾ ||
ಙ್ನಗ್ಗಿ ದಿನೇಶ ಜಾಂಗುಲಿ ಕುರಂಟೆಗೆ ಸಂಪಗೆ ಬಳ್ಳಿಸೊಂಡೆಯುಂ |
ಕೊಗ್ಗಿಸುಧಾತ್ರಿ ಮಾದಲ[8]ನಿದಿಗ್ಧಿಕೆ [ಕಂ]ಕರಿ ಕಾಗೆದೊಂಡೆಗಳ್ || ೫೬ ||

ಕಂ|| *ಕಕ್ಕೆ ಯೆಳನಾಗ [9]ಮಹಾ |
ಮೆಕ್ಕೆ ಯಗುಳ್ಯಂಠಿ ನಿಂಬಿ ಮೂಗೊಱತಿ ಕರಂ ||
ತಕ್ಕುದೆನಿಸಿರ್ದ [10]ತಂಡಸು |
ಲೊಕ್ಕಿಯೆನಿಪ್ಪವಱ ಬೇರ್ಗಳಂ ಕೊಂಡದಱಿಂ || ೫೭ ||

ಮರಗಱುಕೆಯ ಬಳ್ಳಿಯ ಪೆ |
ರ್ಗುರುಟಿಗೆಯಂ ಬ್ರಹ್ಮದಂಡೆಯಂ ಕಳವಲ್ ಚುಂ ||
ಚುರುಚಂ ಗಿಣಿಮೂಗಿಯ ಚಂ |
ಗರ ಹಿತಕರಮೆನಿಪ ಬಂಜೆ ಮಡುವಾಗಲುಮಂ || ೫೮ ||

1. ತಾಕಱಿಕನಸೆವಬೇರಂ ಬೀಜಂಗಳೊಳ್ ಬೆಳ್ಜೀರಗೆಯುಂ (ಕ) 2. ಧಿಯೇಂ-ಎಂದಿರಬಹುದು. 3. ಹುಲಿಗಿಲ್‌ತಂದಸು (ಕ) 4. ಯಪ್ಪಿ (ಕ) 5. ಯಾಜ್ಞಂ. 6. ನಿಸ್ತಲು (ಕ) 7. ಬೇವುಲು ಬೆತ್ತಣಿಯಂ (ಕ) 8. ನಿದಿಗ್ದಿಲಿ (ಕ) 9. ಮಹರಮೆಕ್ಕೆ. 10. ತಂದಸು?

* ಈ ಕಂದವು ಕೊನೆಯಲ್ಲಿದೆ.

ಮ|| ನೆಲಮಾವುಂ ನೆಲದೊಟ್ಟಿ ತೊಟ್ಟಿ ಮಿಟಲಂ ಕಾಱ್ತೊಂಡೆಯುಂ ನಿಂಬಿ ಮಂ |
ಡಲಮಾರಿಪ್ರಥಿತಂಗಳಪ್ಪ ಕುಟಜದ್ವಂದ್ವಂ [1]ವರಾನಿಂಬಮುಂ ||
ನೆಲಗೊಟ್ಟಿ[ಟ್ಟಿ] ಯೆನಿಪ್ಪವಂ ಮೊಲಗಿವಿಕ್ಷ್ವಾರಣ್ಯಕಂ ಜೀರಕಂ |
ವಿಲಸನ್ಮೂಲಮನಿಂತಿವೆಲ್ಲಮ ಸಮಂ ಕೂಡಿಟ್ಟು ತದ್ಯೋಗಮುಂ || ೫೯ ||

ಕಂ|| ರಾಜಿಪೆರಱ್ಕಾಸರಿಕೆಯ |
ಬೀಜಮುಮಂ ಕೈಪೆಸೊರೆಯ ಕಾಱ್ಪೀರೆಯ ಸ ||
ದ್ಬೀಜಮುಮಂ ಗರ್ದುಗಿನೊಳಂ |
ಯೋಜಿಸಿಯೆ ಸಮುದ್ರಫಳದ ಚುಂಚಿನ ಬಿತ್ತಂ || ೬೦ ||

ಇವನೆಯ್ದೆ ಚೂರ್ಣಿಸುತ್ತುಂ |
ಕವಳಂಗುಡು ಕೂಡಿ ಮೇಲ್ಕೊಳಲ್ ಪಾನದೊಳಂ ||
ತವೆ ಲೇಪನದಿನಱಗು ಸಕ |
ಲವಿಷಂ ರವಿಕರದಿನಱವವೋಲ್ ಘನತಿಮಿರಂ || ೬೧ ||

ಸುಟ್ಟುಂಬೆಯ ಬೆರಲಗ್ರದೊ |
ಳಿಟ್ಟಾತ್ರಿಕಟುಕಮನೊರಸೆ ಕಿಱುನಾಲಗೆಯುಂ ||
ಮೆಟ್ಟಲ್ದವಮತಿ(?)ವಿಷಂ |
ಬಿಟ್ಟಡಗುಗುಮೆಂದು ಮಂಗರಾಜಂ ನುಡಿದಂ || ೬೨ ||

**ವಾಂತಿಗೆ.**

ಕಂ|| [2]*ಒಸೆದುಂಡನ ನಹಿಕೊಂಡೊಡೆ |
ಬಿಸಿನೀರಿಂ ಕೈಪೆಸೊರೆಯ ಬಿತ್ತುಮನುಪ್ಪಿಂ ||
ದಸಹಾಯಂ ಕುಡಿಸಲ್[3]ವಾಂ |
ತಿಸಮೇತ ಕಿಡುಗು ಚರಾಚರಂಗಳ ಗರಳಂ || ೬೩ ||

ನೀರಿಂ ಚುಂಚಿನ ಬಿತ್ತಂ |
ನೀರಿಂದಂ ಬಿಳಿಯ ಬೇರುಮಂ ಕುಡಿಸಲ್ ಮೇಣಾ ||
ನೀರಗ್ನಿಯನೆಂತಂತೆ ನಿ |
ವಾರಿಸುಗುಂ ವಾಂತಿ[4]ಯಿಂದೆ ವಿಷದುಗ್ರತೆಯಂ || ೬೪ ||

ಕೋಪದೊಳಹಿ ಪಿಡಿಯೆ ವೃಥಾ |
ಲಾಪದೊಳೀಂ ಬೀಗಿ ಬೆಳೆದು ಪರ್ಬಿರೆ ತಂದಾ ||
ಕೈಪೆಸೊರೆ ಯೆಸೆವ ಮೂಲಂ |
ತಾಪಹರಂ ಕಡಿತಮಾಗಿ ಕುಡಿಸಲಮೋಘಂ || ೬೫ ||

---

1. ವಶಾ? 2. ಪೊಸದುಂ ನನಹಿಯೆಕೊಂಡಡೆ. 3. ವಾ(ಂ)ತ(ಿ)ಸಮೇತಮೋಡುಗುಂ ಚರಾಚರಂಗಳ ವಿಷಮುಂ (ಗ) 4. ಯಿಂವಿಷದುದ್ರಿಕ್ತತೆಯಂ.

* ಈ ಕಂದವು ಕೆಲವು ಪ್ರತಿಗಳಲ್ಲಿ ಕೊನೆಯಲ್ಲಿದೆ.



ಕಂ|| ಸ್ವೈರದೊಳಂ ಪರ್ವಿದರ್ಾ ಕಾ |
ಳ್ಪೀರೆಯ ಬೇರಿನ ಕಷಾಯಮಂ ಮಧುಘೃತದಿಂ ||
ದಾರಯ್ದು ಕುಡಿಸೆ ಪೋಕುಂ |
ದಾರುಣತರ ವಿಷ ವಿನಷ್ಟಮಕ್ಕುಮಮೋಘಂ || ೬೬ ||

ನೀರೊಳ್ ಮಱುಗಿಸಿ ಕುಡು ಕಾ |
ಱ್ಪೀರೆಯ ಕಾಯೊಂದನಾಕ್ಷಣಂ ಕುಡಿಸಲ್ ತಾಂ ||
ಘೋರೆನೆ ವಮನಮನಾಗಿಸೆ |
ದಾರುಣತರಗರ ವಿನಷ್ಟಮಪ್ಪಿನಮಿಱಗುಂ || ೬೭ ||

*ನೀರಿಂದರೆದೀಂಟುಗೆ ಕಾ |
ಱ್ಪೀರೆಯ ಬೀಜಮನದಲ್ಲದೊಡೆ ಕೈಪೆಯೆನಿ ||
ಪ್ಪಾರಣ್ಯದ ಹಂಚಿಯ ಪು |
ಲ್ಪೀರಂ [1]ಕುಡಿಸಲ್ಕೆ ವಾಂತಿಯಿಂ ವಿಷಮಱಗುಂ || ೬೮ ||

ಹಿತಮೆನಿಪ ತಗಚೆಯಾ ಚೂ |
ರ್ಣಿತಮಂ ನೀರಿಂದೆ ಕುಡಿ(ಸ)ಯಲಾಕ್ಷಣದಿಂ ಛ ||
ರ್ದಿತಮಾಗದಿರೆ ವಿಷಂ ತಾಂ |
ಪಿತೃಪತಿಖಳದೂತದಷ್ಟನೆಂದಱಗವನಂ || ೬೯ ||

**ಉಪನಾಹಂ.**

ಚಂ|| ಸಿರಿಸ ತದಿಂದ್ರವಾರುಣಿ ನೃಪಾಂಘ್ರಿಪಮಂತಿರವಂತಿ ಲೊಕ್ಕಿ ಇ |
ತ್ತರಿ? ನೆಲಬೇವು ದೊಗ್ಗಳೆ ಕರಂಜಿಕೆ ತಿಂತ್ರಿಣಿ ಚುಂಚು ತಗ್ಗಿರ್ಗಳ್ ||
ವರಪಿಚುಮಂದಮೆಂಬಿವಱ ಪತ್ರದೊಳೋಗಿದ ಮಂಡಸೀಗೆಯಾ |
ತುರಿತಮೆನಿಪ್ಪ ಪಾಪಟೆಯ ಸದ್ದಳಮಂ ಬೆರಸುತ್ತುಮಂತಱಂ || ೭೦ ||

ಕಂ|| ತೊಱೆಗಣಿಗಿಲೆಗಳವೊಂದಿರೆ |
ಮಱುಗಿಸಿ ಕಱಯಿಂದಮಂತದಂ ಕಟ್ಟಲೊಡಂ ||
ನೆಱೆಯಿಡುಗುಂ ಬಾಹುವಿಷಂ? |
ಪಱಪಡುಗುಂ ಮಂಗರಾಜನನುಮತದಿಂದಂ || ೭೧ ||

ನೆಱೆ ಕು(ದಿ)ಸಿ ಕಟ್ಟುಗಿಂ |
ತೊಱೆಗಣಿಗಿಲ ದಳಮನಾದೊಡಂ ಬಾತವಿಷ ||
ಕ್ಕುಱಸುಱಸಲ್ಕುಪನಾಹದೆ |
ತೊಱೆಯಿಱಗುಂ ತಿಳಿಗುಮೆಂದ [2]ನಮಲಿನವಚನಂ || ೭೨ ||

---

1. ಕುಡಿಸಲ್ಸಾವಂತದೊಳ್ವಿಷಮಱಗುಂ. 2. ನಚಲಿತವಚನಂ (ಖ)

* ಇದು "ಗ" ಪ್ರತಿಯಲ್ಲಿ ಉಚ್ಚಾಟನಮಂತ್ರದ ಆದಿಯಲ್ಲಿದೆ.

ಕಂ|| ಅವಿರಳಮರಳಿಯ ದಳದೊಳ್ |
ನವನೀತಮನೆಯ್ದೆ ತೊಡೆದು ಕಾಸಿದುದಂ ಕ ||
ಟ್ಟುವುದುಂ ನಿರ್ವಿಷಮಕ್ಕುಂ |
ಭುವನಜನಾನಂದಕರಣ ಪಟುಮೃದುವಚನಾ || ೭೩ ||

ನೆಗ್ಗಿಲ್ ತಗಚೆ ನಿದಿಗ್ಧಿಕೆ |
ತಗ್ಗಿಯಪಾಮಾರ್ಗದೊಡನೆ ಬೆರಸಿದುದಂ ತಾಂ ||
ಕೊಗ್ಗಿ ಕುಮಾರಿಗಳಂ ಕುಡಿ |
ಸೊಗ್ಗಿಸಿದಂಬಿಲದೆ ಬೇದುಗಟ್ಟು ವಿಷಘ್ನಂ || ೭೪ ||

***ವಿಷ(ದಿಂಬಾತ) ಬಾಹಿಂಗೆ.**

ಕಂ|| ಕಳ್ಳಂಗಡಲೆಯ ಮಂಗುರು |
ವಳ್ಳಿಯ [1]ನಿಡುಲೋಯಿಸರದ ನಂದ್ಯಾವರ್ತದೊ ||
ಳೊಳ್ಳಿದುವೆರಸಾವರೆಯಂ |
[2]ಕೊಳ್ಳರೆದು ನೃಮೂತ್ರದಿಂದೆ ಕಟ್ಟುವಿಷಘ್ನಂ || ೭೫ ||

ಮುಱಿಕಾಯಿ ನುಗ್ಗಿ ನಖಮಂ |
[3]ಗುರು ಜೇಪಾಳಂ ಗುಡೂಚಿ ಸೂರಣಮೆರಡುಂ ||
ವರದೇವದಾರು ಕಣವೊಂ |
ದಿರೆ ಮಾಂಸಿಯೊಳರೆದು [4]ಬೇದುಗಟ್ಟು ವಿಷಘ್ನಂ || ೭೬ ||

ಹಿಡಿಹಿಡಿಕೆ ಯಾಚಕತ್ತರಿ |
ಮಡುವಾಗಲ್ ನೆಲ್ಲಿ[5]ಗೋಣಿ ಕಿಱು[6]ನೆಲ್ಲಿಯ ಚಿ ||
ಲ್ವೊಡರಿಸಿದೆಲೆ ಯಂಕೋಲದ |
ಗಿಡುದಳಿರುಪನಾಹಮಖಿಳವಿಷಮಂ ಕಳೆಗುಂ || ೭೭ ||

ಕುರುಟಗೆ ಕಕ್ಕೆ ಪುನರ್ನವಿ |
ವರ[7]ಕರ್ಕೋಟಕಿಯಲಾಬು ಕಾಱ್ಸೀರೆ ಯಿವ ||
ಕ್ಕಿರದುದ್ಭವಿಸಿದ ದಳಮಂ |
[8]ತರದಿಂದಂ ಕುಡಿಸೆ ಕಟ್ಟೆ ನಿರ್ವಿಷಮಕ್ಕುಂ || ೭೮ ||

1. ಗಿಡು (ಗ) ನಿಡುಲೋಯಿಸರದ ನಂದ್ಯಾವರ್ತಕ್ಕೊಳ್ಳಿದು (ಖ) 2. ಕೊಳ್ಳರದೆ ನೃಮೂತ್ರದಿಂದೆ ವಿಷಘ್ನಂ (ಕ) 3. ಗುರುಜೆಯ ಜೇಪಾಳಂ (ಕ) 4. ಬಿಗಿದುಕಟ್ಟು (ಕ) 5. ಗೋನು (ಕ) 6. ನೆಲ್ಲಿ ಚೆಲ್ಲಡಸದ ಅರಿಸಿನದೆಲೆಯುಂ ವೊಡಗುಡಿಯಬೇದು (ಗ) 7. ಕಟಕಿ(ಕ) ಕರ್ಕೋಟಕಿಲಾಬು(ಗ) 8. ಶರದಿಂದಕುಡಿಸಿ ಕಟ್ಟುಗೆ ಬೇದಂ.

* ಇನ್ನು ವಿಷದಿಂಬಾತ ಬಾಹುಗಳಿಗೆ ಔಷಧಿಯಂ ಪೇೞ್ವೆ(ನು)ಂ (ಗ)



ಕಂ|| *ಹಿಡಿಹಿಡಿಕೆಯೊಂದಱೆಲೆಯಂ |
ತಡೆಯದೆ ಉಪನಾಹಮಿಕ್ಕೆ ನಿರ್ವಿಷಮಕ್ಕುಂ ||
ತೊಡೆದುಪ್ಪಳಿದುಪ್ಪಮ ತಾಂ |
ಗಿಡುಕಳ್ಳಿಯ ತೊವಡುಕಟ್ಟೆ ನಿರ್ವಿಷಮಕ್ಕುಂ || ೭೯ ||

*ಆವರೆಯ ಸೊಪ್ಪುಮಂ ತಂ |
ದಾವಿಲ[1]ದೊ[ಳೆ]ಕಾಸಿ ಸುತ್ತಿ ಬಾಱೆಯ ನಾರಿಂ ||
ದಾವಿಧದೊಳೆ ಕಟ್ಟಿದೊ |
ಡೇವೇಱ್ವಂ ವಿಷದ ಬಾಹದಾಕ್ಷಣಮುಱಿಗುಂ || ೮೦ ||

ನಿಂಬೆ ಸಹಕಾರ ತಿಂತ್ರಿಣಿ |
ಜಂಬುಗಳೆಂಬಿವಱ ಸೊಪ್ಪುಮಂ [2]ಕುದಿಸುತ್ತಂ ||
ತಂಬಿಲದಿಂದುಪನಾಹಮಿ |
ದೆಂಬಿನೆಗಂ ಮಾಡಲಂತೆ ನಿರ್ವಿಷಮಕ್ಕುಂ || ೮೧ ||

***ಮೂಷಕೋಚ್ಚಾಟನಂ.**

ಮಂತ್ರಂ—ಓಂ, ಚಿರಿ, [3]ಮುರಿ, ತಿಷ್ಠ, ಮೂಷಕಭಿನ್ನ ಗಜೇಂದ್ರವಷಟ್, ರ ರ ರ ಸ್ವಾಹಾ.

ಕಂ|| ವಾಳುಕಮಂ [4]ಸರ್ಷಪದೊಡ |
ನಾಲಸ್ಯಮದಿಲ್ಲದೇಕವಿಂಶತಿ[5]ವಾರಂ ||
ಮೂಲಂ ಮಂತ್ರಿಸಿ ತಳಿದ ವಿ[6] |
ಶಾಲದ [7]ಕೆಯ್ಯಿಲಿಯ ಭಯಮದಾಗದಮೋಘಂ || ೮೨ ||

ಮಂತ್ರಂ—ಓಂ [8]ಆಸರಣೆ ಹೂಂ ಆಸರಣೆ ಹೂಂ ಖಾಣಂ ದಾಡಾಬಂಧನಂ.
ಮೂಷಕ ಖಿಳಿ[9]ಸುವೆಜಾವೆ.

ಉ|| ಭಾವಿಸಿ ಮೋನದಿಂದೆ ರವಿವಾರದುಷಸ್ಸಮಯಪ್ರಸಿದ್ಧದಂ |
[10]ದಾವಗೆಯೋಡ ಬೂದಿಯನೆ [11]ತಂದದುಮಂ ಬೆಳೆಗೆಯ್ಯ ಮಧ್ಯದೊಳ್ ||
[12]ತೀವಿರೆ ಮತ್ತಮೆಂತಧಿಕಮಪ್ಪ[ಶ]ತಂಗಳವಾಗೆ ಮಂತ್ರಿಸಂ |
ದೋವದೆ ಕೆಯ್ಯ ಗೊಂಟುಗಳೊಳಂ ತಳಿಯಲ್ಕಿಲಿಯೋಡುಗುಂ ದಿಟಂ || ೮೩ ||

1. ದೊಲು (ಕ) 2. ಕುಡಿಸುಗೆ (ಕ); ಕುಡಿಸುಗೆ ತಂದಂಜಲದಿಂದುಪ (ಗ) 3. ಮರಿ (ಗ) ವಷಟ್ ರ ಸ್ವಾಹಾ (ಗ) 4. ಸಹರ್ಷಪ (ಗ) 5. ವರಮೂಲಂ ಮಂತ್ರಿಸಿ (ಗ) ವಾರಂ ವಾಳುಕಮಂ ಮಂತ್ರಿಸಿ (ಕ) 6. ವಿಷಾಲದ (ಗ) 7. ಕ್ಕೆಯಿಗಿಲಿಯ (ಕ) 8. ಓಂ ಅರಸಣೆ ಹೂಂಬಾಣಂ (ಗ) 9. ಪೂವೆ ಜಾತೆ (ಕ) 10. ದಾವಗ (ಕ) ದಾವಗೆಯಿಂದ (ಗ) 11. ದದನುಂ (ಕ) ದದನಂ (ಗ) 12. ತೀವಿದಿತಬಿದುತ್ತಮೆಂಟದಿಂಕಮಪ್ಪ ತತಂಗಳೊಳಗೆ—ಗೋಟುಗ (ಕ) ಲ್ಕಿಲಿಯೋಡುಗುಂ (ಗ)

* ೭೯-ನೆಯ ಕಂದವಾದಬಳಿಕ, "ನೀರಿಂದರೆ" "ವೊಸದುಂ ನನಹಿ" "ಕಕ್ಕೆಯೆಳೆನಾಗ" ಎಂಬ ಮೂರು ಕಂದಗಳಿವೆ. ಬಳಿಕ, ಇನ್ನು ಉಚ್ಚಾಟನಭೇದಂಗಳಂ ವಿವರಿಸಿ ಪೇೞ್ವನದೆಂತೆಂದೊಡೆ—ಮೂಷಕೋಚ್ಚಾಟನಂ.

ವ|| ಇಂತು ಮೂಱುವಾರಂ ಮಾಡೆ [1]ಮೂಷಕೋಚ್ಚಾಟನಂ.

ಕಂ|| [2]ನಗರೆಯ ಗೊಟ್ಟೆಯನರೆದಾ |
ಖುಗಳಿಕ್ಕಿದ ಹಿಕ್ಕೆಸಹಿತಮೆಣ್ಣೆಯೊಳೊಂದಲ್ ||
[3]ಬಗೆದೆಡೆಯೊಳ್ ಧೂಪಮನಿ |
ಕ್ಕುಗೆ ತದ್ಗೃಹದಿಂದೆ ಮೂಷಕಂ ಪೊಱಮಡುಗುಂ || ೮೪ ||

ಅತಿಬಜೆಯುಂ ಮುಸ್ತಾಸಂ |
ಯುತಮುಂ ಕೃತಧೂಪಮಾಗಲಿಲಿಹೆಗ್ಗಣದಿಂ ||
ಚ್ಯುತಮಕ್ಕು [4]ಮದಾ ವೃಶ್ಚಿಕ |
ತತಿಯಿಂದಹಿ ದಂಶ ಮಶಕ ಮಕ್ಷಿಕ ತತಿಯಿಂ || ೮೫ ||

ಅರೆದಂತಾಡಿನ ಪಾಲಿಂ |
ದರಿದಾ [5]ಳಬಿಡಾಳ ವಿಷ್ಠೆಯಂ ತೊಡೆದುಂ[6]ಬಿಡು ||
ತಿರಲೊಂದಿಲಿಯದ ನೀಕ್ಷಿಸೆ |
ಪಿರಿದುಂ ಭಯದಿಂದ ಮೋಡುಗುಂ ಪಲವಿಲಿಗಳ್ || ೮೬ ||

ಮಂತ್ರಂ—ಓಂ ನಮೋಭಗವತೇ ಪಾರ್ಶ್ವನಾಥಾಯ ಧರಣೇಂದ್ರ ಪದ್ಮಾವತೀ ಸಹಿತಾಯ [7]ಉದಗ್ರ ರುದ್ರಾ[ಯ] ಮುಖಂ ಬಂಧ ಕ್ರೂರಮುಖಂ ಬಂಧ ಜಿಹ್ವಾಂ ಬಂಧ [8]ವಕ್ತ್ರಂ ಬಂಧ [9]ಸಕಳಂ ಬಂಧಯ ಸ್ವಾಹಾ ||

ಕಂ|| ಏೞನೆಯ ಸೂೞ್ವರಂ ತಾ |
ಮೇಳಿಸದೀ ಮಂತ್ರದಿಂದೆ ಮಂತ್ರಿಸಿ ಮಣಲಂ ||
ಪಾಳಿಸಿ ತಳಿಯಲ್ [10]ಸುತ್ತಂ |
ವ್ಯಾಳಮೃಗಾಖು [11]ಪ್ರಭೇದಮುಂ ಪುಗದಿರ್ಕುಂ || ೮೭ ||

ಮಂತ್ರಂ—ಓಂ ನಮೋ ಭಗವತೇ [12]ಚಂಡ ಮರಿಚಿಱ(ರಿ)ರು ಚ(ಚಾ)ಂಡಾಲಿನಿ ಸ್ವಾಹಾ.

ಕಂ|| ಆವಿಗೆಯ ಬೂದಿಯಂ ಸಂ |
ಭಾವಿತದೀ[13]ಮಂತ್ರದಿಂದೆ ನೂಱುಂ ಸೂೞಿಂ ||
ದೋವಿರೆ ಮಂತ್ರಿಸಿ ತಳಿಯ |
[14]ಲ್ಕಾವರ ಮಂಚಕದ ತಗುಣೆಯೂಱದಮೋಘಂ || ೮೮ ||

---

1. ಮಾಡೆ ಉಚ್ಚಾಟನ (ಗ) 2. ನಗರಿಯ (ಕ) 3. ಬಗೆಗೆಡೆ (ಗ) 4. ಮನೇಕ ವಶ್ಚಿಕತತಿಯಿಂದಹಿದಂಶ (ಗ) 5. ದಾಳಮ (ಗ) 6. ತೊಡೆಉತ್ತಿರಲೊಂದಿಲಿಗದ (ಗ) (ವಿಷ್ಠೆಯಂತಾಂ ತೊಡೆಯು | ತ್ತಿರಲೊಂದಿಲಿ (ಎಂದಿರಬಹುದು) 7. ರುಗ್ರ ರುದ್ರೋಮುಖ (ಗ) 8. ವಕ್ರ (ಕ) 9. ಬಂಧ ವಜ್ರಪರ್ವತ ಸಕಳಬಂಧ ಬಂಧಾಯಸ್ವಾಹಾ (ಗ) 10. ಸುತ್ತಲ್ (ಕ) 11. ಪ್ರವೇಶಮುಂ, 12. ಚಂಡಮರಿಸಿ ಚೀರುಚಾಂ (ಗ) ಚಂಡಮಲಿಚಿಕಿಱುಜಾಂ (ಕ) 13. ತಂದುಬೇಗ ಸೂಱೇಳ್ ಬ್ಬೂಱಿಂ | (ಗ) 14. ಲ್ಕಾವರಮಂಚದ—ಯೂಱವಮೋಘಂ (ಗ)



ಕಂ|| *ಎಕ್ಕೆಯ ಸಮೂಲ ಚೂರ್ಣಮ |
ನಿಕ್ಕಲತಗೆ ಯೆಸೆವ ಬತ್ತಿಯೊಳ್ ದೀವಿಗೆಯಂ ||
ತೆಕ್ಕನೆ ಪೊತ್ತಿಸೆ ತಗುಣೆಗ |
ಳಿರ್ಕುಮೆ ತದ್ಗೃಹದಿನೋಡುಗುಂ ದೆಸೆದೆಸೆಗಂ || ೮೯ ||

*ಮಂತ್ರಂ—ಓಂ ಬುಧಾಯ ಗಿರಿ ಸ್ವಾಹಾ—

*ವ|| ಇದಱಿಂ ನಾಯ ಮುಖಬಂಧನಂ—

ಮಂತ್ರಂ—ನಮೋ ವೃಷಭಮುಖ ಯಕ್ಷೇಶ್ವರಾಯ ಸರ್ವಜನಪ್ರಮೋದನಾಯ, ಸಸ್ಯ[1]ಪ್ರಮರ್ದನ ವೃಷಭ[2] ಯಕ್ಷನಾಜ್ಞೆ—

ಕಂ|| ಈ ಮಂತ್ರದಿಂದಮೊಣಗಿದ |
ಗೋಮಯಮಂ[3] ತದ್ಘೃತಾಕ್ತಮಂ ಯೋಜಿಸಿ ಮ ||
ತ್ತಾಮಾೞ್ಕೆಯಿಂದೆ ತಳಿ[4]ಯಲ್ |
ಭೂಮಿಯೊಳಾ ಕೆಯ್ಯ [6]ಮೇಯಲೊಲ್ಲವು ವೃಷಭಂ || ೯೦ ||

ಮಂತ್ರಂ—ಓಂ ನಮೋ ಭಗವತೇ ಕುಮಾರಿ ಚಾಂಡಾಳಿ ಕಾಮಸಹಿತ [6]ಪ್ರಿಯಕ್ಷಿಣಿ [7]ಮಾಯಾಮಯೆ(ಯೋ) ಮಾಯೆಯಂ ಕಟ್ಟು ದಿಶಾಂ ಬಂಧನಾಯ ಸ್ವಾಹಾ—

ಕಂ|| [8]ಶೋಭಿಸುವಿದಱಿಂ ಮಂತ್ರಿಸಿ |
ದಾ ಭಸ್ಮಮನೆಯ್ದೆ ಕೆಯ್ಯ ಸುತ್ತಂ ತಳಿಯ ||
ಲ್ಕಾ ಭೀತಿಯಿಂ[9]ದಮೋಡಿ ಮ |
ಹಾಭಯಕೃತ್ಸೂಕರಂಗಳೇಂ ಪೊರ್ದುಗುಮೇ || ೯೧ ||

ಮಂತ್ರಂ—ಓಂ ನಮೋ ಭಗವತೇ ಸಿ(ದ್ಧ)ದ್ಧಿ ಚಾಮುಂಡೆ ಮುಂಡೆ[10] ನೀಲಿ ಕಾಳರಾಕ್ಷಸಿ ಏಹಿ ಛಿಂದ ಛಿಂದ ಉಜ್ಜೈಣಿ ಮಸಣಿ [11]ಅಪಿಂಡಂ ತಿಲಂತಭೂಮಿದಾಚಾಸಿದ್ಧಿ ಶಿವ ಬೊಗೆರಿ ಕಾಷ್ಠಂಗಾ ಶೂಲವೆ ಓಂ ಫಟ್ ಸ್ವಾಹಾ—

---

1. ಪ್ರವರ್ಧನ (ಗ) 2. ವೃಷಭಯಜಂಕ್ಷನಾಜ್ಞೆ (ಕ) 3. ತದ್ಗೃಹಾಭಿತರಾಖ್ಯಯೊಜಿಸಿ (ಕ) ತದ್ಘೃತಾಖ್ಯಮಂ (ಗ) 4. ತಳಿಯಲು (ಗ) ತಳಿಯಲಾ (ಕ) 5. ಮೇಯದುವೃಷಭಂ (ಕ) 6. ಪ್ರಿಯಾಕ್ಷಿಣಿ 7. ಮಾಮಾಮಾಯೆ ಮಹಂಮಾಯೆ ಯೆಂಗಟ್ಟು ದಿಶಾಂಗಟ್ಟು ವಿದಿಶಾಂ ಬಂಧನಾಯಸ್ವಾಹಾ (ಗ) 8. (ಕ್ಷೋ)ಶೋಭಿ (ಗ) 9. ಯಿಂದದೋಡಿ ಮಹಾಭಯ ಕ್ರೂರಶೂಕರಂಗಳೇಂ (ಗ) ಯಿಂದೆ ದೊಡ್ಡಿನ ಮಹಾ ಕೃತ್ಥೂಕ್ವರಂಗಳೇಂ (ಕ) ಈ ಪಾಠದಲ್ಲಿ ಭಯಕೃಚ್ಛಾಕ್ವರಂಗಳೇಂ ಎಂದಿರಬಹುದೆಂದು ತೋರುವುದು. 10. ಮುಂಡಿನೀಲಿ. 11. ಆಪದಂತಿ ಅಂಭಭೂಮಿ ವಾಚಾಸಿದ್ಧಿ ಶಿವಂ ಭೋಗೇಶ್ವರಿ ಕಾಷ್ಠಾಂಗವೇ ಶೂಲವೆ ಓಂ ಫಟ್ ಸ್ವಾಹಾ (ಗ)

* ಇದು (ಕ) ಪ್ರತಿಯಲ್ಲಿಲ್ಲ. (ಗ) ಪ್ರತಿಯಲ್ಲಿದೆ.

ಕಂ|| ವಿಲಸನ್ಮಂತ್ರಯುತಂ [1]ಕೂಂ |
ದಲ ನೇಣಿಂ ಮುಸಲಮಂಥಮಂ ಪೊರೆವುದುಲೂ ||
ಖಲಮಂ ಮೇಣ್ ಬಾಸುಲ್ಗಳ್ |
ಪುಲುಗುಡಿತೆಯ ಮೆಯ್ಯೊಳ್ತೀಳುಗುಂ [2]ತತ್‌ಕ್ಷಣದಿಂ || ೯೨ ||*

ಮಂತ್ರಂ—ಆಡುವಲ್ಲಿಯ ಭೋರುಗುಣದಿಂದನುವಿಂದಂ ತಿಕ್ಕೆನಮಂ ತಿಕ್ಕೆ ಗುರು ಪಂಚಸಿದ್ಧ—

ಕಂ|| ಒಸೆದೀ ಮಂತ್ರದೊಳಂ ಮಂ |
ತ್ರಿಸಿ ಕೊಂಡಿಡೆ ಭಸ್ಮಮಂ ತದೀಯಾಲಯದಾ ||
ದೆಸೆಗಂ ಹುಲುಗುಡಿತೆಗಳುಂ |
ಮಿಸುಕದೆ ಚಕಿತರ್ಕಳಾಗಿ ತೊಲಗುಗುಮದಱಿಂ || ೯೩ ||

## ಧೂಪಂ.

ಮಂತ್ರಂ—ಆಂಶಬರಿ ಕಿತ್ತಯ ಸಂಜಲೆ ಸ್ವಾಹಾ—

ಈ ಮಂತ್ರದಿಂದೆ.

ಕಂ|| ಪೊಕ್ಕಳವಿಮಾ ಮಂತ್ರದಿನೆ |
ಳ್ಳಿಕ್ಕಿಯ ಗಱಿಗಳನೆ ತಪ್ಪದಿಂ ಚಂದನದಿಂ ||
ದಿಕ್ಕಲ್ ಧೂಪಮನದು ತಾಂ |
ಧೊಕ್ಕನೆ ಫಣಿವೃಶ್ಚಿಕಾಖುವಿಷಮಂ ಕಳೆಗುಂ || ೯೪ ||

ತರಣಿಯ ಪರ್ಣಂಗಳುಮಂ |
ಬೆರಣಿಯ ಕಿಚ್ಚಿನೊಳಮಿಕ್ಕಿ ಕಾಸುಗೆ ಪೊಗೆಯಿಂ ||
ಗರಳದ ಪ್ರಣ್ಣುಂ ಬೇಗನೆ |
ಪರಿಹರಿಕುಂ ವಿಷಮಶೇಷಬುಧಜನಮಿತ್ರಾ || ೯೫ ||

ಕಾರೆಯ ಸೊಪ್ಪಿನ ಪೊಗೆಯಂ |
ಸ್ವೀಕರಿಸಿದ ವಿಷದ ಪುಣ್ಗಳಱಗುಮಮೋಘಂ ||
ವ್ಯಾಕುಳದಾ ವಿಷಮುಂ ಭೂ |
ಲೋಕಸ್ತುತ ಸುಕವಿ ವನಜವನಕಳಹಂಸಾ || ೯೬ ||

---

1. ಕೂದಲನೇಣಿಂ ಮುಸಲಮಂ ಪೊರೆವುದುದಲೂಖಲಮಂಬಾಸುಲ್ಗಳ್ (ಖ) 2. ಕ್ಷಣಮಾತ್ರಂ (ಗ)

* "ಕ್ಷಣಮಾತ್ರಂ" ಆದಮೇಲೆ, ಮಂತ್ರ—ಓಂ ನಮೋಭಗವತೆ ಪಾರ್ಶ್ವನಾಥಾಯ ಧರಣೇಂದ್ರ ಪದ್ಮಾವತೀಸಹಿತಾಯ ಶ್ರೀಉಜ್ಯಪಾದಸ್ವಾಮಿಗಳ ನಿರೂಪದಿಂ ನಾಗೇದಿ ಮಂತ್ರಿಸೆ - ಎಂಬ ಮಂತ್ರವಿದೆ (ಗ್ರಂಥವು ಬಹಳವಾಗಿ ಬಿಟ್ಟುಹೋಗಿದೆ.) (ಗ)



ವ|| [1]ವಿಷದಿಂದಾದ ಪುಣ್ಣಂ ಮಾಣಿಪ ಮದ್ದು—

ಕಂ|| ಕರಿಯುಮ್ಮತ್ತದ ಕಾಯ್ಗಳ |
ಕರಿಯಂ ಬೆಣ್ಣೆಯೊಳೆ ಕಲಸಿಡಲ್ [2]ಪುಣ್ಗಳ್ಗಂ ||
ಪರಿಹರಿಕುಂ ತದ್ವಿಷಮುಂ |
ಗುರುಕುಲಕಮಲಾರ್ಕಪೂಜ್ಯಪಾದರ ಮತದಿಂ || ೯೭ ||

ವ|| ಪುಣ್ಣಂ ತೊಳೆವ ಔಷಧಂ—

ಕಂ|| ಕೋಱಿಯ ಗಱಯಿಂ ವಿಷದಿಂ |
[3]ಚಾಳಿಸಿದಾ ಪುಣ್ಣನೊರಸಿ ತೊಳೆವುದು [4]ಕಱಯಿಂ ||
ಮೇಳಿಸಿದ ರಜನಿಯಿಂದು |
ನ್ಮೂಲಿಸುಗುಂ ಕಾಸಿ ತೊ[5]ಡೆದಿಡುತ್ತಿರೆ ಮದ್ದಂ || ೯೮ ||

ಹುಲಿಗಿ[6]ಲ್ಗೆಂಡೆಯುಮಂ ಮಂ |
ಡಲಮಾರಿಯೆನಿಪ್ಪದಿಪ್ಪೆಯರುಶಾಳಫಲಂ ||
[ಸಲೆ] ತೊಱೆಗಣಿಗಿಲಿವಂ ತಾಂ |
[7]ಜಲದಿಂದರೆ[ದಿಟ್ಟು] ತೊಳೆಯೆ ನಿರ್ವಿಷಮಕ್ಕುಂ || ೯೯ ||

ಪುಣ್ಣಿಗೆ ಪಿಂಡಿ—

ಕಂ|| ಅಲಸದಿರು ಮ(ಮು)ಂಡಸೀಗೆಯ |
ದಲಮಂ ತಂದರೆದು ತೊಳೆದು ಪುಣ್ಣಿನ ಬಾಯೊಳ್ ||
ನಿಲೆ ಪಿಂಡಿಯನಿಕ್ಕಲೊಡಂ |
ತೊಲಗೆ ವಿಷಂ ಸುಖದಿ[8]ನಿರ್ವನಾ ದಷ್ಟನವಂ || ೧೦೦ ||

ಶಾ|| ಮಾದು(ತೇ)ಂ ಪೋಗದೆ ತದ್ವಿಷಂ ನೆಲಸಿರಲ್ ಪುಣ್ಣಾಗಿ ಕೀತಿರ್ದೊಡಂ ||
ಬಾತುಂ ಬಾಧಿಸುತಿರ್ದೊಡಂ ತುಳಿದು [9]ಕೃಷ್ಣಾಖ್ಯಾತದುನ್ಮತ್ತ [10]ಮುಂ |
ಜಾತಂ ತದ್ರಸಮಾಗೆ [11]ಕೂಡಿರೆ ಸೆತಂ-ಮಾಱಿಪ್ಪದೊಳ್ಪಿಂದೆ ವಿ |
ಖ್ಯಾತಂ ಪೂಸಿದೊಡಂ [ವಿಷಂ] ತೊಲಗುಗುಂ ಪುಣ್ಣಾಱುಗುಂ ಕ್ಷಿಪ್ರದಿಂ ||೧೦೧||

ಕಂ|| ಫಣಿದಷ್ಟನ ಪುಣ್ ಬಾತೊಡೆ |
ಭಣಿತಮೆನಿಪ್ಪರ್ಕಮೂಲಮಂ ಗೋಕ್ಷೀರ ||
ಕ್ಕೆಣೆಯಾಗಿರಲ್ಕಮರೆದಿಡು |
ಮಣಿಯಿಸುಗುಂ ವಿಷಮನೆಂದನಭಿನವತಾರ್ಕ್ಷ್ಯಂ || ೧೦೨ ||

---

1. ವಿಷದಿಂದದಿಪುಣ್ಣಂ ಮಾಱ್ಪಮಂತ್ರಂ (ಕ), (ಈ ಮಂತ್ರವನ್ನು ಇಲ್ಲಿ ಹೇಳಿಲ್ಲ.) 2. ಪುಣ್ಣಕ್ಕಂ. 3. ಬಾ(ಘೋ)ಳಿಸಿದಾ (ಕ) 4. ಬಱಯಿಂ (ಕ) ಕರಿಯಿಂ (ಘ) 5. ಳೆಯುಲಿದು ಸಿದ್ಧಾಂತಂ (ಘ) 6. ಲ್ತಂಡಸೆಯುಂ (ಘ) 7. ಜಲದಿಂದರೆದು ತೊಳೆಯೆ (ಕ) 8. ನಿರ್ವಿಷಂ (ಖ) 9. ತಾಂ ಕೃಷ್ಣಾಖ್ಯದು (ಖ) 10. ಸಂ (ಕ) 11. ಕೂಡಿಸಿಕರಂ (ಕ) ಕೂಡಿನೆರಕರಂ (ಖ)

ಕಂ|| ಸಿರಿಸದ ಪಂಚಾಂಗಮುಮಂ |
ಗಿರಿಕರ್ಣಿಕೆ ನೀಲಿಯಂಗುರೆಂಬಿವನಂಭಃ ||
ಪರಿಮರ್ದಿತಮಂ [1]ಪುಣ್ಣೊಳ್ |
ನಿರುತಂ ಪೂಸಲ್ ವಿಷಂಗಳೆಲ್ಲಂ ಕಿಡುಗುಂ || ೧೦೩ ||

ಎಣ್ಣೆ ಮದ್ದು—

ಚಂ|| ಮೆಣಸಿಕೆ ಕೃಷ್ಣನೀಲಿ ಕುಟಜಂ ನಿ(ಗ)ಡು [2]ಗೊಂಡೆಯೆನಿಪ್ಪಿವೆಲ್ಲಮಂ |
ಗುಣನಿಧಿ ಸಾಧಿ[3]ಸಿಟ್ಟಡಿದು ಕತ್ತುರಿ ಗೂಡಿದ ಚೂರ್ಣಮಾದೊಡಂ ||
ದಣಕಿಸದಣ್ಣ ಪುಣ್ಣೊಳದ[4]ನೆಣ್ಣೆಯೊಳಟ್ಟು ವಿಡುತ್ತುಮಲ್ಲಿ ತತ್ |
ಕ್ಷಣದೊಳಮಂತ[5]ದ(ಕ್ಕೆ)ಲ್ಲಿ ಕರಿಯಂ ಬಿಡೆ ನಿರ್ವಿಷಮಕ್ಕು ಮಾತನೊಳ್|| ೧೦೪ ||

ಕಂ|| ಕ(ಕೊ)ಡಸಿಗೆ ಮೆಣಸಿಗೆ ಯಂಗುರು |
ಗಡಣದ [6]ಕಾತ(ಸ)ಱಿಕೆ ತೊಟ್ಟೆ ಯೆಂಬಿವಱಡಿಯೊಳ್(ಯಂ) ||
ಬಡಗಲ್ ಪರ್ಬಿದ ಬೇರ್ಗಳ |
[7]ಗದು(?)ಗೆಣ್ಣೆಯೊಳೆಱಿದು ಕರಿಯನಿಕ್ಕೆ ವಿಷಘ್ನಂ || ೧೦೫ ||

ಕಾಸರಿಕೆ ತೊ(ಗೊ)ಟ್ಟೆಯಿಪ್ಪೆ[8]ಯು |
ಮಾಸಡಿ ಮೆಣಸಿಗೆಯ ಬೇರ [9]ನಿಡಿದಡುವುದು [10]ಮಾ ||
ಕೇಸೆಗೆಯೆಣ್ಣೆಯೊಳಂತದ |
ನಾಸುರದಾಕ್ಷತದೊಳೆಱಿಯೆ ನಿರ್ವಿಷಮಕ್ಕುಂ || ೧೦೬ ||

ವ|| ಇನ್ನುಂ ಕರಿಯಂ ಮಾೞ್ಪೊಡೆ ಕ್ರಮಂ—

ಕಂ|| ಗರುಡನ [11]ಗೂಡಂ ಹಸ್ತಂ |
ಬೆರಸಿರಲರ್ಕನೊಳೆ ತಂದು ಮಾೞ್ಪುದು ಕರಿಯಂ |
ಕರಮುರಿದೆನಿಸಿದ ಪುಣ್ಣಿಂ |
ಗಿರದಿಕ್ಕೆ ವಿಷಘ್ನ [ಮದು] ಸುಕರ್ಮಕಳಾಢ್ಯಾ || ೧೦೭ ||

ಆಡಿನ ಹಿಕ್ಕೆಯನಾ ಹುಡಿ |
ಮಾಡಿಸಿದ ಭಯಾಖ್ಯಮೆಸೆವ ಹುಣಿಸೆಯ ದಳಮಂ ||
[12]ನೋಡರಿದ ಪ್ರತಿಮಂ ಕರಿ(ಲಿ) |
ಮಾಡುಗೆ ಪುಣ್ಗಿಡುಗೆ ವಿಷಮನಂತ(ದೆ)ವು ಕಳೆಗುಂ || ೧೦೮ ||

1. ಪುಣ್ಣೊಳಿರುತು...ಳೆಲ್ಲಾ ಕಿಡುಗುಂ (ಕ) 2. ಗೊಡೆ (ಕ) 3. ಸಿದ್ಧಿದಿಡು (ಕ) 4. ಳದಳೆಣ್ಣೆಯೊಳಟ್ಟುವಿಡುತ್ತಾಮಲ್ಲ (ಕ) 5. ದಲ್ಲಕ್ಕಿಕರಿ (ಕ) 6. ಕತ್ತರಿಕೆ (ಖ) ಕತ್ತಱಂಕೆಗೊಟ್ಟೆ (ಗ) 7. ನಡುಗೆಣ್ಣೆ (ಕ) 8. ಯಸಾಸದಿ (ಕ) 9. ಪಡುವುದು ಮಾತೆಪೇಱಿಣ್ಣೆಯೊಳು (ಕ) ನೀರದಡು (ಕ) 10. ಮಾತೇಸೆಳ್ಳೆಣ್ಣೆಯೊಳಂತಡನಾ (ಕ) ಮಾಕೇಸೆಗೆಯೊಳ್ಳೆಣ್ಣೆ (ಖ) 11. ಗೂಡಂಹಸ್ತಾ ತಂದುಕರಿಯಂ ಕದಮುರಿದೆನಿ (ಕ) ....ವರಹಸ್ತಾರ್ಕದೊಳಮುರಸಿತಂದುರೆ ಕರಿಯಂ (ಕ) 12. ನೋಡಿರಿಲಪ್ರ.



ಕಂ|| [1]ತೋಱಿಗಣಿಗಿಲೆ ನಾಯ್ವೞಿ ಪೆ |
ಗುರ್ಗರುಟಿಗೆ ಹೊಡೆಮರ(ಳ)ಲ್ದ ಹಚ್ಚೆಯೆಲೆ ಮೆಣಸಿಗೆ ನಾ ||
ಗುರು ಮಾರಿಯಜದ ಹಿಕ್ಕೆಗ |
ಳುರುತರದ ವಿಷಪ್ರಹಾರಿಗ[ಳ್] ಬೆರಸಲವ(ದ)ಂ || ೧೦೯ ||

ಮಗ್ಗಾಱಿಯ ಪಣ್ಗಳನವ |
ಱೊಗ್ಗಿನೊಳಾಗಿಸಿ ಬಱಿಕ್ಕಮಂತಾ [2]ಕರಿಯಿಂ ||
ದಗ್ಗಳಿಕೆವಡೆದ [3]ವಿಷಮಂ |
ಮಗ್ಗುಗು ಮಾಪುಣ್ಗಳಾಱುಗುಂ ಗುಣನಿಳಯಾ || ೧೧೦ ||

ಮರಿಚಂ ಬೊಪ್ಪಲಿ ಗುಳ್ಯಂ |
ಮರದರಿಸಿನಮೆಸೆವ ಹುಣಿಸೆಯೊಳ್ತಿಗುಡುಗಳೊಂ ||
ದಿರೆ ಸರ್ಪಾಕ್ಷಿಯುಮವಱೊಳ್ |
ಬೆರಸಿಡೆ [4]ಕಂಚ್ಯಾಲ(ದೆ) ವಿಹಿತಂ ಕರಿಯಕ್ಕುಂ || ೧೧೧ ||

ಹೆಗ್ಗುರುಟಿಗೆ ಹುಣಿಸೆಯ ತಿಗು |
ಡೆಗ್ಗಿಲ್ಲದ ಚಿನ್ನದಾರೆಯಲಿಯಿಕ್ಕಿದ ಸಂ ||
ದಗ್ಗಳದ ಹಿಕ್ಕೆ ಯಿವಱಿಂ |
ತ(ಕ)ಗ್ಗಿದ ಕರಿಯಖಿಳವಿಷಮ [5]ನಂತಾಱಿಸುಗುಂ || ೧೧೨ ||

ವರಮಿಂದ್ರವಾರುಣಿಯ ಬೇರ್ |
ಪರತರಮಾಬಿಂಡಿ(ದಿ)ಗಂ ಲಸ[6]ದ್ವರತರಮಾ ||
ಕರಿಗಂಡಂಗಿ ಯೆನಲ್ ಪರಿ |
ಹರಿಕುಂ ವಿಷದುರುವ ಪುಣ್ಗಳಂ ತತ್‌ಕ್ಷಣದಿಂ || ೧೧೩ ||

ಅಂಬಿಲದಿಂದರೆದರಿಸಿನ |
ಮಂ ಬೆರಸಿಯೆ ತೊಳೆದು ಪುಣ್ಗೆ ಹ(ಹೆ)ಬ್ಬೆಯ ದಳಮಂ ||
“ಕಿಂ ಬಹುನಾ” ಚೂರ್ಣಿಸಿ [7]ತಳಿ |
ಯಂಬುರುಹಂ ಹಿಮದೊಳಗಿದವೋಲ್ ವಿಷಮುಱಿಗುಂ || ೧೧೪ ||

ಅನಂತಗಾರುಡಂ—

ಮಂತ್ರಂ—ಓಂ, ಕ್ಷಿಃ ಅಮೃತವಾಹಿ ಸ್ವಾಹಾ—

ಕಂ|| ಕೋಪದೊಳಹಿ ಪಿಡಿದಾ ಸಂ |
ತಾಪಿತದೇಹಂಗೆ ಮಣ್ಣನೀಮಂತ್ರಮನಾ ||
ಳಾಪಿಸಿ ಕುಡೆ ತಿಂದಾತಂ |
ಕೈಪೆಯೆನಲ್ ಕೊಳಕನೆಂ[2]ಬು ದಿನಿದೆನೆ ಕುರ್ಯಂ || ೧೧೫ ||

1. ಕರಿಗಣಿ (ಕ) 2. ಕರಿಯಿಂದಗ್ಗಳಿತ್ತೆ ಎಂದಿರಬಹುದು (ಖ) ಕಾರ್ಯಂ ಅಗ್ಗ (ಕ) 3. ಪುಣ್ಗಳ ಸುಗ್ಗಿಸುಗುಂ ಬುಧಜನೈಕಮಿತ್ರನ ಮತದಿಂ (ಘ) ನೆಂಬುದಿನಿರೆದುಕಾರ್ಯಂ (ಕ) 4. ಕಂಚಾಲಮಿದು ಹಿತಂ ಕರಿಯನಿಡಲ್ (ಖ) 5. ನೆಲ್ಲಮಕಳೆಗುಂ (ಘ) 6. ತ್ಸುರುಚಿರಮಾಕರಿ ಕೌಡಂಗಿಗಳುಂ (ಘ) 7. ಕಳೆಯಂ (ಖ)

ಕಂ|| *ಹುಳಿಯಾದೊಡೆ ನಾಗನದುಂ |
ತಿಳಿ ಸಹಜಂ ಸ್ವಾದುವಾದೊಡಂ ಶಂಕೆಯಿನಾ ||
[1]ದೊಳ ವಿಷಮೆಂದೇ ಭಾವಿಪು |
ದಿಳೆಯೊಳ್ ಮಾಂತ್ರಿಕನಶೇಷ ಬುಧಜನಮಿತ್ರಾ || ೧೧೬ ||

ತನ್ಮಂತ್ರಂ—[ಓಂ ನಮೋಭಗವತೇ] ಅಸ್ತಂಗತಪಾದವು ಚಣದಿವಿ ಕರಿಯಾಗಿ ಜಳದೆ ಹರಿಸರ್ಪ ಹರಿಮರಿಸ್ವಾಹಾ.

ಕಂ|| ಈಮಂತ್ರದೊಳಂ ದಷ್ಟನ |
ನಾಮುವನಿಕ್ಕುವುದು ಪಠಿತಮಂತ್ರನ[2]ಸಂಗಂ ||
ನಾಮಧ್ಯಾನದೊಳಂದಭಿ |
ರಾಮಂ ತಂಬುಲಮನಿಕ್ಕೆ ನಿರ್ವಿಷಮಕ್ಕುಂ || ೧೧೭ ||

ತನ್ಮಂತ್ರಂ—ಓಂ ಪರಿಹಹರಿಕು (ತಾತಾಸಾ)ಸಾ ಪರಿಗರುಡಾ, ಪರಿಗರುಡಾ, ಅ(ತ)ಟ ಕಂಠಾಪುರ ಗರುಡಾ ಗರುಡ ಗರುಡಾ ಉಕ್ಕೆಂ (ಉಪ್ಪಲ) ಗರುಡಾ, ತಲೆದಿಂಬು ಗರು ಡೊ(ಡಾ)ಹಿಣಿ ಗರುಡಾ ಪೊಡಿಕುದ(ನಪ್ಪರು)ವಿಷ ಅತಿ ವಿಷ ನೀಲಕಂಠ ನಿರ್ವಿಷ ಸ್ವಾಹಾ—
ಓಂ ಗರುಡ ಪ್ರಸಾದ—

ಮಂದಾಕ್ರಾಂತಂ—ಈ ಮಂತ್ರೋಚ್ಚಾರಣದಿನಚ(ಚಿ)ರಂ ಮಂತ್ರಿಸಲ್ಕಂದು ದಷ್ಟಂ |
ಕ್ಷೇಮಂ ಬಾೞ್ಗುಂ ಕುಡುವುದು ಚಿರಂ [3]ಮಾಂತ್ರಿಕಂ ವೀಟಕಾಖ್ಯಂ ||
ತಾಮಾಗಲ್ ತೇದೆಳೆಗೆ ಶುಚಿ ತಾಂ ಮಾನಸಂ ಪೇೞ್ದನೆಂತುಂ |
ಸಾಮಾನ್ಯಗ್ರ್ಗಂ ತಿಳಿಗುಮೆ ಚಿರಂ ಭಾವಿಸಲ್ [4]ಪದ್ಮಬಂಧೂ || ೧೧೮ ||

ತನ್ಮಂತ್ರಂ—[5]ರಿದಳದ್ದಿ ಧವಳವಸ್ತ್ರಂ [6]ಧವಳಾಭರಣಂ ಶಂಖಪಾಳಧವಳಾ ಮವು ಭೈಸಣಂ ಬೈ[7]ಸಿದ್ದಿದೆ ಕಾಳಿಸು(ರ)ರಿ ಬ(ಜ)ಜ್ವರೆ ವಿಷಂ ಉತ್ಪತಿ ಗುರುಂಜೆ ಸಿದ್ಧಿ ಕೆರವೆ ನಾಮುಘೇತಿ ಗುರುಂಚ ಸಿದ್ಧಿ—

ಮಂದಾಕ್ರಾಂತಂ—ಪೇೞ್ದೀ ಮಂತ್ರ ಧ್ವನಿಯನೆ ಕರಂ ಕರ್ಣದಿಂ ಚಿತ್ತಗೊಟ್ಟುಂ |
ಕೇಳ್ದಾದಷ್ಟಂ[8]ಗಖಿಳ ವಿಕಳತ್ವಂ ದಿಟಂ ಪಿಂಗಿ ಪೋಕುಂ ||
ತಾಳ್ದುಂ ತನ್ನಿಂ ತೊಲಗಿದಕಲಾದಗ್ಧಮಂ ಮತ್ತೆನಂಜಂ |
ತೂ(ತಾ)ಳ್ದುಂ ಬಾೞ್ಗುಂ ಸುಕವಿ [9]ನಿಕರಾನಂದಕೃನ್ಮಂಗನಿಂದಂ || ೧೧೯ ||

ವ|| ಸುಣ್ಣದ ಕಟ್ಟನಿಕ್ಕುವ ಮಂತ್ರಂ—

ಓಂ ಇಂದ್ರ ಸುಣ್ಣ ಮೆಱೆಯೆರೆಯನಯ ಸುಣ್ಣ ಚಂದ್ರನಸುಣ್ಣ ಚಾಮುಂಡಿ ಸುಣ್ಣ, ಮಂದ್ರನ ಸುಣ್ಣ ಶ್ರೀ ಮಹಾದೇವರ ಸುಣ್ಣ ಇನ್ನು ಸುಣ್ಣಂ ಗೊಂಡು ನಾನೋಡಿ ಕಟ್ಟ ನಿಕ್ಕಲುವಿಷಂ ನಿರ್ವಿಷಮಾಗಿ ನೀರಂಕೊಂಡು ನೆಲಕ್ಕಿೞಿದು ಪೋಗು ಎನ್ನ ಗರುಡಾ - ಗುರು ಪ್ರಸಾದ.

---

1. ಮದು ವಿಷಮೆಂದು ವಿಚಾರಿಸುವುದು ಮಾಂತ್ರಿಕಜನರುಶೇಷ ಬುಧಜನಮಿತ್ರಾ (ಕ) ಈ ಪಾಠದಲ್ಲಿ ಪ್ರಾಸಿನ ದೋಷವುಂಟು. ಅಥವಾ ಎರಡು ಅರ್ಧ ಕಂದಗಳು ಸೇರಿ ಉಕ್ತವಾಗಿರಬೇಕು. 2. ನವಂಗಂ ಸಾ (ಸೋ)ಮಧ್ಯಾನ (ಕ) 3. ಮಂತ್ರಿತಂ ವಿಷ್ಟಿಕಾಖ್ಯಂ (ಕ) 4. ಪದ್ಮಬಂಧಂ. 5. ವಿವದದ್ಧಿ (ಖ) 6. ಧವಳವಿಮಳ ವಾಸುಗಿಭರಣಂ (ಖ) (ಹೆಚ್ಚಾಗಿದೆ) 7. ಸಿದ್ಧಿದೇವ (ಕ) 8. ಗಧಿಕ (ಕ) 9. ಸುಧಿ ಕವಿನುತಾನಂದ (ಕ) ಗಣಾ (ಎಂದಿರಬಹುದು) (ಕ)

* ಘುಳಿಯಾದೊರೆದನಾಗರದಂತಿ ಹಿಳಸಹಚಿ (ಕ) ಹುಳಿದೋಱದೊಡಾಗಳದಂತಿಳಿ (ಘ)



ಮಂದಾಕ್ರಾಂತಂ—ಚೂರ್ಣಂ ತಾನೆಂಬಿನಮತಿಮುದಂ ಬೆತ್ತುಮಿಾಮಂತ್ರದಿಂ ತ |
ಚ್ಚೂರ್ಣಂ [1]ಸುಣ್ಣಂ ಬಳಸಿರೆ ಮುರಧ್ವಂಸಿಯಾ ಚಕ್ರದಂತಾ ||
ಕೀರ್ಣಂ ಮಾಡಲ್ಕನುಪಮಮು[2]ದೀರ್ಣಾಂಗಮೆಂಬೌಷಧಂ ವಿ |
ಸ್ತೀರ್ಣಂ [3]ಮತ್ತೊಂದೆನೆ ಸುಖಮುಖಂ ಜೀವಿಕುಂ ದಷ್ಟದೇಹಂ || ೧೨೦ ||

ಹೀಲಿಯ ಕಟ್ಟನ ಮಂತ್ರಂ—

ಓಂ ತಿರಿ ವರ[4]ಮ್ಮೈಲಂ ಲದ್ಯದಾ ರನದು (?) ನಾಗೆಂ ಪ್ರಟ್ಟುವ ಚಟ್ಟುಪಂಡ ಪಿಲಿ - ವರಉಳ(ಳ್ಳ)ವಂ ಚಿಕಿಲ[5]ಸುಗುದಿಂದ್ರ [6]ನೀಲಗಿರಿ ಸಾಧಾರಣಿ(ದಾಳ) ನೀರಂಕೊಂಡು ನೆಲಕ್ಕೆ ವಿಷವಿೞಿದು ಪೋಗು ಯೆನ್ನಂ [7]ಗರುಡ ಗುರುಪ್ರಸಾದ—

ಮಂದಾಕ್ರಾಂತಂ|| ಲೋಕಖ್ಯಾತಂ ನಿರುಪಮಗುಣಾಧಾರನೀಮಂತ್ರದಿಂದಂ |
ಕೇಕೀಪತ್ರ(ಕ್ಷ)ಂಗಳೊಳಿಸೆ ಗುಣಂ ಕಟ್ಟನಿಕ್ಕಲ್ ವಿಷಂ ಕೊಂ ||
ಡೇಕಂ ತಾನೇ(ನು) ಂ ಪ್ರಶಮಿಸುಗುಮಾ ಮಂಗರಾಜೋಕ್ತಿಯಿಂ ಸು |
ಶ್ಲೋಕಂ [8]ತಾನಲ್ಲದೊಡೆ ನಗುಗುಂ ಸಜ್ಜನಾವ್ಯರ್ಥವಾಕ್ಯಂ || ೧೨೧ ||

ಮಂತ್ರಂ—ಓಂ ನಮೋಭಗವತೇ ರಕ್ತಾಂಗಿ ರಕ್ತಲೋಚನೇ ರಕ್ತಜಟೇ ಕಪಿಳ ಶರೀರೇ [9]ಹರ, ಮದ, ಭಂಜ, ಶೂಲೋಗ್ರಪಾಣಿ, ಉಗ್ರೆ(ಗ), ಚಡೆ, ತಷಿ(ತ್ವಷ್ಟು)ಕೃಷ್ಣೇ, ಅತಿ ಕೃಷ್ಣೇ ಇದಂ ಮಾನುಷಶರೀರಂ (ಅನು) ಪ್ರವಿಶ್ಯಭ್ರಮ, ಭ್ರಾಮಯ, ನೃತ್ಯ, ಬಹುರೂಪೆ, ಸರೂಪೆ, ವಿಲಾಸಿನಿ, ರಕ್ತೆ, ಕರಾಂಗಿ ಪೂರಯ, ಭಂಜಯ, ಆವೇಶಯ, ವಿಶ್ವರೂಪಿಣಿ, ರಕ್ತಪಟೆ, ರುದ್ರಾಜ್ಞಾಪಯತಿ ಹೂಂಫಟ್, [ಸ್ವಾಹಾ] [ - ]

ಮಂದಾಕ್ರಾಂತಂ|| ಸ್ವಸ್ಥಾವೇಶಕ್ಕಿದುವೆ ತಿಳದಂಗಲ್ತೆ ಪದ್ಮಾಲಯಂ ಶು |
ದ್ಧಸ್ನಾನಸ್ಥಂ ಬಿಸುಟು ಮುಳಿಸಂ ಸ್ನೇಹಮಂ ಭಾವಿಸಲ್ ಕಾ ||
ಮಸ್ಥಂ ಮಂತ್ರಂ ಜಪಿಸ ಮಳಿನಾಕಾರದಿಂದ(ಂ)ಕ್ಕುಮಾ? |
ರ(ದು)ಸ್ಥಂ ಜ್ಞೇಯಂಗಳನೆ ತಿಳಿಗುಂ ತತ್ಪ್ರಭು ಪ್ರಜ್ಞೆಯಿಂದಂ || ೧೨೨ ||

*(ಈ ಮಂದಾಕ್ರಾಂತಛಂದಸ್ಸಿನ ಅಯ್ದುವೃತ್ತಂಗಳುಂ [10]ವಿಚಾ[ರಾರ್ಹ]ಂಗಳ್.)

ಮಂತ್ರಂ—ಓಂ ನಮೋಭಗವತೇ ಪಾರ್ಶ್ವನಾಥಾಯ ಹ್ರಾಂ, ಹ್ರೀಂ, ಹ್ರೂಂ, [11]ಕಂಪಕಂಪ ಧುನಧುನ, ಪುರಾಣದಷ್ಟಮಾವೇಶಯ ಸ್ವಾಹಾ.

ಕಂ|| [12]ಈವಿವಿಧ ಮಂತ್ರದಿಂದೆಸೆ |
ವಾವೇಶಂ ತತ್ಪುರಾಣದಷ್ಟಂಗಕ್ಕುಂ ||
ಭೂವಳಯದೊಳೆಂದಂ ತಾಂ |
ದೇವಳಿಗೆ(ಗೆ)ಯ ಮುಖ್ಯನೆನಿಪ ವಿಭು ಮಂಗರಸಂ || ೧೨೩ ||

---

1. ಮಣ್ಣುಂ ಬೆರಸಿರೆ (ಘ) 2. ಡಿನ್ನಾಗ (ಖ) 3. ಮತ್ತುದಿಸೆ ಸುಖಮುಖಮಕ್ಕುಂ ವಲಂ ದಷ್ಟ ದೇಹಂ (ಘ) 4. ವೈ ಅಂ ಅಂ ವ್ಯಾಸಾರಾನಡುನಾನಪುಟ್ಟು ಚಟ್ಟು ಪಂಡುವಿಲಿ ಪಂಡಾನಿಲಿ (ಘ) 5. ಸಾಗುಚಂದ್ರ. 6. ನಿಲಿಸಿ. 7. ಗರುಡಂ (ಕ) 8. ತಾನಿಂತೊಡನೆ ಧರೆಯೊಳ್ ಸರ್ವಲೋಕೈಕಬಂಧೂ. (ಖ) 9. ಹರಹಜ (ಖ) 10. ವಿಚಾರಹ್ವಂಗಳು (ಕ) ರಾಹ್ವಯಂ (ಖ) 11. ದನುಕಂಸಪುಣ್ಣ (ಕ) 12. ಇನಿದಮಂತ್ರದಿಂದೆ (ಕ) ಈವಿಧದ ಮಂತ್ರಮಿದಱಿಂ । ದಾವೇಶಂ (ಖ)

ಮಂತ್ರಂ—ಓಂ ನಮೋಭಗವತೇ, ಚಂಡಗರುಡಾಯ, ಪಕ್ಷಿರಾಜಾಯ, ತೀಕ್ಷ್ಣ ದಂಷ್ಟ್ರಾಯ, ರೋಮಹರ್ಷಣಾಯ, ಭಯಂಕರಾಯ, ದುಷ್ಟನಾಶಕಾಯ, ವಿಷ್ಣುವಾಹನಾಯ, ಸುವರ್ಣಜಿಹ್ವಾಯ, ಹನಹನ - ದಹದಹ - ಪಚಪಚ - ಮಾರಯ-ಭಂಜ - ಗ್ರುಣಣ ರೋಹಣ ರೋಹಣ - ಪ(ತ)ಲ - ಹ(ತ)ಲ - ಛಿಂ(ದಿ)ದ - ಛಿಂ(ದಿ) - ಆವೇಶಯ ಆವೇಶಯ [1]ಠಹಂ - ಹೂಂ - ಕ್ಷಾಂ - ಕ್ಷೂಂ - ನಟನಟ - ನೃತ್ಯ - ಬ್ರೂಹಿ - ಹೂಂ ಫಟ್‌ಸ್ವಾಹಾ.

ಕಂ|| ಗರುಡಾಂಕನ ಮುಂ[2]ದರುಣದ |
ಕರವೀರಲತಾಂತದಿಂದೆ [3]ನೂಱ್‌[3]ಂಟಾಗಳ್(ಲ್) ||
ವಿರಚಿತಮಂತ್ರದಡೆಸೆಯಿಂ |
ನಿರುಪಮದಾವೇಶಮಪ್ಪ ದಹಿದಷ್ಟನೊಳಂ || ೧೨೪ ||

ಇದು ಪಾವುಕೆರೆಕೊಳೆವಾವಿಂಗೆ ಆ(ವೇ)ಶ[ದ ಕಾಲದಷ್ಟ]ಮಂತ್ರಂ. ೧೦೮ [4]ಪುಷ್ಪದಿಂ ಸಿದ್ಧಿ—ಗರುಡನಮುದ್ರೆ—

ತನ್ಮಂತ್ರಂ—ಓಂ ನಮೋ ಭಗವತೇ ಪಾರ್ಶ್ವನಾಥಾಯ, ಓಂ ನಮೋ ಸರ್ಪ, ಖಂಡ, ಓಂ ಸರ್ಪ ಛಿಂದ, ಓಂ ಸರ್ಪಛಿಂದ, ಏಹಿ ಘೇಂ - ಹೂಂ - ಫಟ್ - ಸ್ವಾಹಾ.

ಇದು ಕಾಲದಷ್ಟಮಂತ್ರಂ—೧೦೮ ಪುಷ್ಪಮಂ [5]ಗರುಡಮುದ್ರೆಯನಿಕ್ಕೆ ಸಿದ್ಧಿ—

ಕಂ|| ಇದಱಿಂ ಕೆಱ[3]ಕೊಳೆವಾವುಂ |
ಮುದನಾಗರ್ ಮಂಡಲಾದಿದಷ್ಟನನಾಗಳ್ ||
[6]ಪದೆಪಿಂ ಮಂತ್ರಿಸೆ ನುಡಿಗುಂ |
ಉದಯಿಸಿದಾವೇಶ(ದಿಂದ)ಮಕ್ಕುಮಿದು ಪರಮಾರ್ಥಂ || ೧೨೫ ||

### ಇನ್ನು ವ್ಯಾಘ್ರಮುಖಸ್ತಂಭನಮಂತ್ರಂ

*ಮಂತ್ರಂ—ಓಂ ನಮೋ ಭಗವತೇ ಪಾರ್ಶ್ವನಾಥಾಯ ಧರಣೇಂದ್ರ ಪದ್ಮಾವತೀ ಸಹಿತಾಯ ಶ್ರೀ ಪೂಜ್ಯಪಾದಸ್ವಾಮಿಗಳ ನಿರೂಪದಿಂ [7]ನಾನೋದಿ(ಡಿ) ಮಂತ್ರಿಸಿದೆನು. ಮಂತ್ರಂ ಬೆರಸುಕೆಯ್ಯಲಿ [8]ಕರ್ಬಾವ ಬಾಯಂಕಟ್ಟುವೆ [9]ಕರಡಿಯಬಾಯಂ ಕಟ್ಟುವೆ ಅಟ್ಟ ತಿಂಬಹುಲಿಯ ಬಾಯಂಕಟ್ಟು[10]ವೆ ಸರ್ಪನಬಾಯಂ ಕಟ್ಟುವೆ ಚೋರನಬಾಯಂ ಕಟ್ಟುವೆ ಅವು [11]ನೋಡುವ ನಾಲ್ಕುನಾಲ್ಕುದೃಷ್ಟಿಯಂ ಕಟ್ಟುವೆ ಕಂಭಕ್ಕೆ ಕಟ್ಟುವೆ [12]ಹಸುವಿನ ನಾಲ್ಕುಕಾಲಂ ಕೆಡೆ(ಹಿ)ಯ ಕಟ್ಟುವೆ ನಾಕಟ್ಟದ [13]ಕಟ್ಟುಕಟ್ಟು [14]ಓಜದಿಂ ಬಾಯಿಗೆ ಗುರುಪ್ರಸಾದ.

†ಕಂ|| ಮೋಳಿಸಿ [15]ಕಂಬಳಿಯೆಳೆಯಂ |
ಪೀಲಿಯುಮಂ ಪೊಸೆದ [16]ನೇಣನೀ ಮಂತ್ರದೊಳಂ ||
ದಾಳೋಚಿಸಿ ಗಂಟೆಪ್ಪ |
ತ್ತೇೞಾಗಲ್ ಕಟ್ಟನಿಕ್ಕೆ ವೊಪ್ಪುವ[17]ಕೊರಲೊಳ್ || ೧೨೬ ||

1. ಠಾವ್, ಠೂವ್, ಹೂಂ, ಕ್ಷೂವ್, ಕ್ಷ್ಮೂವ್ (ಕ) 2. ಮುಂದರಣದ (ಕ) 3. ನೂಱೊಂದಾಗಳ್ (ಕ) 4. ಪುಷ್ಪದಿಂ (ಕ) ಕೆಲವು ಕಣಿಗಿಲಹೂವಂ ಗರುಡನಮುಂದಿಕ್ಕೆ ಸಿದ್ಧಿಯಕ್ಕುಂ (ಖ) 5. ಗರುಡನ (ಕ) 6. ಮದನಾಗಲ್ (ಗ) ಪದಪಿಂದೆ (ಕ) 7. ನಾನೂಡಿ (ಕ) 8. ಕಬ್ಬಾವ (ಕ) ಕಚ್ಚಾವ (ಗ) 9. ಕರಡಿಯಬಾಯಂ ಕಟ್ಟುವೆ ಅಟ್ಟತಿಂಬ (ಗ) 10. ವೆತೋಳನಬಾಯಂ ಕಟ್ಟುವೆ (ಗ) 11. ನೋಡುವದೃಷ್ಟಿನಾಲ್ಕುಮಂ ಕಟ್ಟುವೆ (ಗ) ನೊಡುವಕಣ್ಣ ಕಟ್ಟುವೆ (ಘ) 12. ಹನುವಂತೆ (ಕ) ಹಸುತೆ (ಖ) 13. ಕಟ್ಟುವೋಜುಂಬಾಳಿಗೆ (ಗ) ಕಟ್ಟು ಓಂಜುಂ (ಕ) 14. ಓಜರಿಂ (ಕ) 15. ಕಂಬಿಯೊಳೆಳೆಯಂ (ಕ) 16. ಗೇನಾಗೀ (ಕ) ಜುಗೇನಗೀ (ಕ) 17. ಕಟ್ಟು ನಡೆವನೊಪ್ಪುವ ಕಾಲೊಳ್ (ಕ)

* ಇಲ್ಲಿಂದ (ಗ) ಪ್ರತಿಯಲ್ಲಿ ಆರಂಭ. † (ಗ) ಇಲ್ಲ.



*ಕಂ|| ಇಪ್ಪತ್ತೇೞ್ವರೆಗಂ ತಾ |
ನೊಪ್ಪುವ ಮಂತ್ರದೊಳ್ ಮಂತ್ರಿಸುತ್ತುಂ ಕಟ್ಟ ||
[1]ಲ್ಕಿಪ್ಪತ್ತುಱುಗಳೆ ಹುಲಿಯಿಂ |
ದಪ್ಪ ಭಯಂ ತಪ್ಪುಗುಂ ವಿವೇಕನಿಧಾನಾ || ೧೨೭ ||

ಮಂತ್ರಂ—ಓಂ ನಮೋಭಗವತೇ ಚಂಡೋಗ್ರಪಾರ್ಶ್ವನಾಥಾಯ ಸಕಳ ಕ್ಷುದ್ರೋಪದ್ರವ ನಿ(ರ್ನಾಶನಾ)ವಾರಣಾಯ [2]ಓಂ ನಮೋ ಸದಾ ಛಿಂದ,ಮುಂಚ [3]ರದೋಮಯ ಸ್ವಾಹಾ—

ಮಂತ್ರಂ= ಈ ಮಂತ್ರದಿಂ ಮೂಡಣಿಂ ಬಂದ ಹುಲಿಯ ಬಾಯಂ ಕಟ್ಟುವೆಂ, ಪಡುವಣಿಂ ಬಂದ ಹುಲಿಯ ಬಾಯಂ ಕಟ್ಟುವೆಂ,ಬಡಗಣಿಂ ಬಂದ ಹುಲಿಯ ಬಾಯಂ ಕಟ್ಟುವೆಂ, ತೆಂಕಣಿಂ ಬಂದ ಹುಲಿಯ ಬಾಯಂ ಕಟ್ಟುವೆಂ, ಯಮ[4]ದೂತನ ಬಾಯಂ ಕಟ್ಟುವೆ. ಸುತ್ತಿ ಬಂದು [ತಿಂಬ] ನಾಲ್ಕು ಕೋರದಾಡೆಯ[ಹುಲಿಯ]ಂ ಕಟ್ಟುವೆಂ ಓಂ ಗುರುಪ್ರಸಾದ—

ಈ ಮಂತ್ರದಿಂದೊಂಬತ್ತು [5]ಸೂೞ್ ಮಂತ್ರಿಸುವುದು, ಬಿಡುವೊಡೆ ಬಿಟ್ಟಿತ್ತೆಂದು ಮೂಱುಬಾರಿ ಮಂತ್ರಿಸುವುದು.

[6]ಅರಿಷ್ಟನೇಮಿ ಮಂತ್ರೋದ್ಧಾರಂ—ಓಂ ಣಮೋ ಭಗವದೇ ಅರಿಂಠಣೆಮಿಸ್ಸ. [7]ಅರಿಂರಿಣ, [8]ಬಂದೆಣ, ಬಂದಾಮಿ ರಕ್ಕಸಾಣಂ ಭೂಯಾಣಂ ಖೇಯರಾಣಂ, ಚೋರಾಣಂ [9]ಧಾರಯಣಂ ಸಾಯಣಿ [10]ಬಂಣತ ಮಹೋರಗಾಣಂ [11]ಆಣಿಚಿಕೆ ವಿದುರುತ್ಥಂ ಭತ್ಥಸ್ಸಂಭವಂತಿ ತೇಸದ್ವಿವನಾಂ ಮಹಾಂಗಳಿಂ ದಿಶ್ಥಿ ಬಂದಾಮಿ ದುಣು ಮಹಾದುಣು ಜ. ಠ. ಹೂಂಫಟ್ [ಸ್ವಾಹಾ]... ಇದರಿಠ್ಠಣೇಮಿಮಂತ್ರಂ.

ಕಂ|| [12]ಎಂಟು ಲಘೂಪಲಮಂ ಪಿಡಿ |
ದೆಂಟುಂ ದಿಕ್ಕಿ[13]ನೊಳೆ ಜಪಿಸಿ ನಿಕ್ಷೇಪಿಸೆ ತ ||
ತ್ಕಂಟಕಚೋರಾದಿಭಯಂ |
ಗೆಂಟೞೊಳಿರದೋಡುಗುಂ ಮಹಾಕ್ರೂರಮೃಗಂ || ೧೨೮ ||

*ಸಿರಿಸದ ಪೂ ಹುಲಿಗಿಲಿ ಕಾ |
ಯ್ವೆರಸಿದ ಮಡುವಾಗಲೆಂಬಿವಂ ಗೋಮೂತ್ರಂ ||
ಬೆರಸರೆದು ನಸ್ಯಕರ್ಮ |
ಕ್ಕಿರದೊಡರಿಸಲಹಿಕುಲೋಗ್ರವಿಷಮಂ ಕಳೆಗುಂ || ೧೨೯ ||

1. ಲ್ಕಿಪ್ಪತ್ತೆಂಟುಗಳೆ—ಪಿಂಗುಗುಂ (ಕ) 2. ಜಾವನೆಸದಾಛಿಂದ (ಗ) 3. ರಥೋಮಯ (ಗ) 4. ದೂತನಂ (ಗ) 5. ಸೂಳಂ ಮಂತ್ರಿಸುವುದು. ಮಂತ್ರಿಸಿ ಮತ್ತೆ ಬಿಟ್ಟೆನೆಂದು ಮೂಱುಸೂಳಂ ಮಂತ್ರಿಸುವುದು. 6. ಮಂತ್ರ—ಓಂ ನಮೋಭಗವತೆ ಅರಿಠ್ಠಷಣೆಮಿ (ಗ) 7. ಅರಿಠಣೆ (ಗ) 8. ಬಂಧೆನ ಬಂಧಮಿ ರಸಾಣಂ (ಕ) ರತ್ಸಸಾಣಂ (ಗ) 9. ಡಾರಾಯಣೇಣಂ, ಸಾಯಣೇಣಂ (ಗ) 10. ಣಂ ಮಹೋರಗಾಣಂ. 11. ಅಣ್ಣಜಿತೆಮಿದುಂಠಾ ಸಂಭವಂತಿತೇ ಸರ್ವೇಮಳಂ ಯಿಹುಂಗಯಿದ್ದಠ ಬಂಥಾಮಿಧಣು, ಮಹಾಧಣು ಜರಿಜರಿ ಜಿರಿ ಠ ಠ ಠ ಠ ಠ ಠ ಹೂಂಫಟ್ (ಗ) ಅಣ್ಣೇಜೋಕೆ ಮಿಧುರಾಸ್ಥಂಭವಂಕಿತೇ ಸರ್ವೇಮಣು ಮಲಹುಂಗ ಇಂದಿರಂ ಬಂದಾಮಿದಣುದಣು ಚಾ ಚಾ ಚಾ ಧಾ ಧಾ ಧಾ ಹೂಂಫಟ್ [ಸ್ವಾಹಾ] (ಖ) 12. ಎಂಟು ಲಘೋಪಮಂ (ಗ) 13. ನೊಳುಜಪಿಸ ತತ್ಕಂಠಕ ಚೋರಾರಿ ಭಯಂಗೆಂಟರಡೆನಿಲದೋಡುಗುಂ (ಗ)

*

ಕಂ|| ಆಲಸ್ಯಂಗೆಯ್ಯದೆ ಪೊಸ |
ನೀಲಿಯುಮಂ ನಸ್ಯವಿಧಿಗೆ ಮಾೞ್ಕೆ ಬುಧಂ ತ ||
ತ್ಕಾಲದೊಳಂ [1]ಮಣಿಶಿಲೆಯಂ |
ಪಾ(ಲಾ)ಲಿತಗುಣನಿಳಯನೆನಿಪ ಮಂಗನ ಮತದಿಂ || ೧೩೦ ||

ನುಗ್ಗಿಯ ಬೇರ್ ಸಿತಮರಿಚದೊ |
ಳೊಗ್ಗಿರೆ ಕೊಂಡರೆದು ಬಿಡದೆ ನಸ್ಯಂಗೆಯ್ಯ ||
ಲ್ಕಗ್ಗಲಿಸಿ[2]ದ ವಿಷಮುೞಿಗುಂ |
ಸುಗ್ಗಿಯ ಬೆಳ್ದಿಂಗಳಿದಿರ ಕೞ್ತಲೆ [3]ವೊಲದುಂ || ೧೩೧ ||

ಮಾತೇನಂಬಿಲದಿಂದಂ |
ಪಾತಾಳಗರುತ್ಮನೆಸೆವ ಗೆಡ್ಡೆಯನರೆದಿ ||
ನ್ನೇತೊದಳೊತ್ತೀಯಲೊಡಂ |
ವಾತಾಹತಮೇಘದಂತೆ ವಿಷಮುೞಿದಿರ್ಕುಂ || ೧೩೨ ||

ರೇವತಿ[4]ಯುಂಭರೆ ಸಿರಿಸದ |
ಭಾವದ ಬಂದಳಿಕೆ ಚಂದನ ಪ್ರಯುಕ್ತಮೆ[5]ನ ||
ಲ್ಕೋವದರೆದು ತೀವು ತಿರ |
ಲ್ಕೇವೇೞ್ವಿಂ ವಿಷಮುತರವಿಷಂ ಪಱಪಡೆಗುಂ || ೧೩೩ ||

[6]ಮಱಹಿಡಿಗೆ—

ಕಂ|| ಕನಕದ ಬೇರುಗಿ(ಸು)ನಿ(ಳಿ)ಯ ಎಳ |
ಗೊನರಂ ಜಂಭೀರ ಫಲಸಮೇತಂ ಲವಣಂ ||
ಸನಯಂ ತಡಸಿನ [7]ದಳಮೆಂ |
ಬಿ(ಟ)ನಿತುಮ[8]ನರೆದು ಗಱಯಿಂದೆ ಪೂಸುಗೆ ತನುವಂ || ೧೩೪ ||

*ಇಂತಿದಱಂ ಮಱಹಿಡಿ[ಕೆ]ಯ |
ಭ್ರಾಂತಿನೊ[9]ಳದಟುೞಿದು ಕಾಲ್ಗಳುಂ ಕೆಟ್ಟೊಡವಂ ||
ಗಂ ತಳುವಿಲ್ಲದೆ ತಕ್ಕ್ರಿಯೆ |
ಯಂ ತಾಂ ಮಾಡಲಿೞಿಗುಮದು ಮುನ್ನಿನವೋಲ್ || ೧೩೫ ||

ನೀಲಿಯ ಬೇರಂ ಪೂಸಲ್ |
ಸಾಲದೆ [ತಾಂ] ಪಲವುಮುಳ್ಳ ವಿಷಮಂ ಕಿಡಿಸಲ್ ||
ಭೂಲೋಕದೊಳಂ ಸದ್ಗುಣ |
ಪಾ(ಶೀ)ಲಂ ತಾನೆನಿಪ ಮಂಗರಾಜನ ಮತದಿಂ || ೧೩೬ ||

---

1. ಮೆಂಣ್ಣೆಯುಂ (ಕ) ಮೇಣ್ ನಯ. 2. ಸಿತ (ಕ) 3. ಪೋಲುಂ (ಕ) 4. ಬಂಭರೆಸಿರಿಸಿಯ (ಕ) 5. ನಲ್ಪೋವಡೆದೆರೆದುತಿವು (ಕ) ನಲ್ಪೋವದರೆದೊಳಿದುದುರೇವುವುದೇವೇೞ್ವಿಂ (ಖ) 6. ವಾಱುಹಿಡಿಗೆ (ಕ) ಮರು (ಖ) 7. ದಳವೆಂತೆನಿಕುಂಮನರೆದಮರಿಯಿಂದೆ ಪೂಸುಗೆ ತನುವಿಂ (ಗ) 8. ನರೆದುಮರಿ(ರೆ)ಯಿಂ ಪೂಸುಗೆ ತನುಗಂ (ಕ) 9. ಳದ ಉಳಿದಕಾಲ್ಗಳುಂ (ಕ)



ಕಂ|| [1]ಹುಲುಗಿಲ ಮೂಲಿಕೆಯಂ ತಾ |
ನಲಸದೆ ಕಾಂಜಿಕದೊಳರೆದು ಪೂಸಲೊಡಂ ಭೂ ||
ವಲಯ[2][ದತಿದುಷ್ಟ] ಗೋನಸ |
ಕುಲದ ವಿಷಂ ಕಿಡುಗುಮಲ್ಲಿ ಸಂದೆಗಮುಂಟೇ || ೧೩೭ ||

ತಂಡುಲವಾರಿಯೊಳಂ ನೀಂ |
ಕೊಂಡರೆ [3]ಲಜ್ಜಾಲು ಮೂಲಿಕಾನೀಲಿಗಳಂ ||
ಮಂಡಲ [4]ಸಂಭವವಿಷಮಂ |
ಖಂಡಿಸುಗುಂ ಸಕಳ(ಳೈಕ)ವೈದ್ಯಶಾಸ್ತ್ರವಿಳಾಸಾ || ೧೩೮ ||

ಬಂಜೆ ಮಡುವಾಗಲಂ ತಾ |
ನಂಜದೆ ಗೋಮೂತ್ರದೊಡನೆ ಕುಡಿಸಲ್ ಪಡೆವಾ ||
ತೇಂ [ಜವದೊಳೆ] ಗೋನಸಕುಲ |
[5][ಮೆಂ ಜಲಿ]ಸಿದ ವಿಷಗಳೞಿಗುಮೆಂಬರ್ ಪಿರಿಯರ್ || ೧೩೯ ||

ಮತ್ತೆನಿಸದೆತ್ತು ನಾಲಗೆ |
ಯುತ್ತಮತರಹೀರೆ ಮೇಣ್ ತ್ರಿಶೂಲಿಯುಮಂ ತಾಂ ||
ಬಿತ್ತರದಿಂ ಗೋಮೂತ್ರದೊ |
ಳಿತ್ತೊಡೆ ಕಳೆಗುಂ ಸಮಸ್ತ ಗೋನಸವಿಷಮಂ || ೧೪೦ ||

ಹಯಗಂಧಿಯ ಬೇರಂ ಕ್ಷೀ |
ರಯುತಂ (ತಾಂ) ಕುಡಿದು ತಿಂಗೆ ವಿಷಮಂ ಬೞಿಯಂ ||
ಕ್ಷಯಮಕ್ಕುಂ ಗರಳಂ ದು |
ರ್ನಯದೂರನೆನಿಪ್ಪ ಮಂಗರಾಜನ ಮತದಿಂ || || ೧೪೧ ||

## ನಿರ್ವಿಷದ ಉಂಗರ.

ಮಂ|| ಅಹುದೆಖ್ಖಂಡದ ತಾಮ್ರದುಂಗುರಮದೇ ತಾಂ ನಿರ್ವಿಷಂ, ಬಂದೊಡಾ |
ಗ್ರಹಣಂ ಕಾಲದೊಳಂದು [6]ಕಾಡ[ಗ]ಸೆಯಾ ಪಂಚಾಂಗಮಂ ದುಗ್ಧದಿಂ ||
ವಿಹಿತಂ [7]ತಾನೆನೆ ಪಾರದಾಖ್ಯದಿನದಂ ಸಮ್ಮರ್ದಿತಂ ಮಾಡಿ "ಕಿಂ ||
ಬಹುನಾ" ದ್ವಾದಶವಾರ[8] ಮಂತ್ರದಱೊಳಂ ಕಾಸಲ್ಕಿದ್ದ ಮೋಕ್ಷಾಂತಮುಂ || ೧೪೨ ||

---

1. ಹುಲಿಗಿಯುತಿ (ಕ) 2. ದೊಳತಿಶಯಗೋನಸ (ಕ) 3. ಲಜ್ಜಾರು—ನಿಶಿ (ಕ) 4. ಮಂಡಲಸಭವಿಷ (ಕ) 5. ದಿಂಜನಿಸಿದ (ಕ) 6. ಕಾಡಸೆಯ (ಕ) 7. ನಾನೆನಿಪಾವಿಕಾಖ್ಯನದಂ ಸಮರ್ದಿತಂ (ಕ) 8. ಮತ್ತದಱೊಳಂ (ಕ)

ಕಂ|| ಆವುಂಗರಮಂ ಮುಟ್ಟಿಸಿ |
ದಾ ವುದಕಮನೀಂಟಲಱಿಗುಮೆಲ್ಲಾ ವಿಷಮಾ ||
ಭೂವಳಯದೊಳಿಂದಂ ವಿಬು |
ಧಾವಳಿ [1]ವಿನುತಂ ಮನೋಜನಿಭ ಮಂಗಬುಧಂ || ೧೪೪ ||

ಉ|| ದೀಪದೆ ನಂಬಿರಲ್ಕಿದಱ ನಾಲ್ಕು ದಿನಂಗಳೊಳಲ್ಲದಂದು ನಿ |
ಷ್ಠಾಪನೆಯಾದೊಡಂ ಗ್ರಹಣದಂದನುರಾಗದೆ ತಂದು ಮೌನಿ ನಿ ||
ಷ್ಠಾಪಮೆನಿಪ್ಪ ಬಂಜೆ ಮಡುವಾಗಲ ಗೆಡ್ಡೆಯನಂತೆ ಸಣ್ಣಿಸಲ್ |
ತಾಪಿತ ತಾಮ್ರದೊಳ್ತಗಡನದ್ದುಗೆ ಕಾಸುಗೆ ಯಂತದರೊಳ್ [2]ಪುನಃ ಪುನಃ ||

ಕಂ|| ಹೆಗ್ಗುಱಿಟಿಗೆಯಂ ತುಱುಚಿಯ |
ನೊಗ್ಗಿರೆ ತಾಂ ಕೈಪೆ ಸೊರೆಯ ಬೇರ್ಗಳೊಳೆಲ್ಲಂ ||
ತಗ್ಗಳ ಮೂಸರ್ೂಳ್ಪರೆಗಂ |
ತೆಗ್ಗಿಲ್ಲದೆ ರಚಿಸಿ ಯಜಿಸಿ ತಂದದನೆ ವಲಂ || ೧೪೫ ||

ನೀರೊಳಗಿಟ್ಟಾ ನೀರಿಂ |
ದಾರಾನುಂ ಸ್ನಾನಪಾನಮಂ ಮಾಡಿದೊಡಂ ||
ಘೋರನೆ ಕಳೆಗುಂ ವಿಷಮುಂ |
ಕಾರುಣ್ಯನಿಧಾನ ಮಂಗರಾಜನ ಮತದಿಂ || ೧೪೬ ||

ಕೆಂಪಿನ ಕಣಿಗಿಲೆ ಯಿಶ್ವರಿ |
ಕೆಂಪಿನಪಾಮಾರ್ಗ ದಾಗುಡಿಗಳೆಂಬಿವಱೊಳ್ ||
ಸೊಂಪುಳ್ಳ ಬೇರ್ಗಳಂ ತಂ |
[3]ದುಂ ಪುಡಿ ಧನ್ವಂತರಿ ಪ್ರಸಿದ್ಧೌಷಧಿಗಳ್ || ೧೪೭ ||

ರಕ್ಷೆಯನಾಗಿಸಿ ಶುಭದಿನ |
ನಕ್ಷತ್ರದೊಳನುಪಮಾನಮಂತದನೀನಿಂ ||
ತೀಕ್ಷ್ಣಿಸಿ ಜಲದೊಳಮಿರಿಸಿದ |
ನಾಕ್ಷಣದೊಳ್ ಕುಡಿಸೆ ನಿರ್ವಿಷಂ ಸ್ನಾನದೊಳಂ || ೧೪೮ ||

ಮ|| ಬರೆ ತತ್ಸಿದ್ಧದಿನಂಗಳಂತವಱೊಳಂ ಸರ್ಪಾಕ್ಷಿಯೊಳ್ಮೂಲಮಂ |
ಗುರದೊಳ್ ತೀವಿರಲಿಕ್ಕಿ ಕಟ್ಟುವುದದಂ ಕರ್ಬೊನ್ನಳುಂ ಮುಟ್ಟದಂ ||
ತಿರಲಾವುಂಗುರಮಂ ಜಲಾಂತರದೊಳಿಟ್ಟಾವಾರಿಯಿಂ ಸ್ನಾನಮಂ |
ಗರುಡಧ್ಯಾನದಿನಾಗಿಸಲ್ಕೆ ಕುಡಿಸಲ್ಕಾವಾರಿಯಿಂ ನಿರ್ವಿಷಂ || ೧೪೯ ||

1. ಸಮ್ಮತ (ಕ) 2. ಪುನಃಪುನಂ (ಕ) 3. ದುಂಪಟು ಧನ್ವಂತರಿ (ಕ)



## ಸರ್ವ ವಿಷಹರಣಕ್ಕೆ.

ಲಲಿತವೃತ್ತಂ|| ಟಂಕಣ ನಿಶಾಮಧುಕ[1]ಮಿಲ್ಲಣ ರುಜಾಖ್ಯಮಿವೆ | ತಾಂ ಕರಮಿರಲ್ [2]ಸಮದೊ [ಳೊಂ] ದೆನಿಪ [ಭಾ]ಗಂ |
ಸಂಕಿಸದೆ ಮೋನದೊಳೆ ತಂದು ಘನನಾದಿಯನ | ದಂ ಕರಮೆ ರಕ್ಷಿತಮದೆಲ್ಲ ವಱ ತೂಕಂ ||
ತಾಂ ಕರಮಿರಲ್ [3]ಬೆರಸಿ [ಸೇವಿಪುದು] ಗೋಘೃತದೊ | ಳಂ ಕಲಸಿದಂತದಣ ಮಾಗಲದು ಕರ್ಷಂ |
ತಾಂಕರೆ(?)ಘನಂ ಗಡ ಬರ್ದುಂಕನವನೆನ್ನದಿರು ! | ಬಿಂಕದ ಚರಾಚರವಿಷಂ ಪರಿಗುಮೆಲ್ಲಂ || ೧೫೦ ||*

ಕಂ|| ಬರೆ ಕೃಷ್ಣ ಚತುರ್ದಶಿ ಪು |
ಟ್ಟರೆ ನೀಲಿ ಪ್ರೇತಭೂಮಿಯೊಳ್ ತಂದದನಿಂ ||
ತಿರಿಸರೆದು ನೀರೊಳೀಂಟಲ್ |
ಚರಾಚರಂಗಳ ವಿಷಂಗಳುಂ ನಿಂದಪುವೇ || ೧೫೧ ||

ಕ(ಖ)ರಕರ್ಣಿ ದೇವದಾಳಿಯ |
ವರಬೀಜಂ ನೀಲಿ ಗದುಗಿನೆಲೆ ಅಂಜಿಗೆಯಂ ||
ಸರಿಮಾಡಿ ಕೂಡಿ ಮೆಲಲಾ |
ಪುರುಷಂ ಖಗರಾಜನೆಂದುವಂಜುಗುಮಹಿಗಳ್ || ೧೫೨ ||

ಮರಿಚಂ ಸೈಂಧವಮೆಂಬೀ |
ಯೆರಡಂ ಸಮಮಾಗಿ ಕೊಂಡು ನಿಂಬದ ಬೀಜೋ ||
ತ್ಕರಮಂ ಪಯೋಘೃತಂಗಳ್ |
ಬೆರಸೀಂಟೆ ಚರಾಚ[ರಾದಿ] ವಿಷ ಪರಿದಳಿಗುಂ || ೧೫೩ ||

ರಥೋದ್ಧತಂ|| ನಂಜೆ ಭೆಟ್ಟತ್ತುಗಡೆಂಬ ಶಂಕೆಯಿಂ |
ದಂಜಲೇಕೆ ಮಡವಾಗಲೆಂಬುದಂ ||
ಬಂಜೆಯಪ್ಪುದನೆ ನಸ್ಯದಿಂದೆ ಮ |
ತ್ತಂಜದೀಂಟೆ ತೊಡೆಯಲ್ ವಿಷಾಪಹಂ || ೧೫೪ ||

ರಥೋದ್ಧತಂ|| ಒಂದೆಯಪ್ಪ ಮಡುವಾಗಲೊಂದಱಿಂ |
ಸಂಧಿಸಿರ್ದ ವಿಷಮೆಯ್ದೆ ಪಿಂಗುಗುಂ ||
ಸಿಂಧುವೆಲ್ಲೆ ವರಮೆಯ್ದೆ ಭವ್ಯರೊಳ್ |
ಬಂಧುವಪ್ಪ ವರ ಮಂಗ[4]ನಾಜ್ಞೆಯಿಂ || ೧೫೫ ||

1. ಬಿಲ್ವರಾಜಾಖ್ಯ (ಕ) 2. ಸಮದೊಳೆಂದೆನಿಪಭರಂ (ಕ) 3. ತಾಂಕರಮಿರಲ್ ಬೆರಸಿ ಗೋಘೃತದೊಳಂ ಕಲಸಿ ಸೇವಿಸುವುದಂತದಣಮಾಗಲದು ಕರುಷಂ (ಕ) 4. ನೋಜೆಯಿಂ (ಕ)

* ಈ ವೃತ್ತದಲ್ಲಿ ಮಾತ್ರ ತಮಿಳ್ ತೆಲುಗು ಭಾಷೆಗಳಲ್ಲಿರುವಂತೆ ಪ್ರಾಸ ಯತಿ ಯಿದೆ (ತಮಿಳ್ - ಮೋನೈ) 1. ಟಂಕಣ——ತಾಂಕರ. 3. ತಾಂಕರಮಿ——ಳಂಕಲಸಿ. 2. ಸಂಕಿಸದೆ——ದಂಕರಮೆ. 4. ತಾಂಕರ——ಬಿಂಕದ.

ಉ|| ಮಾಳತಿ ದೇವದಾರವುದುರ್ವಳ್ಳಿ ಕುರುಂಟಗೆ ದೇವದಾಳಿ ಸ |
ದ್ರಾಳ ವಚಾಜಮೋದ ವರುಶಾಳ ಘನಂ ಸದಲಾಬುನಿಂಬಮುಂ ||
ವಾಳುಕಿ ಲುಂಗ ಭಾಸ್ಕರ ಲವಂಗ ತಮಾಳಕ ನಾಗಕೇಸರಂ |
ಮೇಳಿಸಿ ಕೂಡಿಕೊಂಡು ನವಹಿಪ್ಪಲಿಯಂ[1]ಕರಿಯಾವಿಕಾಖ್ಯದಿಂ || ೧೫೬ ||

ಕಂ|| ಅಡುವುದದಂ ತತ್‌ಕ್ಷೀರದೆ |
ತಡೆಯದೆ ಉಣ್ಬುದು ಬಱಿಕ್ಕೆ ಕಾಳೋರಗನಿಂ ||
ಮಡಿಯ ನರನೆಂದು ಕರುಣದೆ |
ನುಡಿದಂ ಗಡ ಗರುಡನೆಂಬರಿದು ಕೇವಳಮೇಂ || ೧೫೭ ||

ಗಿರಿಕನ್ನೆ ಕುಮಾರಿಯ ಬೇರ್ |
ಗಿರಿಮಲ್ಲಿಗೆಗಳ ಕೊನರ್ಗುಡೂಚಿಗಳೊಂದಾ ||
ಗಿರೆ ಸಿದ್ಧಿದಿನದೊಳಡುವುದು |
ಪರಮಾನ್ನಮನೊಸೆದು ಕಾಳಿಯಾವಿನ ಪಾಲಿಂ || ೧೫೮ ||

ಘನಸಾರಯುಕ್ತಮೆನಲುಂ |
ಡ ನರಂಗಂ ವತ್ಸರಂಬರಂ ನಿರ್ವಿಷಮೆಂ ||
ದನುಪಮಗುಣನಿಧಿ ಮಂಗಂ |
ಜಿನಮತದಿಂ ಪೇಳ್ದನಖಿಳಜನಮಱಿವಿನೆಗಂ || ೧೫೯ ||

ಉ|| ಎಕ್ಕೆಯ ಮಾದಲಂಗಳ ಮೊದಲ್ಗಳನೊಂದನೊಂದಱೊಳ್ |
ತಕ್ಕುದೆನಲ್ಕೆ ಪಲ್ಲಟಿಸಿ ತನ್ನ(ದ್ಭ?)ವ ಸಂಭವಮೂಲಮಪ್ಪವಂ ||
ಚಿಕ್ಕನೆ ಕ್ಷೋಣದಿಂ ತರಿಸಿ ಕೂಡಡುಗಾಡಿನ ತಕ್ರಮೊಂದೆ ಕೂ |
ಡೆಕ್ಕೆಯಡಲ್ಕಮಂಬಲಿಯುಮಂ ಕೊಱೆಯಕ್ಕಿಯೊಳಂ ಬಱಿಕ್ಕದಂ || ೧೬೦ ||

ಕಂ|| ಎಂಬುದು ಸಿದ್ಧದಿನಂ ಕೊಱೆ |
ಯಂಬಲಿಯನದಂ ಬಱಿಕ್ಕಮಿಮ್ಮಡಿ ಷಣ್ಮಾ |
ಸಂಬರ ವಿಷಮಿಲ್ಲವನಂ |
ತಿಂಬುದುಮಾ ತಿಂದ ಫಣಿಯದಾಗಳೆ ಸಾಯ್ಗುಂ || ೧೬೧ ||

ಕಿಱುದೆಂಗಿನ ಬೇರಂ ತಾಂ |
ಕರಿಯಕ್ಕಿಯೊಳಾಡಿನಳೆಯೊಳಟ್ಟಂಬಲಿಯಂ ||
ಸುರಿ ವರುಷಂ ಬರ[ಮುಂ]ಜನ |
ಮಱಿಯಲ್ ವಿಷಮಿಲ್ಲಮವನನಹಿ ಕೊಳೆ ಮಡಿಗುಂ || ೧೬೨ ||

1. ಕಯಾವಿಕಾಖ್ಯದಿಂ (ಕ) ತವನಾವಿಕಾಜ್ಯದಿಂ (ಖ)



ಕಂ|| ಎಕ್ಕೆಯ ಬೇರ್ ಪೂವು[ಮ]ನೊಡ |
ನಿಕ್ಕೆ ಸಮಂ ಚೂರ್ಣಮಾಗಿ ಜಲದಿಂ ಕುಡಿಯಲ್ ||
ನಿಕ್ಕುವಮೇನಱುದಿಂಗಳ್ |
ಬಕ್ಕುಮದೆಂಬಿನೆಗಮಾ ನರಂ ವಿಷದೂರಂ || ೧೬೩ ||

ಬಿಳಿಯುಗಿನಿಯ ಬೇರಂ ನಿ |
ಶ್ಚಳಮತಿಯಿಂ[1] [ತಂ]ದು ಪುಷ್ಯತಾರೆಯೊಳಂ ನೀ ||
ರೊಳೆ ಬೆರಸಿ ಕುಡಿಯೆ [2]ವಿಷದಿಂ |
ದಱಿಯಂ ತನ್ನರನೆ ವತ್ಸರಂ ಬರ್ಪಿನೆಗಂ || ೧೬೪ ||

ವರಪುಷ್ಯಾರ್ಕದ ದಿವಸಂ |
ಸಿರಿಸದ ಮೂಲಮನೆ ತಂದು ತಂಡುಲಜಲದಿಂ ||
ದರೆದೀಂ[3]ಟಲೊಡಂ ವರ್ಷಂ |
ಬರಮುಂ [4]ತತ್ಪಾ[ಯಿ]ಗೆಯ್ದಲಾಱದು ಗರಳಂ || ೧೬೫ ||

*ಪೂರ್ಣಹಿತಂ ತಚ್ಛ್ವೇತಪು |
ನರ್ನವಿಯಂ ಪುಷ್ಯತಾರೆಯೊಳ್ ತಂದುದುಮಂ ||
ಚೂರ್ಣಿಸಿ ನೀರೊಳ್ ಕುಡಿಗಾ |
ಪೂರ್ಣಂ ಸಂವತ್ಸರಂಬರಂ ನಿರ್ವಿಷದಂ || ೧೬೬ ||

ಇನವಾರದಮಾವಾಸ್ಯೆ[ಯ] |
ದಿನದೊಳ್ ದಾಗುಡಿಯ ಬಂಜೆಮಡುವಾಗಲ[5]ಸೊಂ ||
ಪಿನ[6]ಕಿಱಿದಡಸಿಗೆಯೆಲೆಯಂ |
ತಿನಲಾತಂ [7]ಗಿಲ್ಲ ವಿಷಮುದಾ ವರ್ಷಾಂತಂ || ೧೬೭ ||

†ದೀವಳಿಗೆಯ ಬಾವುದಿನಂ |
ಭಾವಿಸಿ ಶುದ್ಧಾತ್ಮನಾಗಿ ವೃಕ್ಷಾದಿಯ ಪ ||
ತ್ರಾವಳಿಯಂ ಬಲ್ಲಂ ಸಮ |
ನೇವೇಱಿಸ್ವಂ ಮೆಲುಗೆ ನಿರ್ವಿಷಂ ವರ್ಷಾಂತಂ || ೧೬೮ ||

ತರಳವೃತ್ತಂ|| ‡ಬಿಳಿಯ ಕನ್ನೆ ಕುಮಾರಿಯಂ ರವಿಪುಷ್ಪಮಂ ಬೆರಸಂಬುವಿಂ |
ಚಳಿಯದಿಂದರೆದಂತದಂ ಕುಡಿಸಲ್ಕೆ [8]ತದ್ವರುಷಂಬರಂ ||
ಖಳಫಣಿಪ್ರಮುಖಂಗಳಾ ವಿಷಮಾತನೊಳ್[9] ತೆ[ಗ]ಳಲ್ತೆ ದೇ |
ವಳಿಗೆ ನಾಡ ಮಹಾಪ್ರಭು ಪ್ರಥಿತೋಕ್ತಮಿಂತಿದು ಲೋಕದೊಳ್ || ೧೬೯ ||

1. ಮತಿಯಿಂದು ಪುಷ್ಯ (ಕ) 2. ವಿಷದಿದಂ ದಿಳಿಯಂ ತನ್ನರಂವತ್ಸ (ಕ) 3. ಲೊಂದುವರ್ಷಂ(ಗ)
4. ತತ್ಸವಿಗೆಯ್ದ (ಕ) 5. ಸೊಪ್ಪಿನ (ಗ) 6. ಕಿಱುಗಡಸಿಗೆ (ಗ) 7. ನಿಕ್ಕುವಿಷಮುದಂ ವರ್ಷಾತಂ(ಗ)
8. ತದ್ವರ್ಷಂಬರಂ (ಕ) 9. ನೊಳ್ತೆಳಲ್ತೆ (ಕ)
* ಇಲ್ಲಿಯುವರೆಗೂ (ಗ) ಪ್ರತಿಯಲ್ಲಿಲ್ಲ.
† ಇದು (ಗ) ಪ್ರತಿಯಲ್ಲಿ ಮಾತ್ರವಿದೆ.
‡ ಇದು (ಗ) ಪ್ರತಿಯಲ್ಲಿಲ್ಲ.

ಚಂ|| ಧರೆಯ ಜನೋ[1]ಪಕಾರಕಮ ನಿಂತಿದನೆನ್ನ ಮನೋನುರಾಗದಿಂ |
ವಿರಚಿಸಿದೆಂ[2] ಖಗೇಂದ್ರಮಣಿದರ್ಪಣಮೆಂಬಭಿಧಾನದಿಂದೆ ಮ ||
ಚ್ಚರಿಸ[3]ದಿದಂ ಪರೀಕ್ಷಿಪುದು ಮಾೞ್ಪುದು ನಿಮ್ಮಯ [4]ಭಾವ ಹಸ್ತದಿಂ |
ಸುರುಚಿರವಾಗೆ [5]ಮಂಗಣ ಬುಧಂಗೆ ಸಹಾಯರೆನಲ್ಕೆ ಪಂಡಿತರ್ || ೧೭೦ ||

ಮ||* ನೃಪಶಾರ್ದೂಲ [6]ಸಭಾಂತರಾಳದೊಳಶೇಷಪ್ರಜ್ಞರುಂ ಸರ್ವಶಾ |
ಸ್ತ್ರಪಯೋರಾಶಿ[9] [7][ಗ]ಳಸ್ಮದೀಯಕೃತಿಯಂ ಸದ್ಭಾವದಿಂ [8]ನೋಡಿ [ನೋ ||
ಡಿ] ಪುರೋವೃದ್ಧಿಯ ನೆಯ್ದುವಂತಿರಲಿದಂ [9]ಮಾೞ್ಪುಜ್ಜುಗಂ ನಿಮ್ಮದೆಂ |
ದು ಪದದ್ವಂದ್ವದೊಳಿಕ್ಕುವೆಂ ಕುಸುಮಮಂ ಮನ್ಮಾತೆ ವಾಗ್ದೇವಿಯಾ || ೧೭೧ ||

ಕಂ|| *ಷೋಡಶ ಭಾವನೆಯಂತೀ |
ಷೋಡಶವಧಿಕಾರವೆಲ್ಲವಂ ಭಾವಿಸುತುಂ ||
ನೋಡೆ ಮನದೆಱಕದಿಂದಂ |
ಮಾಡುಗೆ ತಾಂ ಯಂತ್ರ ಮಂತ್ರ ತಂತ್ರಂಗಳುಮಂ || ೧೭೨ ||

*ಇಂತೀ ಪ್ರಯೋಗಮಂ ತಾಂ |
ಸಂತತ ದಯೆವೆರಸಿ ಮಾಡೆ ಸಫಲಮದಕ್ಕುಂ ||
ಕಂತುಹರ ಪೂಜ್ಯಪಾದರು |
ಮಂತೀ ಮಂಗಣ[10]ನೆ ಪೇೞ್ದರಮಳಗುಣಾಢ್ಯರ್ || ೧೭೩ ||

*ಗುರುಜನ ಪಿರಿಯರ್ [11]ನೋಡಿಯೆ |
ಉರುತರಗುಣಿಗಳ್ಗೆ ಪೇೞ್ಗೆ ಸಾಧ್ಯಂ ವಿದ್ಯಂ ||
ಕರಧೂರ್ತ ಕಷ್ಟ ದುಷ್ಟಂ |
ಗಿರದೀಯಲ್ ನಷ್ಟವಿದ್ಯೆಯಪ್ಪುದು ಪುಸಿಯೇ || ೧೭೪ ||

*ಸೊಲ್ಲಿಸೆ ಕಿಡುಗುಂ ಮಂತ್ರಂ |
ಸೊಲ್ಲಿಸಿದೊಡೆ ಕಿಡುಗು [12]ಯಂತ್ರ ತಂತ್ರಂಗಳ್ ತಾಂ ||
ಮೆಲ್ಲನೆ ಯೋಜಿಸಿ ಮಾಡ |
ಲ್ಕೆಲ್ಲಾ ಕರ್ಮಂಗಳಲ್ಲಿ ಬರ್ಕುಂ ಕ್ರಮದಿಂ || ೧೭೫ ||

*ಸಾರಾಸಾರಮನಱಿಯದೆ |
ಯಾರಾನುಂ ಕೇಳೆ ಪೇೞ್ದೊಡಾ ಭೇಷಜಮಂ ||
ಸಾರಂಗಿಡುಗುಂ ಮತ್ತಾ |
ಧೀರಂ ಸಾರಂಗೆ ಪೇೞ್ವುದೀ ಗ್ರಂಥಮುಮಂ || ೧೭೬ ||

1. ಪಕಾರಮನಿಂತಿದ (ಕ) 2. ವಿರಚಿಸಿ ಖ (ಗ) 3. ಚ್ಚರಿಸದಪರೀ (ಕ) 4. ಭಾನಹಸ್ತದಿಂ (ಕ) 5. ಮಂಗಬುಧಂಗೆ (ಗ) 6. ದೂರ್ಲನುಭಾಂತ (ಗ) 7. ರಾಶಿಗಳ್ಮದೀಯ (ಗ) 8. ದಿಂನೋಡಿ ಪುರೋವೃದ್ಧಿ (ಗ) 9. ಮಾೞ್ಕುಜ್ಜುಗಂ (ಗ) 10. ಮಂಗಣನುಪೇೞ್ದ (ಕ) 11. ನೋಡಿಯಱಿ 12. ಯಂತ್ರ ತಂತ್ರ ಮಂತ್ರಂಗಳ್‌ತಾಂ (ಕ)

* ಇದು (ಗ) ಪ್ರತಿಯಲ್ಲಿ ಮಾತ್ರವಿದೆ.



ವ|| ಅಂತು ಪ್ರಯತ್ನ ಪರನಾಗಿ ಗ್ರಂಥಮಂ ಸಾಧ್ಯಂಮಾೞ್ಪುದು—

ಚಂ|| *ಪರಪುರುಷಾರ್ಥಮಪ್ಪವೊಲಿದಂ ಮುದದಿಂ ತಿಳಿದೊಪ್ಪೆ ಪೇೞ್ವೆನಾಂ |
ಪುರು ಪರಮಾತ್ಮನುಕ್ತಿಯಿನಶೇಷಬುಧರ್ ನೆಱೆ[3] [1]ನೋಡೆ ಪೇೞ್ದ [ನಾಂ] ||
ಹರಿಹರ ಭೂಭುಜ ಪ್ರಥಿತ ಕೀರ್ತಿರಮಾರಮಣೀಯದಂತೆ ಸ |
ಚ್ಚರಿ [ತಮಿದಿಂ]ತಿದುಂ [2]ಪರೆಗೆ ಲೋಕದೊಳೆಲ್ಲೆಡೆಗಂ ನಿರಂತರಂ || ೧೭೭ ||

ಸ್ರ|| *ಸೋಮಂ ಪ್ರೇಮಾಸ್ಪದಂ ಬೀರುಗುಮಿಳೆಗೆ ಸುಧಾಸಾರಮಂ, ಚಂದ್ರನೆಂತಂ |
ತೀ ಮಂತ್ರಾದಿಪ್ರಯೋಗಂ ಕೃತಿ, ವಿಷದಹನಾಘೋಪಮಂ ಮಾರಿಕುಂ ಸು ||
ಕ್ಷೇಮಂ ಧರ್ಮಾರ್ಥಕಾಮಂಗಳ ನಿಳಯಮಿಳಾಬ್ಜಾರ್ಕರುಳ್ಳನ್ನೆಗಂ ಶ್ರೀ ||
ಧಾಮಂ ತಾವಿಂತಿವೆಂದುಂ ನೆಲಸುಗೆ ವಸುಧಾಚಕ್ರದೊಳ್ ಮಾನನೀಯಂ || ೧೭೮ ||

— ಗದ್ಯ —

ಇದು

ಸಕಲವಿದಮಲ ಜಿನೇಂದ್ರೋಕ್ತಸಿದ್ಧಾಂತಪಯಃಪಯೋನಿಧಿಪಾರಗ
ಶ್ರೀಪೂಜ್ಯಪಾದಮುನೀಂದ್ರ ಚಾರುಚರಣಾರವಿಂದ
ಗಂಧಗುಣಾನಂದಿತಮಾನಸಂ
ಶ್ರೀಮದಖಿಲಕಲಾಗಮೋತ್ತುಂಗ
**ಮಂಗವಿಭು**
ವಿರಚಿತಮಪ್ಪ

## ಖಗೇಂದ್ರಮಣಿದರ್ಪಣದೊಳ್

[3]ನಿರ್ವಿಷೀಕರಣ ಚಿಕಿತ್ಸಾವಿವರಣಂ
ಷೋಡಶಾಧಿಕಾರಂ
ಸಮಾಪ್ತಂ.

ಖಗೇಂದ್ರಮಣಿದರ್ಪಣಂ
ಸಮಾಪ್ತಂ.
(ಮಂಗಳಮಹಾಶ್ರೀ.)

1. ನೋಡಿ(ಗ) 2. ಪರಗೆ-ದೊಳೆಲೆಡೆಗಂ (ಗ) 3. ದರ್ಪಣದೊಳ್ ಷೋಡಶಾಧಿಕಾರಂ ಸಮಾಪ್ತಂ(ಕ) ಸಮಸ್ತ ನಿರ್ವಿಷಚಿಕಿತ್ಸಾಪ್ರಕರಣಮೆಂಬ ಪದಿನಾರನೆಯಧಿಕಾರ ಮಿಲ್ಲಿಗೆ ಸಮಾಪ್ತಮಾದುದು (ಗ)

* ಇದು (ಗ) ಪ್ರತಿಯಲ್ಲಿ ಮಾತ್ರವಿದೆ.

# ಪರಿಶಿಷ್ಟ ೧

ವೃತ್ತಜಾತಿ ಸಂಖ್ಯೆಗಳನ್ನು ತೋರಿಸುವ ಪಟ್ಟಿ.

| | ವೃತ್ತಗಳ ಹೆಸರು | ಅಧಿಕಾರಗಳ ಸಂಖ್ಯೆ. | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | ಒಟ್ಟುವೃತ್ತಸಂಖ್ಯೆ |
| 1 | ಸ್ರಗ್ಧರೆ | 3 | ... | 2 | 3 | ... | 1 | 1 | ... | ... | ... | ... | ... | ... | ... | ... | 1 | 11 |
| 2 | ಮಹಾಸ್ರಗ್ಧರೆ | 2 | 2 | 10 | 4 | 3 | 1 | 4 | 2 | 2 | 1 | ... | ... | ... | ... | ... | 2 | 33 |
| 3 | ಮತ್ತೇಭವಿಕ್ರೀಡಿತಂ | 9 | 3 | 3 | 7 | 5 | 5 | 2 | ... | 2 | 3 | 3 | 2 | 3 | 4 | 2 | 6 | 59 |
| 4 | ಶಾರ್ದೂಲವಿಕ್ರೀಡಿತಂ | 7 | 1 | 2 | 4 | ... | 1 | 1 | ... | ... | ... | 1 | 1 | 1 | ... | 1 | 3 | 23 |
| 5 | ಚಂಪಕಮಾಲೆ | 19 | 2 | 8 | 5 | 5 | 3 | 6 | 3 | 4 | 7 | 1 | 1 | 12 | 3 | 2 | 6 | 87 |
| 6 | ಉತ್ಪಲಮಾಲೆ | 12 | 5 | 6 | 6 | 4 | 3 | 5 | ... | 2 | 3 | 4 | 1 | 7 | 4 | ... | 5 | 67 |
| 7 | ಕಂದಗಳ್ | 36 | 201 | 72 | 48 | 110 | 27 | 77 | 59 | 13 | 63 | 44 | 47 | 129 | 68 | 54 | 145 | 1193 |
| 8 | ಅಕ್ಕರ (ಎಡೆ) | ... | ... | ... | ... | ... | ... | ... | ... | ... | ... | ... | ... | ... | 1 | ... | ... | 1 |
| 9 | ತ್ರಿವಿಧಿ | ... | ... | ... | ... | ... | ... | ... | ... | ... | ... | ... | ... | ... | ... | ... | 1 | 1 |
| 10 | ತರಳಂ | ... | 1 | ... | ... | ... | ... | ... | ... | ... | 1 | ... | ... | ... | ... | ... | 1 | 3 |
| 11 | ಲಲಿತಂ | ... | ... | ... | ... | ... | ... | ... | ... | ... | ... | ... | ... | ... | ... | ... | 1 | 1 |
| 12 | ಮಾಲಿನಿ | ... | 1 | 1 | 2 | 1 | ... | ... | ... | 1 | ... | ... | 1 | 2 | ... | ... | ... | 9 |
| 13 | ಮಂದಾಕ್ರಾಂತೆ | ... | ... | ... | ... | ... | ... | ... | ... | ... | ... | ... | ... | ... | ... | ... | 5 | 5 |
| 14 | ಮಲ್ಲಿಕಾಮಾಲೆ | ... | ... | ... | ... | 1 | 1 | ... | ... | ... | ... | ... | ... | 1 | ... | ... | ... | 3 |
| 15 | ಶಶಿಕಾಂತಂ | ... | ... | ... | ... | ... | 1 | ... | ... | ... | ... | ... | ... | ... | ... | ... | ... | 1 |
| 16 | ಮಣಿರಂಗಂ | ... | ... | ... | ... | ... | 1 | ... | ... | ... | ... | ... | ... | ... | ... | ... | ... | 1 |
| 17 | ರಥೋದ್ಧತೆ | ... | ... | ... | ... | ... | ... | ... | ... | ... | ... | ... | ... | ... | ... | ... | 2 | 2 |
| 18 | ಅನುಷ್ಟುಪ್ (2) | ... | ... | ... | ... | ... | ... | ... | ... | ... | ... | ... | ... | ... | ... | ... | ... | ... |
| | ಒಟ್ಟು. ಅಧಿ. ವೃ. ಸಂ | 88 | 216 | 104 | 79 | 129 | 44 | 96 | 64 | 24 | 78 | 53 | 53 | 155 | 80 | 59 | 178 | 1500 |

# ಪರಿಶಿಷ್ಟ ೨

## ಪದ್ಯಗಳ ಅಕಾರಾದ್ಯನುಕ್ರಮಣಿಕೆ.

(1) ಕವಿಯು ಅಧಿಕಾರ ಒಂದರ ೭೦ ನೆಯ ಪದ್ಯದ ಪ್ರಾಸಿನಲ್ಲಿ "ಬಾಷ್ಪ" ಎಂದು ಪ್ರಯೋಗಿಸಿರುವುದರಿಂದ "ಬಾಷ್ಪ" ಎಂಬ ಹಸ್ತಲಿಖಿತ ಪ್ರತಿಗಳ ಪಾಠಗಳು ಅಸಾಧುವೆಂದು ತೋರುವುದು.

ಖ



ಗ







ಘ



ಚ



ಜ

## ಝ



## ಟ



## ತ







## ದ



## ಧ



## ನ

1. ಅರವೊಱಸು = ರಾಜಕಪೋತ (ಮೇಲಾದ ಪಾರಿವಾಳ) (ಜೀವಂ ಜೀವಃ........ಕಪೋತಃ = ಈ 'ಅಱುಹೊಱಸು.—ಅಭಿಧಾನರತ್ನಮಾಲೆಯ ಟೀಕೆಳ೨—೧೦೦) ಶ್ಯೇನನುಮರವೊಱಸುಮಿಂತು ಗಱಸಿದುದ' (ಶಾಂತಿ. ೨೧೦, ಪ. ೯೧.)





ಪ

ಫ



ಬ







ಭ

# ಪರಿಶಿಷ್ಟಂ ೩

## [1]ಕಾಶ್ಯಪಸಂಹಿತಾ ಖಗೇಂದ್ರಮಣಿದರ್ಪಣಗಳ ಸಂವಾದಿ ವಿಸಂವಾದಿ ಭಾಗಗಳು—

(ಮಾದರಿಗಾಗಿ ಮಂತ್ರೌಷಧಾದಿಗಳಲ್ಲಿ ಒಂದೆರಡನ್ನು ಎತ್ತಿ ಹೋಲಿಸಿ ತೋರಿಸಿದೆ)

ಕಾಶ್ಯಪಸಂಹಿತೆಯು ಋಷಿಗಳ ಪ್ರಶ್ನೋತ್ತರ ರೂಪದಲ್ಲಿದೆ:—ಆದಿಯಲ್ಲೇ "ಗರುಡ ಪಂಚಾಕ್ಷರಿ" ಮಂತ್ರ, ಅದಕ್ಕೆ ಋಷ್ಯಾದಿ ಮುದ್ರೆ, ಧ್ಯಾನ, ಸೇವಾವಿಧಿ, ಅರ್ಚನೆ, ನಾನಾ ಯಂತ್ರವಿಧಾನ, ಶಕ್ತ್ಯಾದಿಗಳು ಇವುಗಳ ವಿಷಯವಾಗಿ ಗೌತಮನು ಪ್ರಶ್ನಿಸುವನು, ಕಾಶ್ಯಪನು ಉತ್ತರ ಹೇಳುವನು.

(1) ಆದಿಯಲ್ಲಿ ಗರುಡಮಂತ್ರೋದ್ಧಾರ:—

ಯಥಾ ಸೂರ್ಯಸ್ತಮೋಹನ್ತಾ<br>
ದ್ಗರುಡೋಽಪಿ ತಥಾವಿಷಂ |<br>
ಸ್ಥಾವರಂ ಜಂಗಮಂ ಚೈವ<br>
ಕೃತ್ರಿಮಂ ಸಹಜಂ ತಥಾ |<br>
ಶಂಕಾವಿಷಮಿತಿಪ್ರೋಕ್ತಂ<br>
ಹಾಲಾಹಲವಿಷಂ ತಥಾ ||

ಎಂದುಗ್ರಂಥವು ಮುಂದುವರಿದಿದೆ.

ವಿಷಹರಮಂತ್ರಂ—

ಓಮ್ ಕ್ಷೀಮ್, ಓಮ್ ನಮೋಭಗವತೇ ಅಷ್ಟಕುಲ ನಾಗಭೂಷಣಾಯ ವೈನತೇಯಾಯ ನಾಗಶೋಣಿತದಿಗ್ಧಾಂಗಾಯ ಸುಪರ್ಣಾಯ ಸರ್ವಲೋಕ ರಕ್ಷಣೋನ್ಮುಖಾಯ ಸರ್ವಭೂತ ಭಯಂಕರಾಯ ಸರ್ವಾಂಡಾಂತರ ವಾಸಿನೇ ದಶೋತ್ತರಾವರಣಾತೀತಾಯ ಗುಣಾ

ಖಗೇಂದ್ರಮಣಿದರ್ಪಣದಲ್ಲಿ ಮೊದಲಧಿಕಾರದ ಆದಿಯಲ್ಲಿ ಕಾವ್ಯಪದ್ಧತಿಯನ್ನನುಸರಿಸಿ ಮಂಗಳವೂ ಕವಿವಿಷಯಗಳೂ, ಹೇಳಲ್ಪಟ್ಟು ಶಾಸ್ತ್ರಮರ್ಯಾದೆಯನ್ನನುಸರಿಸಿ ಸಂಜ್ಞಾಪರಿಭಾಷೆಗಳು ಹೇಳಲ್ಪಟ್ಟವೆ. ಎರಡನೆಯಧ್ಯಾಯದಲ್ಲಿ ವಿಷಭೇದಗಳನ್ನು ಹೇಳಿ,ಮುಂದೆ ಸ್ಥಾವರ ವಿಷಗಳನ್ನೂ, ತತ್ಪರಿಹಾರಕೌಷಧಗಳನ್ನೂ ಹೇಳುತ್ತಾ ಗ್ರಂಥವು ಮುಂದುವರಿದಿದೆ.

ಓಮ್ ನಮೋಭಗವತೇ ಶ್ರೀ ಪಾರ್ಶ್ವ ತೀರ್ಥಂಕರಾಯ ಧರಣೇಂದ್ರ ಪದ್ಮಾವತೀ ಸಹಿತಾಯ ಸಂಸಾರಸಾಗರೋತ್ತರಣಾಯ ಅಷ್ಟ ಲೋಕಪಾಲಪೂಜಿತಾಯ ಅಷ್ಟವಿಧಕರ್ಮ ನಿರ್ಮೂಲನಕರಾಯ ರಾಜತಸ್ಕರಕ್ರೂರಾರಿ ಮಾರಿ ಸಮಸ್ತ ಕ್ಷುದ್ರೋಪದ್ರವಾ ಛಿಂದಿ,

1. ಸುಶ್ರುತವೆಂಬ ವೈದಿಕ ಮತಾನುಸಾರಿಯಾದ ವೈದ್ಯಗ್ರಂಥದಲ್ಲಿಯೂ, "ಕಲ್ಪ" ಎಂಬ ಪ್ರಕರಣದಲ್ಲಿ ೮ ಅಧ್ಯಾಯಗಳಲ್ಲಿ ಈ ವಿಷಶಾಸ್ತ್ರ ಮತ್ತು ವೈದ್ಯಗಳನ್ನು ಹೇಳಿದೆ, ಆ ಕ್ರಮಕ್ಕೂ, ಖಗೇಂದ್ರಮಣಿದರ್ಪಣದ ಕ್ರಮಕ್ಕೂ ತುಂಬಾ ಅಂತರವುಂಟು, (ಅದರಲ್ಲಿ ರಾಜರಿಗೆ ವಿಷವನ್ನು ಹಾಕತಕ್ಕವರು ವಿಶೇಷವಾಗಿರುವರು. ಆದರಿಂದ ಅರಸರೆಲ್ಲರೂ ಎಚ್ಚರಿಕೆಯಿಂದ ಇರಬೇಕೆಂದು ಪೀಠಿಕೆಯನ್ನು ಆರಂಭಿಸಿ ಮುಂದೆ ವಿಷಭೇದ ಮುಂತಾದುವನ್ನು ಹೇಳಿದೆ.

2. ಸ್ಥಾವರಂ ಜಂಗಮಂ ಚೈವ ವಿಷಂ ದ್ವಿವಿಧಮುಚ್ಯತೇ |<br>
ದಶಾಧಿಷ್ಠಾನಮಾದ್ಯಂ ತು ದ್ವಿತೀಯಂ ಷೋಡಶಾಶ್ರಯಂ |<br>
ಸ್ಥಾವರಂ ಜಂಗಮಂ ಯಚ್ಚ ಕೃತ್ರಿಮಂ ಚಾಪಿ ಯದ್ವಿಷಂ (ಸುಶ್ರುತ ಸಂಹಿತಾ - ವೈದ್ಯಶಾಸ್ತ್ರಂ)

ತೀತಾಯ ಸರ್ವಗತಾಯ ಸರ್ವೇಶ್ವರಾಯ ಪಕ್ಷಿರಾಜಾಯ ಭಗವದ್ವಾಹನಾಯ ಗರುಡಾಯ ಸರ್ವಾಂಡಾಂತರಕ್ಷೋಭನಾಶಾಯ ಬ್ರಹ್ಮಾದಿ ಚತುರಕ್ಷರಾನುಸ್ವಾರಾಯ ಯುಗಾಂತರಬೀಜಾಯ ಮಾತುರರ್ಥೇ ಶಾಪಕ ಮೋಚನಾಯ ಅಮೃತಾಪಹರಣದಕ್ಷಾಯ ಹನ ಹನ ದಹ ದಹ ಮಮ ಶತ್ರೂರ್ ಭಗವ ದಂಷ್ಟ್ರ ಕಿ(ರ)ಣಾಂಕಿತಂಶರೀರಾಯ ಸರ್ವ ತೇಜೋಮಯಾಯ ಸುಮುಖಾಯ ಸುಪ್ರತಿಷ್ಠಿತಾಯ ಸರ್ವಗತಾಯ ಸರ್ವ ನಾಗಭಕ್ಷಣ ಪ್ರಿಯಾಯ ಭಗವದಂಗರಕ್ಷಣಾಯ ಧ್ವಜೇ ಪ್ರತಿಷ್ಠಿತಾಯ ಗರಲನಾಶನಾಯ ಸರ್ವವಿಘ್ನ ವಿನಾಶಾಯ ವೈನತೇಯಾಯ ಸ್ವಾಹಾ.

(ಅ. ೧—ಪ್ರ. ೧೧)

(2) ನಾಗಾಕೃಷ್ಟಿ ಮಂತ್ರಂ—

ಒಮ್,ಕ್ಷ್ಮ್ಯೂಮ್,ಜ್ಮ್ಯೂಮ್,ಹ್ಮ್ಯೂಮ್, ಓಂ ನಮೋ ಭಗವತೇ ಬಾಷ್ಪನಾಥಾಯ ವಜ್ರನಖಾಯ ವಾಮಪಾದಾಯ ಇಂದ್ರಾಯ ವಿನತಾಪುತ್ರಾಯ ಸುಪರ್ಣಪಕ್ಷಿ ರಾಜಪಕ್ಷಿ ಗರುಡಪಕ್ಷಿ ಗರುಡ ಸರ್ವಪಕ್ಷೀಶ್ವರಪಕ್ಷಿ ವಜ್ರಪಕ್ಷಿ ಮರಕತಪಕ್ಷಿ ಮಾತಂಗಪಕ್ಷಿ ಸರ್ವ ಪಕ್ಷಿ ಸರ್ವಪಾಪಹರಪಕ್ಷಿ ಸರ್ವ ಶತ್ರುಹರ ಪಕ್ಷಿ ಸರ್ವಜನ ವಶ್ಯಕರಪಕ್ಷಿ ಓಮ್ ಶ್ರೀಮ್ ಐಮ್ ಕ್ಲೀಮ್ ಸೌಮ್ ಕ್ಮ್ಯೂಮ್ ಝ್ರೌಮ್ ಆಮ್, ಕ್ರೋಮ್, ಫ್ರೋಮ್ ನ್ಮ್ಮಮ್ ಹ್ರೀಮ್, ಹಂಸಃ, ಪ್ರಹಂಸಃ ಯ ರ ಲ ವ ಶ ಷ ಸ ಹ ಓಮ್ ಯಾವತ್ ಗೋಷ್ಠಾ

ಜ್ವರದಾಹಸಂತಾಪ ಅಕ್ಷಿರೋಗ ಕುಕ್ಷಿರೋಗ ವ್ರಣ ಸ್ಫೋಟಕಾದಿ ಸರ್ವರೋಗಾನ್ ಛಿಂದಿ, ಕೃತ್ರಿಮಾಕೃತ್ರಿಮ ಅಷ್ಟಕುಲಸರ್ಪ ಅಷ್ಟಾದಶ ವೃಶ್ಚಿಕಾಷ್ಟಾದಶ ಮೂಷಕವಿಷಾನ್ ಛಿಂದಿ, ಸ್ಥಾವರ ಜಂಗಮ ಕೃತ್ರಿಮವಿಷಾನ್ ಛಿಂದಿ, ದೇವಗ್ರಹ ಭೂತಗ್ರಹ ಯಕ್ಷರಾಕ್ಷಸಗ್ರಹ ಸರ್ವ ಗ್ರಹಪೀಡಾನ್ ಛಿಂದಿ, ಶತಸಹಸ್ರಕೋಟಿ ಪಿಶಾಚ ರಾಕ್ಷಸಗ್ರಹ ಕೃತೋಪಸರ್ಗಾನ್ ಛಿಂದಿ, ಏಕಾಹಿಕ ದ್ವ್ಯಾಹಿಕ ಸಾಂವತ್ಸರಿಕಾದಿ ನಾನಾಜ್ವರಗ್ರಹಾನ್ ಛಿಂದಿ. ಆಂ, ಹ್ರೀಂ, ಕ್ರೋಂ, ಫಟ್ ಸ್ವಾಹಾ ಹುಂಫಟ್ ಸ್ವಾಹಾ ಠ. (ಪ್ರು. ೮೫)

ಓಮ್ ನಮೋಭಗವತೇ ಪ್ರಚಂಡಗರುಡಾಯ ಖಗೇಂದ್ರ ಪಕ್ಷಿರಾಜಾಯ ತೀಕ್ಷ್ಣ ದಂಷ್ಟ್ರಾಯ, ರೋಮಹರ್ಷಣಾಯ ಭಯಂಕರಾಕಾರಾಯ ವಿಷ್ಣುವಾಹನಾಯ, ಸುವರ್ಣ ಜಿಹ್ವಾಯ, ಅನಂತವಾಸುಕಿ ತಕ್ಷಕ ಕಾರ್ಕೋಟಕ ಪದ್ಮ ಮಹಾಪದ್ಮ ಶಂಖಪಾಳಗುಳಿಕ ಜಯವಿಜಯ ನಾಗಾನ್ ಏಹಿ ಆವೇಶಯ ಹನ ಪಚ ರಮ ದರ ಛಿಂದ ಛಿಂದ ರ ರ ರ ರ. ರಂ ರಂ ರಂ ರಂ, ರಾ ರಾ ರಾ ರಾ, ಕ್ಷ್ಮಂ ಕ್ಷ್ಮಂ ಕ್ಷ್ಮಂ, ಹಾಂ ಹಾಂ ಹಾಂ, ಏಹಿ ಹ್ರೀಂ ಹ್ರೀಂ ಹ್ರೀಂ, ಹ್ರ್ಯೂಮ್, ಹ್ರೂಮ್, ಫೇ ಫೇ ಫೇ, ಸಕಲನಾಗಗ್ರಹಾನ್, ಫೆ. ಸಂ. ವೌಷಟ್ ಸ್ವಾಹಾ.

ಓಮ್ ನಮೋ ಭಗವತೇ ಪಾರ್ಶ್ವನಾಥಾಯ ಸರ್ಪಕುಲವಿಧ್ವಂಸನಾಯ ಸಮಸ್ತ ವಿಷಸಂಹರಣಾಯ ದೇವೇಂದ್ರ ಮರ್ದನಾಯ ಹುಂಫಟ್ ಸ್ವಾಹಾ|(ಪ್ರ. ೨೬೨)

ಓಮ್ ಕ್ಲೀಂ ಬ್ಲೂಮ್, ದ್ರಾಂ, ದ್ರೀಂ, ದ್ರಾವಯ ಹಂ ಝುಂ ಝುಂ ಕ್ಷ್ಮಿಂ ಹಂಸ ಸ್ವಾಹಾ, (ಅಂಗನ್ಯಾಸಃ)

ಝುಂ, ವಂ, ಲಾಂ ಹ್ವಃ ಫಟ್ ಕ್ಷ್ಮಿಂ ಹಃ ಅಸಿ ಆ ಉ ಸಾ ಸ್ವಾಹಾ. ಇತಿ ಮುದ್ರಾ.

ಓಂ, ಆಮ್ ಕ್ರೋಮ್ ಹ್ರೀಂ, ಅಸಿ ಆ ಉ ಸಾ ಯ ರ ಲ ವ ಶ ಷ ಸ ಅಮುಷ್ಯಪ್ರಾ



ತ್ಮನೇ ಹುಮ್,ಹ್ರಾಂ ಹ್ರೀಂ, ಏಹ್ಯೇಹಿ ಅನಂತ ವಾಸುಕಿ ತಕ್ಷಕ ಕರ್ಕೋಟಕ ಪದ್ಮ ಮಹಾಪದ್ಮ ಶಂಖಪಾಲ ಗುಲಿಕ ಅಷ್ಟಕುಲನಾಗಾನ್ ಸರ್ವನಾಗಾನ್ ಆಜ್ಞಾಪಯ ಅವಿಶ ಆಕ್ರುಷ್ಟ ಮನುಷ್ಯದಷ್ಟಕಾನ್ (ಗುಹಪುರುಟೋ) (ಘುರುಳು) ಶ್ರೀಘುರುಳು ಘುರುಳು ಘುರುಳು ಘೋರ ಘೋರ ನೀಲಕಂಠ ಸರ್ವಂ ಖಿಲ ಖಿಲ ಮದ ಮದ ಖುದಿ ಖುದಿ ಹ್ರಮ್ ಹ್ರಾಮ್ ಹ್ರೀಮ್ ಹ್ರೂಮ್ ಕ್ಷ್ಮ್ಯೂಮ್ ಹುಮ್ಫಟ್ ಸ್ವಾಹಾ. (ಪು)

### ಯಂತ್ರವಿಧಾನಂ

ತ್ಸೌವರ್ಣೇ ರಾಜತೇ ತಾಮ್ರೇ
ಭೂರ್ಜಪತ್ರೇ ವಟೇಽಥವಾ ||
ಪಟ್ಟಕೇ ವಿಲಿಖೇದ್ಯಂತ್ರಂ
ಪಂಚಕಂ ಕೃತಶಸ್ತಕಂ ||
ಅಭಿಷೇಕಂ ತತಃ ಕೃತ್ವಾ
ಧಾರಯೇದ್ಯಂತ್ರಮುತ್ತಮಮ್

(ಅ. ೭—ಪ. ೩೮-೩೯)

ಸ್ಥಾವರಂ ಜಂಗಮಂ ಚೈವ
ಕೃತ್ರಿಮಂ ಗ್ರಹಜಂ ತಥಾ
ಶಂಕಾವಿಷಮಿತಿ ಪ್ರೋಕ್ತಂ
ಪಂಚಧಾ ಮಮ ಶಂಭುನಾ ||

ನಾಗಾನಾಂ ನಾಮ ಜನ್ಮಾಪಿ
ದಂಶರೂಪಂ ಚ ಕಾರಣಂ |
ಚೇಷ್ಟಿತಂ ವಿಷವೇಗಂ ಚ
ಮರ್ಮ ದೂತಸ್ಯ ಲಕ್ಷಣಮ್ |
ಸ್ನಾನವಾರಾದಿಕಂ ಚೈವ
ಶಕುನಾನಿ ತ್ರಯೋದಶ |
ತತ್ವಾನ್ಯೇತಾನಿ ಯೋ ವೇತ್ತಿ
ಸ ವಿದ್ವಾನಿತಿ ಮೇ ಮತಿಃ ||—
ಶೇಷ ವಾಸುಕಿ ತಕ್ಷಾಖ್ಯ
ಕಾರ್ಕೋಟಕಾಬ್ಜ ಮಹಾಂಬುಜಾಃ |
ಶಂಖಪಾಲಾದಿ ಗುಳಿಕಾ
ಅಷ್ಟೌ ದಿವ್ಯೋರಗಾಃ ಸ್ಮೃತಾಃ|| ೬ ||

ಣಾ ಇಹಪ್ರಾಣ...ಇಹೈವಾಯಾಂತು ಸುಖಂ ಚಿರಂ ತಿಷ್ಠಂತು ಸ್ವಾಹಾ (ಪು. ೮೫)

(2) ನಾಗಾಕರ್ಷಣಮಂತ್ರಂ...

ಓಮ್ ಚಿರಿಚಿರಿ ಯಿಂದ್ರವಾರುಣಿ ಏಹಿ ಕಡ್ಡ ಸ್ವಾಹಾ. (ಪು. ೨೬೨)

ಸೊಗಯಿಪ ಯಂತ್ರಂ ತಾಮ್ರದ | ತಗಡಿ
ನೊಳಂ ಬರೆದಿರಲ್ಕ ಮದಱೊಳವಂ ತೀವುಗೆ

ದೇವ ಜಿನೇಂದ್ರ ಭಾಷಿತ ವಿಷಂಗಳೆ
ಮೂದೆಱ ನಪ್ಪ ವೆಂತೆನಲ್ |
ಸ್ಥಾವರ ಜಂಗಮಂ ಕೃತಕಯೋಗಜ
ಮೆಂದಿವಱೊಳ್ ವಿವೇಕಿಸಲ್ ||

(ಪು. ೧೬)

(ಈಹದಿ ಮೂಱರಲ್ಲಿ ನಾಗರ ಜನ್ಮದಂಶ ರೂಪ ಇವನ್ನು ಬಿಟ್ಟು ಉಳಿದುವನ್ನೆಲ್ಲಾ ಮಂಗರಾಜನು ಹೇಳಿದ್ದರೂ ಹೀಗೆ ಒಂದೆಡೆಯಲ್ಲಿ ಸೂಚನೆಯಾಗಿ ಹೇಳಿಲ್ಲ, ನಾಗರ ನಾಮ (ಪು. ೧೬) ದಂಶಕಾರಣಂ (೬೫) ಚೇಷ್ಟಿತಂ (೬೨) ವಿಷವೇಗಂ (ಪು. ೧೧೨) ಮರ್ಮಂ (೬೮) ದೂತಲಕ್ಷಣಂ(೬೮—೭೩)ಸ್ಥಾನವಾರಾದಿಕಂ (೬೪—೬೫) ಶಕುನಂಗಳ್ (೭೩—೭೪) (3-ನೆಯ ಅಧ್ಯಾಯ.)

ಕೂಟದ ತಕ್ಷಕಂ ಕುಳಿಕ ಪದ್ಮನನಂತ ಮಹೋಗ್ರ ಪದ್ಮ ಕರ್ಕೋಟಕ ಶಂಖಪಾಳ ನುತ ವಾಸುಗಿ ಯೆಂಬ ಕುಲಂಗಳೆಂಟಱೊಳ್.

(ಪು. ೧೩)

ದರ್ವೀಕರಾ ಮಂಡಲಿನಃ
ರಾಜಿಲಾಃ ವೈತಕಾ ಸ್ತಥಾ
ಚತ್ವಾರಃ ಪ್ರಾಕೃತಾಸ್ಸರ್ಪಾಃ
ತೇಷಾಂ ಲಕ್ಷಣ ಮುಚ್ಯತೇ ॥

ಭ್ರೂಮಸ್ತಕಲ ಸದ್ಬಿಂದು
ಸ್ತಬ್ಧಾಕ್ಷಃ ಶೇಷ ಉಚ್ಯತೇ
(ಏವಂ ಅಷ್ಟಾನಾಂಲಕ್ಷಣಮುಕ್ತಂ ತತ್ರ)
(ಅ. ೪—ಪ. ೩-೮)

[1]ಅನಂತ ಗುಲಿಕೌ ವಿಪ್ರೌ
ರಕ್ತೌ ವಹ್ನಿಸಮುದ್ಭವೌ ॥
ವಾಸುಕಿಶ್ಶಂಖಪಾಲಶ್ಚ ಪೀತಾ
ವಿಂದ್ರೋದ್ಭವೌ ನೃಪೌ ।
ಮಹಾಬ್ಜತಕ್ಷಕೌ ವೈಶ್ಯೌ
ಕೃಷ್ಣಾವನಿಲಸಂಭವೌ ॥
ಪದ್ಮಕಾರ್ಕೋಟಕೌ ಶೂದ್ರೌ
ಶುಕ್ಲಾವಂಬುಧಿಸಂಭವೌ ॥
(ಅ. ೪—ಪ. ೧೪-೧೫)

ಘೋಣಾಗ್ರ ದಂತಯೋರ್ದೀರ್ಘಾ
ಚ್ಛತ್ರಮೂರ್ಧಾ ಚ ಮಂಡಲೀ
ಮಂಡಲೀಷ್ಷೋಡಶ ಭಿಧಾಃ......
(ಅ. ೪—೨೫)

......................
...... ........ ......
ಚತಸ್ರಸ್ತೇಷು ದಂಷ್ಟ್ರಕಾಃ ।

ಸಿತಸರೋಜಮನಂತನ ಚಿಹ್ನಮಕ್ಕುಮು ।
ಕ್ಷರಮೆನೆ ಶಂಖಮಿಂತೆಸೆಗು
ಮೊಪ್ಪುವ ಶೇಷ ಶಿರೋವಿಭಾಗದೊಳ್॥
(ಹೀಗೆ ಎಂಟುನಾಗರಿಗೂ ಚಿಹ್ನ ಹೇಳಿದೆ)
(ಪು. ೬೧)

ಶ್ವೇತಂ ದ್ವಿಜಾತಿ ರಕ್ತೋಪೇತಂ
ಕ್ಷತ್ರಿಯನೆ ವೈಶ್ಯನುಂ ಕನಕಾಭಂ ॥
ಭೂತಳದಸಿತಂ ಶೂದ್ರಂ ಮಾತೇಂ
ಜಾತಿಯೊಳೆ ನಾಲ್ಕು ನಾಗಕುಲಂಗಳ್
(ಪು. ೬೨)

ಕರಿದರಿ ಕರ್ಕೋಟಕ ಪದ್ಮಂ ಪರಿಕಿಸೆ
ಪಾಂಡುರಮು ಮಕ್ಕನಂತಂ ಗುಳಿಕಂ ।
ವರ ಶಂಖಪಾಳ ವಾಸುಗಿ ಯರುಣ
ಮುಮಾ ಪದ್ಮ ತಕ್ಷಕಂ ಕನಕನಿಭಂ ॥
(ಪು. ೬೨)

ಇಂತೀ ಗೋನಸ ಭೇದದೊ । ಳಂತಾ
ಮೇಕೋನವಿಂಶತಿ ಪ್ರಥಿತಕುಲಂ ॥
(ಪು. ೧೬೮)

1. ಮುಕ್ತಾರೂಪ್ಯ ಪ್ರಭಾ ಯೇ ಚ ಕಪಿಲಾ ಯೇ ಚ ಪನ್ನಗಾಃ ।
ಸುಗಂಧಯ ಸ್ಸುವರ್ಣಾಭಾಸ್ತೇ ಜಾತ್ಯಾ ಬ್ರಾಹ್ಮಣಾಸ್ಸ್ಮೃತಾಃ ॥
ಕ್ಷತ್ರಿಯಾಸ್ಸ್ನಿಗ್ಧವರ್ಣಾಸ್ತು ಪನ್ನಗಾ ಭೃಶಕೋಪನಾಃ ।
ಸೂರ್ಯಚಂದ್ರಾಕೃತಿಚ್ಛತ್ರ ಲಕ್ಷ್ಮ ತೇಷಾಂ ತಥಾಂಬುಜಂ ॥
ಕೃಷ್ಣಾ ವಜ್ರನಿಭಾ ಯೇ ಚ ಲೋಹಿತಾ ವರ್ಣತಸ್ತಥಾ ।
ಧೂಮ್ರಾಃ ಪಾರಾವತಾಭಾಶ್ಚ ವೈಶ್ಯಾಸ್ತೇ ಪನ್ನಗಾಃಸ್ಮೃತಾಃ ॥
ಮಹಿಷದ್ವೀಪಿವರ್ಣಾಭಾಃ ತಥೈವ ಪರುಷತ್ವಚಃ ।
ಭಿನ್ನವರ್ಣಾಶ್ಚ ಯೇ ಕೇಚಿತ್ ಶೂದ್ರಾಸ್ತೇ ಪರಿಕೀರ್ತಿತಾಃ ॥— (ಸುಶ್ರುತಂ)



ಕಾಲೀಕರಾಲೀ ಕಮರೀ
ಕಾಲರಾತ್ರೀತಿ ಸಂಜ್ಞಿತಾಃ ॥
ಏತಾಶ್ಚತಸ್ರೋವಿಷದಾ
ವಾಮದಕ್ಷಿಣಭಾಗತಃ,
(ಅ. ೪—ಪ. ೩೧)

[1]ದಷ್ಟಸ್ಯ ಕಾರಣಂ ವಕ್ಷ್ಯೇ
ತೇಷಾಮಷ್ಟವಿಧಂ ತಥಾ
ಭೀತಿರುನ್ಮತ್ತತಾ ಕ್ಷುಚ್ಚ
ತಥಾಕ್ರಾಂತಿಶ್ಚ ದೃಪ್ತತಾ
ಸ್ಥಾನಾರ್ಥಿತಾ ಪೂರ್ವವೈರ
ಮಷ್ಟಮಂ ಕಾಲಚೋದಿತಂ
(ಅ. ೪—ಪ. ೪೩-೪೪)

ವಿಷಸ್ಯ ಪ್ರಥಮೇ ವೇಗೇ
ರೋಮಹರ್ಷೋಭವಿಷ್ಯತಿ ॥
ವೇಗೇ ದ್ವಿತೀಯೇ ಪ್ರಸ್ವೇದೋ
ಮುಖಶೋಷಶ್ಚ ಜಾಯತೇ ॥
ವೇಗೇ ತೃತೀಯೇ ವೈವರ್ಣ್ಯಂ
ಚತುರ್ಥೇ ವೇಪಥುಃ ಭವೇತ್
ವೇಗೇ ತು ಪಂಚಮೇ ಹಿಕ್ಕಾ
ಗಲಭಂಗೋಽಂಧತಾ ಭವೇತ್
ಷಷ್ಠೇ ವೇಗೇ ಚ ನಿಶ್ವಾಸಃ
ಸ್ಮೃತಿಮೋಹಶ್ಚ ಜಾಯತೇ
ಸಪ್ತಮೋ ನಾಮ ಯೋ ವೇಗ
ಸ್ತಮೇವ ಮರಣಂ ವಿದುಃ ॥
(ಪು—೩೭—ಅ. ೪—ಪ. ೬೫-೬೭)

ದೂತಿ ಕರಾಳಿ ಕಾಳಿ ಯಮದೂತಿಗಳೆಂಬ
ಸುತೀಕ್ಷ್ಣ ದಷ್ಟ್ರಸಂ । ಘಾತದ ಭೇದಮಂ—
ಕೇಳ ಯಮದೂತಿ ರಾಕ್ಷಸಿ ಕಾಳಿ ಕರಾಳಿಗಳೆ
ನಾಲ್ಕುಮಕ್ಕುಂ ವಿಷದಂಷ್ಟ್ರಾಳಿ—

ಸುರತಾರ್ಥಿ ಕ್ಷೋ[1]ಭದಿಂ ಪೊಂಗುವು
ದತಿದರ್ಪಿಷ್ಠನುನ್ಮ[2]ತ್ತನಾಹಾ ।
ರರ[3]ತಂ ಸ್ವಸ್ಥಾನ[4]ಲುಬ್ಧಂ ಕ್ಷುಧಿ[5]ತ
ನಧಿಕಭೀ[6]ತಂ ನರಂ ದಾಂ[7]ಟೆ ತನ್ನಂ ॥
ಪಿರಿದುಂ ಶಂಕಾಕುಳಂ ತಾನೆಸಿಪ
ನವವಿಧಂ ವೈರಸಂ[8]ಬಂಧ ಮಕ್ಕುಂ ॥
ಧರೆಯೊಳ್ ನಿಷ್ಕಾರಣಂ ಬಂದಡಿಸಿ
ಪಿಡಿದೊಡಂ ಕಾಲ[9]ಸರ್ಪಾಖ್ಯನಕ್ಕುಂ.
(ಪು. ೬೫)

[2]ಧರೆಯೊಳ್ ದರ್ವೀಕರೋಗ್ರ ಪ್ರಥಮ
ವಿಷವಿಕಾರಂಗಳೆಂತೆಂದೊಡಂ ಮ ।
ರ್ತ್ಯರೊಳಾ ದಷ್ಟಂಗೆ ಮೂರ್ಛಾಪರಿಣತಿ
ಯಧಿಕಂ ರಕ್ತಮುಂ ಮಾಂಸಮೆಲ್ಲಂ ॥
ಕರಿದಕ್ಕುಂ ನಾಡಿಯುಂ ತತ್ಪ್ರಕೃತಿ
ವಿಕೃತಿಯಕ್ಕುಂ ದ್ವಿತೀಯಾಖ್ಯ ವೇಗಂ
ಬೆರಸಲ್ಕಂತಾ ಪ್ರಕಾರಂ ಪರಿಕಿಸೆ
ದಿಟದಿಂದಂ ತೃತೀಯಾಭಿಧಾನಂ ॥
ಸಂಗಳಿಸಲ್ಕೆ ಶಿರೋರೋಗಂಗಳ್
ಚಕ್ಷುರ್ದ್ವಯಂ ಗುರುತ್ವಮೆನಿಕ್ಕುಂ॥
ಪಿಂಗದಿರಲ್ಕುಪಯೋಗದ ಭಂಗಿಯೊಳೆ
ಚತುರ್ಥ ವೇಗದೊಳ್ ಬೆರಸಿರ್ಕುಂ
ಒಸರ್ಗುಂ ನಾಸಿಕದೆಡೆ ಕಫದೆಸಕ
ದೊಳಂ ತಪಿತನಲ್ತೆ ಪಂಚಮವೇಗ ॥
ಕ್ಕಸದೃಶ ಹಿಕ್ಕಾಯುಕ್ತಂ ಪೆಸರೆನಿ
ಸಿದ ಷಷ್ಠವೇಗಮುಂ ವಿಷಮುಕರಂ

1. ಪದಾಭಿಮೃಷ್ಟಾ ರುಷ್ಟಾ ವಾ ಕ್ರುದ್ಧಾ ಗ್ರಾಸಾರ್ಥಿನೋಽಪಿ ವಾ ॥
ತೇ ದಶನ್ತಿ ಮಹಾಕ್ರೋಧಾಃ—(ಸುಶ್ರುತ)
(ಅಪಿ ಶಬ್ದಾತ್ ಭೀತಶಂಕಿತ ಕ್ರಾನ್ತಾದಯೋ ಗ್ರಾಹ್ಯಾಃ—ವ್ಯಾಖ್ಯಾನಂ)
ಸಪ್ತವೇಗಾ ಭವಂತಿ—
2. ಶೂನ್ಯಾಂಗಃ ಪ್ರಥಮೇ ವೇಗೇ ಪಶುರ್ಧ್ಯಾಯತಿ ದುಃಖಿತಃ ।
ಲಾಲಾಸ್ರಾವೋ ದ್ವಿತೀಯೇ ತು ಕೃಷ್ಣಾಂಗಃ ಪೀಡ್ಯತೇ ಹೃದಿ ।
ತೃತೀಯೇ ಚ ಶಿರೋದುಃಖಂ ಕಂಠಗ್ರೀವಂ ಚ ಭಜ್ಯತೇ ।
ಚತುರ್ಥೇ ವೇಪತೇ ಮೂಢಃ ಖಾದರ್ ದಂತಾರ್ ಜಹತ್ಯಸೂನ್ ॥ (ಕೇಚಿದ್ವೇಗತ್ರಯಂ ಪ್ರಾಹುಃ)
ಧ್ಯಾಯತಿ ಪ್ರಥಮೇ ವೇಗೇ ಪಕ್ಷೀ ಮುಹ್ಯತ್ಯತಃಪರಂ ।
ದ್ವಿತೀಯೇ ವಿಹ್ವಲಃಪ್ರೋಕ್ತಃ ತೃತೀಯೇ ಮೃತ್ಯುಮೃಚ್ಛತಿ ॥

ದೇವಾಲಯೇ ಶೂನ್ಯಗೃಹೇ
ವಲ್ಮೀಕೋದ್ಯಾನಕೋಟರೇ ||
ದ್ವಿಸಂಧ್ಯಯೋಶ್ಚೈತ್ಯತರೌ
ಶ್ಮಶಾನೇ ಸಿಂಧುಸಂಗಮೇ
ದ್ವೀಪೇ ಚತುಷ್ಪಥೇ ಸೌಧೇ
ಗಹನೇ ವೇತ್ರಪದ್ಮಯೋಃ
ಪರ್ವತಾಗ್ರೇ ಬಿಲದ್ವಾರೇ
ಜೀರ್ಣಕೂಪಾಶ್ಮಕೂಟಯೋಃ ||
ಶಿಗ್ರುಶ್ಲೇಷ್ಮಾತಕಾಕ್ಷೇಷು
ಜಂಬ್ವೌದುಂಬರವೇಣುಷು
ವಟೇ ಚ ಜೀರ್ಣಪ್ರಾಕಾರೇ
ಸರ್ಪದಂಶೋಽತಿನಿಂದಿತಃ
(ಅ. ೪—೭೧-೭೪)

ಇಂದ್ರಿಯೇಷು ಚ ಹೃತ್ಕಕ್ಷ
ಭ್ರೂಮಧ್ಯ ಕುಚ ಕುಕ್ಷಿಷು ||
ತಾಲ್ವೋಂಶ್ಯಂಖೇ? ಗಲೇ
ಮೂರ್ಧ್ನಿ ಚಿಬುಕೇ ನಾಭಿಮಧ್ಯಕೇ
ದೋಃ ಪಾದಮಧ್ಯಸಂಧೌ ಚ
ದಂಶಸ್ಸರ್ಪಸ್ಯ ನಿಂದಿತಃ
(ಪು. ೩೯)

ಪುಷ್ಪಾದಿಹಸ್ತಃ ಶುಭವಾಕ್
ಚೀರಶುಕ್ಲಾಂಬರೋಽಮಲಃ |
ಲಿಂಗವರ್ಣಸ್ಸಮಾನಶ್ಚ
ದಷ್ಟೇ ದೂತಶ್ಶುಭೋಮತಃ ||

ದೇಹದತಿ ಮೂರ್ಛೆಯುದಿತ ವಿದಾ
ಹಂಗಳಿವಕ್ಕುಮಂತು ಸಪ್ತಮುದೊಳ್ ಸಂ||
ದೇಹಂ ಮರಣ ಮುದಕ್ಕುಂ 'ತ್ರಾಹಿ'
ಯೆನಲ್ ಗರುಡನಾದೊಡಂ ರಕ್ಷಿಪನೇ
(ಪು. ೧೧೨)

ಒಡಗೆಱೆ ಜೀರ್ಣಕೋಪದೆಡೆ ಬಿಲ್ದ
ಸುರಾಲಯನೀರಸದ್ರುಮಂ |
ಸುಡುವೆಡೆಗಾಡು ಪುತ್ತಿನೊಳ ಮುಕ್ಷ
ಕುಜಂ ನಿಧಿದಾಣ ಕೋಟರಂ ||
ಕಡೆಸಿಡಿದೊಂದೆ ಭೂಜವಟ ಕಾನನ
ಮೊಪ್ಪುವ ವೇಣುಕುಂಜವೆಂ |
ಬೆಡೆಗಳೊಳಿರ್ದ ಪಾವು ಕೊಳಲಪ್ಪುದ
ಸಾಧ್ಯಮಿಳಾತಳಾಗ್ರದೊಳ್ ||
(ಪು. ೬೬)

ಪೆಡತಲೆ ಕಣ್ಣೊಸಲ್ ಕರತಳದ್ವಿತಯಂ
ಪಣೆ ಗೋಣ್ ಕದಂಪು ಕಾ |
ಲಡಿದುದಿ ಮೂಗು ನಾಭಿ ಹೃದಯಂ
ಚಿಬುಕಂ ತಲೆ ರೋಮದಂಚು ನಾ ||
ಣೆಡೆ ಕುಚಮಧ್ಯಮುಂ ಪಗಲು
ಪುರ್ವುಗಳೆಂಬಿವುಮಂ ಮಹಾಹಿ ಕೊಂ |
ಡೊಡೆ ಗರುಡಂಗಮೆಲ್ಲಿ ಅರಿದೆಂದೊಡೆ
ಪೇೞುೞಿದರ್ಗೆ ಸಾಧ್ಯಮೇ ||
(ಪು. ೬೬)

ನಡುನೆತ್ತಿಯುದರ ದೇಹ ದೊಳೆಡೆಯಣ
ಸಂಧಿ ಕೊಡಲೆ ನಾಲಗೆ ಗುದಮುಂ |
ನಡುಬೆನ್ನೆಂಬಿವನೀಕ್ಷಿಸಿ ಪಿಡಿಯಲ್ಕ
ರಿದದಱ ಗರಳಮುಂ ಖಗಪತಿಗಂ || ೪೩ ||

ಫಲಪುಷ್ಪಾಂಕಿತಹಸ್ತ ದಿವ್ಯವಸನಂ
ತಾಂಬೂಲರಾಗಂ ಮಹಾ |
ಕುಲಜಂ ಸದ್ಗುಣಭೂಷಣಂ ಸುಲಲಿತಂ
ಶ್ರೀಖಂಡ ಮಾಲ್ಯಾಂಕ ನಿ |



ದಂಡೀ ಮುಂಡೀ ಚ ಲಿಂಗೀ ಚ
ವರ್ಣೀ ವರ್ಣೋತ್ತಮಾಧಮಾಃ |
ಕಂಠೇ ಕೃತಾಂಬರಸ್ತಬ್ಧೋ
ಮುಕ್ತಕೇಶೋಽಶ್ರುಮಿಶ್ರಿತಃ ||
ಶಸ್ತ್ರೀ ಗದ್ಗದಕಂಠಶ್ಚ
ರಜ್ಜುಹಸ್ತೋ ವಿಷಾದವಾಕ್ |
ಅಸ್ತ್ರೀ ಚ ದ್ರವ್ಯಹಸ್ತಶ್ಚ
ಶುಷ್ಕಕಾಷ್ಠಸಮಾಶ್ರಿತಃ |
ಕಂಟಕೋಲ್ಕಾದಿ ಹಸ್ತೋ ವಾ
ಶುಕ್ಲೇತರಪಟಾವೃತಃ |
ಪುರುಷಾಣಾಂ ಚ ಯತ್ಸ್ತ್ರೀ ಸ್ಯಾತ್
ಸ್ತ್ರೀಣಾಂ ತು ಪುರುಷೋಭವೇತ್ |
ಅಸಹಾಯ ಸ್ತ್ರೀಸಹಾಯೋ
ಮಹಿಷಾಶ್ವಾದಿ ಸಂಸ್ಥಿತಃ |
ವಿಥವಾಸ್ಯತಹಸ್ತೋವಾ
ಮೇದಿನ್ಯಾಂ ನ್ಯಸ್ತಲೋಚನಃ |
ಕಾಷ್ಠಕಾರ್ಪಾಸ ಹಸ್ತಶ್ಚ
........................... |
ತೈಲಾಭ್ಯಕ್ತೋತ್ತಮಾಂಗಶ್ಚ
ಕುಬ್ಜಃ ಕಾಣೋಽಥ ವಾಮನಃ |
ಅಶ್ವಾವದಂತಶ್ಯಾಂತಶ್ಚ
ಅಂಗಹೀನೋ ದಿಗಂಬರಃ |
ಏತೇ ವಿವರ್ಜಿತಾಃ ಪ್ರೋಕ್ತಾಃ
ಕಂಟಕಾದಿಕ್ವ ತೇಷ್ವಪಿ |
ಕಿಂಪುನಸ್ಸರ್ಪದಷ್ಟಾನಾಂ
ಇತಿ ಶಾಸ್ತ್ರಸ್ಯನಿರ್ಣಯಃ || ೮೭ ||
(ಅ. ೪—ಪು. ೩೯-೪೦. ಪ. ೭೬-೮೩)

ಶ್ಚಲನಾಪೂರ್ಣ ಸುಲಕ್ಷಣಾಂಗ ನಮಲಂ
ಸದ್ಭಾವದಿಂ ಬಂದವಂ |
ವಿಲಸದ್ವಾಕ್ಪಟುವಾಗೆ ದೂತನುಪಮಾ
ತೀತಂ ಶುಭಂ ಧಾತ್ರಿಯೊಳ್ ||
(ಪು. ೬೮.)

ತೃಣಹಸ್ತಂ ಕಾಷ್ಠಹಸ್ತಂ ಸ್ಖಲಿತನಿಜಪದಂ
ಸಾಶ್ರುನೇತ್ರಂ ಕುನೇತ್ರಂ |
ಕುಣಪಾಂಗಂ ಜೀರ್ಣವಸ್ತ್ರಂ ಭಯಚಕಿತಕರಂ
ಕಾಂತಹಸ್ತಂ ಸರಾಪೋ |
ಲ್ಬಣವಾಕ್ಯದ್ವಂದ್ವಯುಕ್ತಂ ಬಧಿರನಸಿತ
ರಕ್ತಾಭಿ ಮಾಲ್ಯಾಂಗದೀನಂ |
ಭಣಿತಾಶೇಷಾಮಯಂ ಬಂದಿರಲವನೆ
ಕೃತಾಂತಾನುಗಂ ತಾನೆನಿಕ್ಕುಂ ||
(ಪು. ೫೫)

ಒಟ್ಟಿಲುಲಾಯ ಗರ್ದಭ ರಥಂಗಳ
ನೇಱಿದವಂ ಕುಲಾ(ಶಾ?)ನ್ವಿತಂ |
ಬಿಟ್ಟಶಿರೋರುಹಂಗಳ ನರಂ ಕರ
ಪಲ್ಲಿಲಿವಾಯನಪ್ಪವಂ ||
ನಟ್ಟ ವಿಲೋಚನಂಗಳೊಳ್
ಮೇಗನೆ ನೋಡುತುಮಿರ್ಪ ಮಾನಿಸಂ|
ತೊಟ್ಟನೆ ಬಂದು ಪೇೞಲಶುಭಂ
ಗತಮಾನಸನನ್ಯವಂಶಜಂ |
(ಪು. ೬೮.)

ಕೆಯ್ಯೊಳ್ ಕಾಷ್ಠಮಂ ಮುಱಿಯುತಾ
ಗುಳಿಸುತ್ತಿರೌದ್ರನಾಗಿರು |
ತ್ತೊಯ್ಯನೆ ಸುಯ್ಯುತುಂ ನೆಲನ
ನೇತಱಿಳಂ ಪೊಡೆಯುತ್ತಿಮುತ್ತಮಾ |
ರಯ್ಯೆ ಕರಂಗಳ ಪಿಡಿಯುತುಂ ಬಲೆ
ಬಳ್ಳಿಯನಾಯುಧಂಗಳಂ
ಮೆಯ್ಯನುರುಳ್ಚುತುಂ ಧರೆಯೊ
ಳಿರ್ಪೊಡವಂ ಯಮದೂತನಲ್ಲವೇ ||
(ಪು. ೬೯)

ಅಸಿತಾಂಬರದರುಣಾಂಬರ
ಭಸಿತಾಂಗಂ ಕೃಷ್ಣನಂಗವಿಕಳಂ ಕುಬ್ಜಂ |
ಕಿಸುಗುಳಿಗಂ ಕೃಶಸರುಜಂ ಬೆಸಗೊಂಡೊಡ
ಮುಸಿರದಿರ್ದೊಡಂ ತಾಂ ಕಷ್ಟಂ ||

ತ್ರಿಭಕ್ತೈರಸ್ಯ ವಾಕ್ಯಾರ್ಣೈಃ
ವಿಷಂ ನಿರ್ವಿಷಕಾಲತಃ |
ಆದ್ಯೈಸ್ಸ್ವರಾದ್ಯೈಃಕಾದ್ಯೈಶ್ಚ
ವಿಷೇ ಭಿನ್ನಾ ಲಿಪಿರ್ದ್ವಿಧಾ ||
ಸ್ವರಾ ಜೀವಸ್ತನುರ್ವರ್ಣಾಃ
ಇತಿ ಜ್ಞೇಯಾ ಚ ಮಾತೃಕಾ |
ವಾತಾಗ್ನೀಂದ್ರಾ ಜಲಾತ್ಮಾನೋ
ವರ್ಣೇಷ್ವರ್ಣಚತುಷ್ಟಯೇ |
ನಪುಂಸಕಾಃ ಪಂಚಮಾಃ ಸ್ಯುಃ
ಸ್ವರಾಶ್ಚಕ್ರಾಂಬುಯೋ ನಯಃ |
ದುಷ್ಟೌ ದೂತಸ್ಯ ವಾಕ್ಯಾದೌ
ವಾತಾಗ್ನೀ ಮಧ್ಯಮೋ ಹರಿಃ |
ಪ್ರಶಸ್ತಾ ವಾರುಣಾ ವರ್ಣಾ
ಅತ್ರ ದುಷ್ಟಾ ನಪುಂಸಕಾಃ||
(ಅ. ೪—ಪ್ರ. ೪೨—ಪ. ೯೪-೯೮)

ಪ್ರಸ್ಥಾನೇ ಮಂಗಲಂ ವಾಕ್ಯಂ
ಗರ್ಜಿತಂ ಮೇಘನಿಸ್ವನಃ |
ಪ್ರದಕ್ಷಿಣಂ ಫಲಂ ವೃಕ್ಷಂ
ಪುಷ್ಪಂ ಸಸ್ಯಂ ಜಲೋದನಂ ||
ಗೀತವಾದಿತ್ರ ಶಬ್ದಾಶ್ಚ
ಸಿದ್ಧಯೇ ಶ್ರುತಮೀದೃಶಂ |
ಆಕ್ರಂದಿತಂ ಚ ನಾರೀಣಾಂ
ದಕ್ಷಿಣೇ ವಿರುತಂ ಕ್ಷುತಂ ||
ಆನರ್ಥಸೂಚಕಂ ವಾಕ್ಯ
ಮೀದೃಶಂ ಸ್ಯಾದಸಿದ್ಧಯೇ |
ವೇಶ್ಯಾವಿಪ್ರೋ ನೃಪಃ ಕನ್ಯಾ
ಗೌರ್ದನ್ತೀ ಮುರಜಧ್ವಜೌ |
ಕ್ಷೀರಾಜ್ಯೇ ದಧಿಶಂಖೋಽಂಬು
ಛತ್ರಂ ಭೇರೀ ಫಲಂ ಸುರಾ |

ತಲೆಯಂ ತೂಗುತ್ತೆಮೇಗಂ ದೆಸೆಗಳನೆ
ಕರಂ ನೋಳ್ಪವಂ ಕೇಶಮಂ ಕೆ |
ಯ್ಯೊಳೆ ನೀವುತ್ತೆಣ್ಣೆಯಂ ಮಂಡೆಯೊ
ಳೊರಸಿದವಂ ಮುಕ್ತಕೇಶಂ ನಖಾಗ್ರಂ |
ಗಳೊಳಂ ತತ್ಪಾಣಿಶಾಖಾಗ್ರದೊಳೆ
ಳಸುವವಂ ಭಂಡಿಯಂ ಕಟ್ಟಿಕೋಣಂ |
ಗಳುಮಂ ತಾನೇಱಿದಾತಂ ಬರ
ಲವನೆ ವಲಂ ಕಾಲದೂತೋಪಮಾನಂ ||
ದೂತಂ ಪೇೞ್ದಕ್ಕರಸಂಘಾತವನೆ
ದ್ವಿಗುಣಿಸಿಟ್ಟು ಭಾಗಿಸು ಶಿಖಿಯಿಂ |
ದೇತೊದಳೊ ಪೞಿಯೆ ಸಾಗುಂ ಮತ್ತೇ
ನೊಂದೆರಡು ಮಿಕ್ಕೊಡಾತಂ ಬಾೞ್ಗುಂ ||
(ಪು. ೭೧)
ಎಸೆವಾ ಮಾಹೇಂದ್ರಮುಂ ವಾರುಣಮುಮೆನಿಪ
ನಾಮಾಕ್ಷರಂಗಳ್ ಜೀ | ವಿಸುಗುಂ ದಷ್ಟಂ
ತದೀಯಾಕ್ಷರಮನಿಲ ಹುತಾಶಂಗಳಾಗಲ್ಕೆ
ಮತ್ತಂ || ವಸುಗರ್ಭಂ ತಾನೆ ರಕ್ಷಾವಿಧಿ
ಗಳನೆ ವಲಂ ಮಾಡೆಯುಂ ಸಾಗುಮೆಂದೀ |
ವಸುಧಾಖ್ಯಾತರ್ಗೆ ಪೇೞ್ದಂ......||
(ಪು. ೭೨)

ಸುವಿತಾನಂ ಚಾಮರಂ ಭೂಷಿತ
ಯುವತಿಯರಂ ಮದ್ಯಮಧ್ವಾಮಿಷಂ ಗಂ
ಧವಿಲಿಪ್ತಸ್ವಾಂಗನುದ್ಯತ್ಸಿತ ಕುಸುಮ
ಫಲಗ್ರಾಹಿ ದೂರ್ವಾಕ್ಷತಂ ಪ |
ಲ್ಲವ ಮಾಂಗಲ್ಯಪ್ರಯುಕ್ತಂ ಮೊಸರಿದಿ
ರೊಳವಂ ಕಂಡೊಡತ್ಯಂತಶಸ್ತಂ |
ಭುವನಪ್ರಖ್ಯಾತವಿದ್ಯಾನಿಧಿಯೆನಿಸಿದ
ಮಂಗಾಖ್ಯ ನಿಷ್ಟೋಕ್ತಿಯಿಂದಂ ||

(ಅಶುಭಲಕ್ಷಣವನ್ನು ಇಲ್ಲಿ ಹೇಳಿಲ್ಲ.)



ತಂಡುಲಂ ಹೇಮ ರೂಪ್ಯಂ ಚ
ಸಿದ್ಧಯೇಽಭಿಮುಖಾ ಅಮೀ ||
ಸಕಾಷ್ಠಸ್ಸಾನಲಃ ಕಾರುಃ
ಮಲಿನಾಂಬರಭಾರಭೃತ್ |
ಗಲನ್ನೋ ಖರಗೋಮಾಯೂ
ಲೂಕ ಕಂಕ ಕಪಿ ದ್ವಿಜಾಃ ||
ಮಹಿಷಾಕ್ಷಿ ಶವೌ ಮಾಂಸಂ
ನಿಷಾದಃ ಪತನಂ ವಧಃ |
ಕಲಹಸ್ಸರ್ವಜಾತೀನಾಂ
ಸಮ್ಮಾರ್ಜನ ವಿಲೇಪನೇ ||
ತೈಲಂ ಕಪಾಲಂ ಕಾರ್ಪಾಸಂ
ಭಸ್ಮೇತ್ಯೇತಾನ್ಯಸಿದ್ಧಯೇ ||
ಅ. ೪—(ಪ್ರ. ೪೩—ಪ. ೧೦೦-೧೦೬)

ಕೃತ್ತಿಕಾ ಭರಣೀ ಸ್ವಾತೀ
ಮೂಲಂ ಪೂರ್ವತ್ರಯಾಶ್ವಿನೀ |
ವಿಶಾಖಾದ್ರಾ ಮಖಾ ಶ್ಲೇಷಾ
ಚಿತ್ರಾ ಶ್ರವಣ ರೋಹಿಣೀ ||
ಕ್ರೂರಾಸ್ಯುಸ್ಸರ್ಪದಷ್ಟಸ್ಯ
ದುಷ್ಟೌ ಮಂದ ಕುಜೌ ತಥಾ |
ಪಂಚಮೀಚಾಷ್ಟಮೀ ಷಷ್ಠೀ
ರಿಕ್ತಾ ದಷ್ಟಸ್ಯ ನಿಂದಿತಾಃ |
ತಸ್ಯಾತಿನಿಂದಿತಾ ಕೃಷ್ಣಾ
ಪಂಚಮೀ ಚ ತ್ರಯೋದಶೀ |
ಸಂಧ್ಯಾಚತುಷ್ಟಯಂ ದುಷ್ಟಂ
ದಗ್ಧಯೋಗಾಶ್ಚ ನಿಂದಿತಾಃ ||

ತದಂತರ್ವಿಲಿಖೇದಸ್ತ್ರಂ
ಸರ್ಪ ಸಂಹಾರ ಕಾರಕಂ |
ಕೋಣೇ ಕುರುಕುಲೇ ಸ್ವಾಹಾ
ಪತ್ರೇ ಮಂತ್ರಂ ವಿಲೋಮತಃ ||

ಅಷ್ಟಮಿ ನವಮಿ ಚತುರ್ದಶಿ ಕಷ್ಟದ
ಮಾವಾಸ್ಯೆ ಪೂರ್ಣೆ ಪಂಚಮಿರಿಕ್ತಾ ||
ಸ್ಪಷ್ಟಮೆನಿಸಿರ್ದ ಕೃಷ್ಣೋತ್ಕೃಷ್ಟದ
ತಿಥಿಯಾಗಲಂತದ ಶುಭಮಕ್ಕುಂ |
ಇನವಾರ ಭೌಮವಾರಂ ಶನಿವಾರಂ
ಶುಕ್ರವಾರ ಮೆಂಬಿವಱೊಳ್ ಭೋ |
ರನೆ ಬಂದು ಪಿಡಿಯೆಸರ್ಪಂ ವಿನತಾಸುತ
ನೆಂಬವಂಗೆ ವಿಷಮರಿದಕ್ಕುಂ ||
(ಪು. ೬೬.)
ಭರಣಿಯೊ ಳಾಶ್ಲೇಷಯೊಳಂ ಸುರ
ಪತಿಯೊಳ್ ಪಿಡಿಯೆ ಪಾವು ತದ್ವಿಷಮರಿದಾ|
ಶ್ರವಣ ವಿಶಾಖೆ ಚಿತ್ತೆಮಖ
ಕೃತ್ತಿಗೆ ರೇವತಿಮೂಲ ಪುಷ್ಯಮಿಂ |
ತವಗತ ಪೂರ್ವೆಮೂಱೆನಿಸಿವ
ಮಧ್ಯದಿನಂ ದಿವಸಾಂತ್ಯ ರಾತ್ರಿಯೊಳ್ |
ಪವಣಿಸಿದರ್ಧಮಾಗಲಹವೇಳೆ
ನಿಶಾಂತ್ಯಮೆನಿಪ್ಪ ಕಾಲಮೆಂ |
ಬಿವಱೊಳಹಿವ್ರಜಂ ಕೊಳಲಸಾಧ್ಯ
ಮದೆಂದಱಿ ನೀಂ ಬುಧೋತ್ತಮಾ ||
ಕುರುಕುಲ್ಯಾಕ್ಷರಮಂ ತಾಂ | ಬರೆವುದು
ಪಟ್ಟಾಣಭವನಮಧ್ಯದೊಳಂ ತ |
ದ್ಗರುಡಾಖ್ಯಬಂಧನದೊಳಿಡ ಲುರಗಂ
ಪೊಱಮಡುಗುಮೆಂದನುಭಯಕವೀಂದ್ರಂ ||
(ಸರ್ಪೋಚ್ಚಾಟನಂ)

ತತ್ರೌಷಧಂ ಪ್ರವಕ್ಷ್ಯಾಮಿ
  ಯೇನ ಸಂಪದ್ಯತೇ ಸುಖಂ |
ನಸ್ಯಾಂಜನಾದಿ ಲೇಪೈಶ್ಚ
  ಪಾನಭಕ್ಷ್ಯಾದಿನಾ ತತಃ ||

ಪಾಟಲೀ ಬಿಲ್ವಮೂಲಂ ಚ
  ಶಿರೀಷಂ ಚ ತಥಾರ್ಕಕಂ |
ದ್ವೇ ಹರಿದ್ರೇ ಚ ಮಂಜಿಷ್ಠಾ
  ತಗರಂ ಚಂದನಂ ತಥಾ |

ಸರಲಂ ಚೈವ ಲೋಧ್ರಂ ಚ
  ಕೃತ್ವಾ ಮೂತ್ರೇಣ ಪೇಷಯೇತ್ |
ಅಂಜನಂ ಚೈವ ನಸ್ಯಂ ಚ
  ಮೃತಸಂಜೀವನಂ ಪರಂ ||
(ಅ. ೪—ಪ. ೩-೭)

ಅಂಕೋಲ ಮೂಲ ಲವಣೇ
  ದ್ವೇ ಬೃಹತ್ಯೌ ಪಲಾನಿ ಚ |
ಕಟುಕತ್ರಯಂಚ ಸಿದ್ಧಾರ್ಥಂ
  ಗೃಹಧೂಮಂ ತಥೈವ ಚ |
ಏತಾನಿ ಸಮಭಾಗಾನಿ
  ಕೃತ್ವಾ ತೋಯೇನ ಪೇಷಯೇತ್ |
ಅಂಜನಂ ಚೈವ ನಸ್ಯಂ ಚ
  ಮೃತಸಂಜೀವನಂ ಪರಂ ||

ಶ್ವೇತಕುಷ್ಠ ಮಹಾನಾಮ
  ಭೂಮಿಸೂಚಿ ಸ್ತಥೈವ ಚ |
ಹೇಮರೋಗಮಸೃಕ್‌ಶೋಫ
  ರಕ್ತಮಂಡಲಿ ತೇ ದಶ |
ತದಂಗಮಂಡಲೀಷಟ್ಕ
  ಮೇವಂ ಷೋಡಶ ಕೀರ್ತಿತಂ ||
ತತ್ರೌಷಧಂ ಪ್ರವಕ್ಷ್ಯಾಮಿ
  ಯೇನ ಸಂಪದ್ಯತೇ ಸುಖಂ ||

ನವನೀತಂ ದಧಿಮಧು
  ಸೈಂಧವಂ ಚ ಕಟುತ್ರಯಂ |
ಏತನ್ಮಂಡಲಿದಷ್ಟಾನಾಂ
  ಪಾನೇನ ವಿಷನಾಶನಂ || ೫||

ಪಾನಮದರ್ಕಂಜನಮದರ್ಕಾ ನಸ್ಯ
  ಮದರ್ಕೆ ಲೇಪನ ಕ್ರಿಯೆಯೊಂದ |
ಕ್ಕೆನಾಲ್ಕಱೊಳೊಂದೆ ವಿಷಗ್ಲಾನಿಯನ
  ಱಱಸುಗುಮೆಂದೊಡೇ ವಣ್ಣಿಪುದೋ |

ಬಾವುಜಿಗೆಯ ಬಿತ್ತಂ ನೆಱೆ ಭಾವಿಸಿ ಗೋ
  ಮೂತ್ರದಿಂದದಂ ತಜ್ಜಲದಿಂ |
ಸೇವಿಸಲದು ತಾಂ ಮೃತಸಂಜೀವಿನಿ ಕಳೆಗುಂ
  ಚರಾಚರಂಗಳ ವಿಷಮಂ ||
(ಪು- ೧೧೩)

ಎರಡರಿಸಿನಮಂ ಬಿಲ್ವಂ ಶಿರೀಷ
  ಕುಸುಮಂ ತ್ರಿಕಟುಕಮು |
ಬೆರಸಿ ಕರಂಜದ ಬಿತ್ತಮನರೆ ನರ
  ಮೂತ್ರದೊಳೆಸಲ್ ವಿಷಾಪಹಮಕ್ಕುಂ ||
(ಪು. ೧೩೪.)

ಕ್ಷಿತಿಯೊಳ್ ಕ್ರೀಡಾರೂಪೋನ್ನತವಿಷ
  ಸೌವರ್ಣ ಕರ್ದಮಂ ಪೆಸರಿಂದ |
ಪ್ರತಿಮಾಗ್ನಿಮಾಲಿಕಂ ತಾಂ ಮತಿಗಿಡಿಸುವ
  ವಜ್ರವಕ್ರ ಮಾಲಿಗಳಕ್ಕುಂ |
ಬಾಧಕ ವೇಣೀಕಂಠಂ ಗೋಧಾಸ್ಯಂ
  ಘೋಂಟಕಾಸ್ಯ ಶಕಟಾಜಮುಖಂ |
ಸಾಧಿತಮಹೋಗ್ರವಿಷಮೆನಲೀ ಧರೆಯೊಳ್
  ನೆಗೞ್ದವಲ್ಲಿ ಮಾರ್ಜಾರಮುಖಂ ||

ವತ್ಸಾಸ್ಯ ಮೇಷಮುಖನುಮತುಚ್ಛ
  ವಿಷಂ ಕುಕ್ಕುಟಾಸ್ಯ ಸಂದಷ್ಟಂಗಳ್ |
ಸ್ವಚ್ಛಂದ ವೃತ್ತಿಗಳ್ ಕೊಲಲಿಚ್ಛೈಸುವ
  ವಜ್ರತುಂಡ ದಂತುರಮಿಶ್ರಂ ||



**ಸೂದಂ ಕದಂಬಮಾಜ್ಯೇನ**
  **ಪಿಷ್ಟ್ವಾತ್ವ ಭಕ್ಷ್ಯೇದನುರ್ಜಲಂ |**
**ರಕ್ತಪಾಂಡುಶ್ಚ ಚಿತ್ರಾಣಾಂ**
  **ಮಂಡಲೀನಾಂ ವಿಷಾಪಹಂ |**
(ಪು. ೯೫-೯೬—ಅ. ೯—ಪ. ೩-೭)

**ಶುಂಠೀ ಮರೀಚ ಪಿಪ್ಪಲ್ಯಾ**
  **ಸೈಂಧವಂ ಸಮಭಾಗಕಂ |**
**ನವನೀತೇನ ಲೇಪೇನ**
  **ಮಂಡಲೀನಾಂ ವಿಷಂ ಹರೇತ್ ||**

**ಚಿಕಿತ್ಸಾ ಷೋಡಶಾಖೂನಾ**
  **ಮುಚ್ಯತೇಽಥ ಸಲಕ್ಷಣಾ |**
**ಲಕ್ಷಣಂ ಕುಲಚಂದ್ರಸ್ಯ**
  **ರೋಮಾಂಚೋಽಸಹ್ಯವೇದನಾ |**
....................
  ...................... |
**ದ್ವಿನಿಶಾ ಪಾಟಲೀಮೂಲ**
  **ಮಾರನಾಲೇನ ಲೇಪಯೇತ್ |**
....................
  ...................... ||
**ವಿಷಘ್ನಾತೀವಿಷೇ ಚಿಹ್ನಂ**
  **ಶಿರೋರುಕ್ ಜ್ವರಗೌರವೌ |**
**ಭಯಾನಕಸ್ಯ ವೈವರ್ಣ್ಯಂ**
  **ಶಿರೋರುಕ್ ಕ್ಷುತ್ತೃಷಾ ಕಫಃ |**
**ಕರಘ್ನಸ್ಯ ಕ್ಷುದರುಚ**
  **ಶ್ವಾಸಃ ಶೋಷೋಗ್ನಿಮಂದರೌ |**
**ಗುಳೀನಾಸನ ಪರ್ಣೈಶ್ಚ**
  **ಧೂಪೋಭುಕ್ತಿಃ ಸಯೋಧಕಾ !**
(ಪ್ರ. ೧೧೬-೧೧೭—ಅ. ೧೧—ಪ. ೧-೯)

ಇಂತೀಗೋನಸ ಭೇದದೊಳಂ ತಾ
  ವೇಕೋನವಿಂಶತಿ ಪ್ರಥಿತಕುಲಂ |
ಸಂತತಮಿನ್ನಱವರ್ಗಂ ತಾಂ ತಿಳಿಸುವೆ
  ನೊಸೆದು ಪೇೞ್ದ ವರ್ಣಾದಿಗಳಂ ||
(ಪು. ೧೬೮)

ಅರಿಸಿನಮಂ ಪಿಪ್ಪಲಿಯಂ ಮರಿಚಮನೊಡ
  ವೆರಸಿಕೊಂಡು ರವಿದುಗ್ಧದೆ ಬಿ |
ತ್ತರದಿಂ ಬಾರಿಸಿ ಪೂಸಲ್ಕಿರದೞಗುಂ
  ತೂರ್ಯನುಗ್ರ ವಿಷಮಾಕ್ಷಣದೊಳ್ ||
(ಪು. ೧೮೦)

1ಶ್ವೇತಂಕೃಷ್ಣನಲಕ್ತಕಂ ಕಪಿಲನುಂ
  ನೀಲಾಭ ಧೂಮ್ರಾಭಮಾ |
ಪೀತಂ ಪಿಂಗಲ ಲೂತಿದಂಷ್ಟ್ರ ಕಪಿಲ
  ಕ್ರೋಡಾಸ್ಯ ದೀರ್ಘಾಸ್ಯ ಸಂ |
ಭೂತಂ ಕಾವಳ ದೀರ್ಘಕರ್ಣಕಳ
  ಕಂಠಂ ರೇಣುಕಾಂಗಂ ಲಸ |
ತ್ಖ್ಯಾತಂ ಪುಚ್ಛವಿಹೀನಮೆಂದು ಪದಿನೆ
  ಣ್ಭೇದಂಗಳಕ್ಕಾಖುಗಳ್ |
ಮರಿಚಮೆರಡರಿಸಿನಂ ನಾ |
ಗರಕಣವೆರಸರ್ಕಮೂಲ ಮಣಿಶಿಲೆಯಂ ಕೊಂ||
ಡರೆದಿರದೆ ಲೇಪಿಸಲ್ಕದು |
ಪಿರಿದೆನಿಸಿದ ಮೂಷಕೋಗ್ರ ವಿಷಮಂ ಕಳೆಗುಂ||

---

1. ಲಾಲನಃ ಪುತ್ರಕಃಕೃಷ್ಣಃ ಹಂಸಿರಃ ಚಿಕ್ಕಿರಸ್ತಥಾ |
ಚುಚುಂದರೋಽಲಸಶ್ಚೈವ ಕಷಾಯದಶನೋಽಪಿಚ |
ಕುಲಿಂಗಶ್ಚಾಜಿತಶ್ಚೈವ ಚಪಲಃ ಕಪಿಲಸ್ತಥಾ |
ಕೋಕಿಲೋಽರುಣಸಂಜ್ಞಶ್ಚ ಮಹಾಕೃಷ್ಣಸ್ತಥೋಽಂದುರಃ |
ಶ್ವೇತೇನ ಮಹತಾ ಸಾರ್ಧಂ ಕಪಿಲೇನಾಖುನಾ ತಥಾ |
ಮೂಷಕಶ್ಚ ಕಪೋತಾಭಃ ತಥೈವಾಷ್ಟದಶ ಸ್ಮೃತಾಃ ||—(ಸುಶ್ರುತಂ)

ಚಿಕಿತ್ಸಾ ವಿಂಶತಿರ್ಲೂತಾ
ಶ್ಚತಸ್ರೋಽನ್ಯಾಶ್ಚ ದುರ್ಜಯಾಃ ।
ಹನ್ತ್ಯೇಕಾ ದಶನಾತ್ತಾಸಾಂ
ಛಾಯಯೈಕಾ ಹರೇನ್ನರಾ‌ರ್ ।
ಆತ್ಮಾನಂ ದರ್ಶಯಿತ್ವೈಕಾ
ಗಂಡೇನೈಕೇನ ನಿಶ್ಚಿತಃ ॥
(ಪು. ೧೨೯—ಅ. ೧೨—ಪ. ೧-೨)

(ಇದನ್ನು ಬೇರೆಯಾಗಿ ವಿವರಿಸಿ ಹೇಳಿಲ್ಲ.)

ವೃಶ್ಚಿಕೇ ಸಂಪ್ರವಕ್ಷ್ಯಾಮಿ
ಮಂತ್ರೌಷಧ ವಿಧಿಕ್ರಮಂ ।
ಓಮ್ ಸ್ರೌಂ ಹುಂ ಚೇತಿ
ಮಂತ್ರೋಽಯಂ ಪುರತೋ ವೃಶ್ಚಿಕಾ‌ರ್
ಹರೇತ್॥
ಗರ್ದಭಾಶ್ವಾದಿನಾ ಖಾದೇ
ವದೇನ್ಮಂತ್ರೌಷಧಿಕ್ರಿಯಾಃ ।
(ಪು. ೧೩೦-೧೩೧—ಅ. ೧೨—ಪ. ೧೧-೧೭)

(ತೇಳಿನಜಾತಿ ಮೊದಲಾದುವನ್ನು ವಿವರಿಸಲು ೧೧-ನೆಯ ಅಧಿಕಾರವನ್ನೇ ಉಪಯೋಗಿಸಿಕೊಂಡಿರುವನು.

.....................
..................... ।
ಮಂತ್ರೇಣ ಗರ್ದಭಾಶ್ವಾಭ್ಯಾಂ
ಗೋಮಹಿಷ್ಯಾದಿನಾ ತತಃ ।
ವ್ಯಾಘ್ರಖಕ್ಷಾದಿನಾಂಚೈವ
ಮಾರ್ಜಾರಸ್ಯ ಕಪೇಸ್ತಥಾ ।
ಮಂತ್ರಧ್ಯಾನ ಸಮಾಯೋಗಾ
ದ್ವಿಷನಾಶೋ ಭವಿಷ್ಯತಿ ।

.............................
ಕಮಠೋಗ್ರನಿರ್ಮಿತ
ವೃಕವ್ಯಾಘ್ರೇಭ ವಾರಾಹದು ।
ಗೋರ್ಮಾಯು ಪ್ರಮುಖೋಗ್ರ
ಸರ್ವವಿಜಯಂ............ ॥
(ಪು. ೨೦೩.)

ತ್ರಿಫಲೋಶೀರ ಮುಸ್ತಾಬ್ಜ
ಮಾಂಸೀಪದ್ಮಕ ಚಂದನಮ್ ।
ಅಜಾಕ್ಷೀರೇಣ ಪಾನಾದೇಃ
ಗರ್ದಭಾದಿ ವಿಷಂ ಹರೇತ್ ।
(ಪು. ೧೩೧-೧೩೨—ಅ. ೧೨—ಪ. ೨೧-೨೩)

ಯಷ್ಟಿಧಾನ್ಯ ಗುಲಕ್ಷೀರಂ
ದಷ್ಟೋಽಮರ್ತ್ಯಶ್ಶುನಾ ಪಿಬೇತ್ ॥
ಖಾರೀಕರಂಜ ಸರ್ವಾಂಗ
ಕ್ವಾಥೇನ ಸ್ನಾತ ಆತಪೇ ।
ತಿಷ್ಠೇನ್ಮತ್ಯೋಽಪಿ ಮತ್ತೇನ
ಶುನಾ ದಷ್ಟೋ ವಿಷಂ ತ್ಯಜೇತ್ ॥
(ಪು. ೧೩೪—ಅ. ೧೨—ಪ. ೨೮-೪೧)

ಅಂಕೋಲ ಭವ್ಯಮರಿಚಂ ।
ಕುಂಕುಮಚಂದನರಸಾಂಜನಂಕ್ರಿಮಿದಂತಾಂ॥
ಟಂಕಣ ಮಭಯಾಖ್ಯಮಿ ।
ವಂಕುಡಿಸಲೊಡಱ ಗುಮ ಖಿಳಜಂಗಮ
ವಿಷಮುಂ ॥ (ಪು. ೨೨೮.)



ಮಂಜಿಷ್ಠಾಂಶುಮತೀ ಹರೇಣು
ತಗರಂ ಕುಷ್ಠಂ ಬೃಹತ್ಯಾ ಸ್ಥಿರಾ
ಯಷ್ಟೀಚಂದನ ತೈಲ ನಾಗಕುಸುಮಂ
ವ್ಯೋಷಂ ವಿಲಂಗೋತ್ಪಲೇ ॥
ಪತ್ರಂ ಸೋಚ್ಚಟ ಮಿಂದ್ರದಾರು
ಫಲಿನೀ ದ್ವೇ ಶಾರಿಭೇ ಚ ಕ್ಷಪೇ
ತೈಲಂ ತದ್ವಿಹಿತಂ ಘೃತಂ
ಚ ವಿಹಿತಂ ಹನ್ಯಾದ್ವಿಷಂ ಸ್ಥಾವರಂ
(ಪು. ೧೩೭—ಅ. ೧೨—ಪ. ೬೮)

ತುಲಸೀಪಾಠಪುನರ್ನವೋತ್ತರಣಿ ಯಂ
ಕೋಲಂ ವಿಡಂಗಂ ಬಿಡಂ । ಹುಲಿಗಿಲ್
ಸೈಂಧವ ನೀಲಿ ಭಾರ್ಙ್ಗ ರವಿ ಪುಷ್ಪೇಂದ್ರಂ
ವಚಾ ಕೋಷ್ಠಮೊಂ । ದಿರೆ ತಾಳೀಸಮೃಣಾಲ
ಗೇರು ವಕುಲಾಸ್ಥಿ ಪ್ರೋಕ್ತಮಿಂತೆಲ್ಲಮಂ ।
ವಿಲಸಚ್ಚೂರ್ಣಿತಮಾಗೆ ಮಾಡಿ ಜಲಮಂ ಪೊ
ಯ್ದಲ್ಲಿ ಮತ್ತಂತದಂ.
ಸ್ವಮದೊಳಜದುಗ್ಧಮಂ ತು । ಪ್ಪಮ
ನಿಂಬಿಂ ಬೆರಸಿ ಕಾಸಿ ಮೆಲುಗಿಚ್ಚಿಂ ತು ॥
ಪ್ಪಮದುಱಯಲಟ್ಟು ಘೃತದಾ
ಕ್ರಮದಿಂ ಪಾನಾಂಜನಾದಿಯಿಂದೆ ವಿಷಘ್ನಂ
(ಪು. ೧೬೪.)

ಶತಧೌತಂ ನವನೀತಂ ಭಲ್ಲಾ
ತಕಜಂ ವಿಷಂ ಹರೇಲ್ಲೇಪಾತ್
ಈದೃಗ್ವಿಷಂ ಸಮಸ್ತಂ ಶಮಯತಿ
ನೀಲೀ ತಥಾ ಲೋಧ್ರಮ್ ॥ ೬೨ ॥

(ಇಲ್ಲ)

ದಾಹಚ್ಛೇದ ಸಿರಾವೇಧ
ಶೋಷಣಾಭ್ಯಂಜನಾನಿ ಚ ।
ಪಾನಲೇಪನನಸ್ಯಾದಿ
ಚಿಕಿತ್ಸಾಷ್ಟವಿಧಾ ಭವೇತ್ ॥ ೬೩ ॥

(ಇದನ್ನು ಹೇಳಿಲ್ಲ)

ದ್ರವ್ಯೇಽಪ್ಯನುಕ್ತೇ ವಿಹಿತಂ ತು ಮೂಲಂ
ದ್ರವೇಽಪ್ಯನುಕ್ತೇ ಜಲಮೇವ ದೇಯಂ ॥
ಭಾಗೇಽಪ್ಯನುಕ್ತೇ ಸಮಭಾಗಮೇವ
ಕಾಲೇಽಪ್ಯನುಕ್ತೇ ದಿವಸಸ್ಯ ಪೂರ್ವಂ ॥
॥ ೬೪ ॥

ಭಾಗಮಿದಿಂತುಟೆನ್ನದುವುಮಂ
ಸಮಭಾಗಮವೆಂಗೆ ವಸ್ತುವಂ ।
ತಾಗಲಲರ್ ಫಲಂ ದಳಸಮೂಲಮಿ
ವೆನ್ನದೆ ಪೇಱದ್ದೆಲ್ಲಮಂ ॥
ಬೇಗದೊಳೆಂಗೆ ಬೇರ್ಗಳನಣಂ ರಸ
ಮಿಂತುಟದೆಂದು ಪೇೞದಂ ।
ದಾಗಳೆ ನೀರೊಳಂದಱದು ಕೊಳ್ವುದು
ನೀಂ ಪುರುಷಾರ್ಥಸಾಧಕಾ ॥

ದಂತ ಶುಕ್ಲ ನಖರೋಮ ನಖಾಸ್ಥಿ
ಸ್ವೇದಮಾಂಸರುಧಿರಂ ಚ ಪುರೀಷಮ್॥
ಮೂತ್ರ ಪುಚ್ಛನಯ ನಾಸ್ಯಜಲಂಚ
ಘ್ರಾಣ ಜಂಗಮವಿಷಂ ತ್ವಥೇಚ್ಛಯಾ ॥
॥ ೬೫ ॥

(ಇದನ್ನು ಹೇಳಿಲ್ಲ)

ಪತ್ರಪುಷ್ಪ ಫಲಮೂಲ ಘೃತಂಚ
ಬೀಜಕಂಟಕಪಯಸ್ತ್ವಥೇಚ್ಛಯಾ ।
ಚರ್ಮವ್ಯೈವ? ದಶಧಾ ವಿಷಜಾತಂ
ಸ್ಥಾವರಂ ವಿವಿಧವೇಗಮಿತಿಸ್ಯಾತ್ ।
॥ ೬೬ ॥

ಇದನ್ನು ಹೇಳಿಲ್ಲ (ಆದರೆ.)
ಪ್ರಸವಕ್ಕೆ ಪತ್ರ ಪತ್ರಕ್ಕೆಸೆವ ಫಲಂ
ಘೃಕ್ಕೆ ಛಲ್ಲಿಛಲ್ಲಿಗೆ ಪಣ್ಣಂ ॥
ತಸದೃಶದಪಣ್ಗೆ ಬೇರ್ಗಳ್ ವಿಶೇಷತರ
ವೀರ್ಯವೃದ್ಧಿಯಿಂದೆಂಟುಗುಣಂ
(ಪು. ೧೪)

ಎಂದು ಪ್ರಸವಾದಿ ಐದು ಬಗೆಯನ್ನು ಔಷಧಕ್ಕೆ ನಿರ್ದೇಶಿಸಿರುವನು.

ವ್ಯಾಖ್ಯಾದಲ್ಲಿ ಪು. ೧೦
ಜಂಗಮಂ ಸ್ಥಾವರಂ ಚೇತಿ
ದ್ವಿವಿಧಂ ವಿಷಮುಚ್ಯತೇ ॥
ಜಂಗಮಂ ಸರ್ಪಮೂಷಾದಿ
ಶೃಂಗ್ಯಾದಿ ಸ್ಥಾವರಂ ವಿಷಂ ॥
[1]ಆದ್ಯಸ್ಯ ಷೋಡಶಾಧಾರಾ
ದಂಷ್ಟ್ರಾಶುಕ್ಲ ದೃತಾದಯಃ
ದಶಾನ್ಯಸ್ಯ ಪ್ರಸೂನತ್ವಕ್
[2]ಮೂಲಪತ್ರ ಫಲಾದಯಃ
ಮಂತ್ರ ಧ್ಯಾನೌಷಧಾದ್ಯೈಸ್ತು
ತಯೋಃ ಕಾರ್ಯಾ ಪ್ರತಿಕ್ರಿಯಾ

ಅದೆಂತೆಂಡೊಡಿಂ ನಾನಾವಿಷಂಗಳೊಳಗೆ ವಿಷಭೇದಂಗಳ್ ಸ್ಥಾವರಂ ಜಂಗಮಮೆಂಬೆರಡು ತೆಱಗಳುಂಟು. ಅವಱೊಳ್—
ಸ್ಥಾವರ ಮಿಪ್ಪತ್ತಯ್ದಾವಾವು ವಿವೆಂಬ.....

ಗರುಡ ಮೂರ್ತಿ ಧ್ಯಾನಂ.
ಆಜಾನುತಸ್ಸುವರ್ಣಾಭಮಾ
ಕಟ್ಯಾಸ್ತುಹಿನಪ್ರಭಮ್ ॥
ಕುಂಕುಮಾರುಣಮಾ ಕಂಠಾ
ದಾಕೇಶಾಂತಂ ಸಿತೇತರಮ್ ॥
ಸ್ವಸ್ತಿಕಂ ದಕ್ಷಿಣಂ ಪಾದಂ
ವಾಮಪಾದಂ ತು ಕುಞ್ಚಿತಮ್ ॥
ಪಾತಾಳ ಸ್ಪರ್ಶಿಪಾದಾಗ್ರಂ
ಬ್ರಹ್ಮಾಂಡಗತಮೌಳಿನಮ್ ॥

ಕಪಿಳಾಕ್ಷಂ ಕಳಧೌತ ವರ್ಣನೆ
ವಲಂ ಪಾತಾಳಲೋಕಸ್ಥಿತಂ ।
ಸ್ವಪದಾಗ್ರಂ ಜಗದಗ್ರಿಮಾಗ್ರಮ
ಕುಟಾಗ್ರಂ ದೀರ್ಘಬಾಹುದ್ವಯಂ ॥
ಕುಪಿತೋಗ್ರಾಹಿ ವಿಭೂಷಣಂ
ಗರುಡನಂತಾ ದೇವನಾಕಾರಮುಂ
ಸಪದಿ ಧ್ಯಾನಿಸೆ ಮಂತ್ರಿ ತನ್ಮಯ
ನೆನಲ್ ಬಿಟ್ಟೋಡುಗುಂ ತದ್ವಿಷಂ ॥

---

1. ದೃಷ್ಟಿ ನಿಶ್ವಾಸ ದಂಷ್ಟ್ರಾ ನಖ ಮೂತ್ರ ಪುರೀಷ ಶುಕ್ರ ಲಾಲಾರ್ತವ ಮುಖಸಂದಂಶ ವಿಶರ್ದಿತ ತುಂಡಾಸ್ಥಿ ಪಿತ್ತ ಶೂಕನಾನಿತಿ ಷೋಡಶ.

2. ಮೂಲಂ ಪತ್ರಂ ಫಲಂ ಪುಷ್ಪಂ ತ್ವಕ್‌ಕ್ಷೀರಂ ಸಾರ ಏವ ಚ ।
ನಿರ್ಯಾಸೋ ಧಾತವಶ್ಚೈವ ಕಂದಶ್ಚ ದಶಮಃಸ್ಮೃತಃ—
ದಿವ್ಯಾಸ್ಸರ್ಪಾ ದೃಷ್ಟಿವಿಷಾಃ ಭೌಮಾಸ್ತು ದಂಷ್ಟ್ರಾವಿಷಾಃ ॥—(ಸುಶ್ರುತಂ)



ನೀಲೋಗ್ರನಾಸಿಕಾವಕ್ತ್ರಂ
ತ್ರಿಯಕ್ಷಂ ಚಾರುಕುಂಡಲಮ್ ।
ದಂಷ್ಟ್ರಾಕರಾಲವದನಂ
ಕಿರೀಟ ಮುಕುಟೋಜ್ಜ್ವಲಮ್ ।
ಸರ್ವಾಭರಣ ಸಂಯುಕ್ತಂ
ಸರ್ವಾವಯವಸುಂದರಮ್ ॥
ಕಪಿಲಾಕ್ಷಂ ಗರುತ್ಮಂತಂ
ಸುವರ್ಣಸದೃಶಪ್ರಭಮ್ ॥
ದೀರ್ಘಬಾಹುಂ ಬೃಹತ್ಸ್ಕಂಧಂ
ನಾಗಾಭರಣ ಭೂಷಿತಮ್ ।
ಅನಂತೋ ವಾಮಕಟಕಃ
..........................
ಮಹಾಪಕ್ಷಂ ಮಹಾಸತ್ವಂ
ಮಂದಸ್ಮಿತ ಮುಖಾಂಬುಜಮ್ ॥
..........................
..........................
..........................
..........................
.......................... /
ಸ್ವಾಂಸೇ ನಿಧಾಯ ಲಕ್ಷ್ಮೀಶಂ
ಕಾಲಮೇಘ ಮಿವೋತ್ಥಿತಮ್ ॥
(ಪು. ೪—ಅ. ೨—ಪ. ೩-೧೨)

ವದನಂ ನೀಲೋತ್ಪಲಾಭಂ ಗಳಮೆಸೆ
ವರುಣಚ್ಛಾಯೆಯಕ್ಕುಂ ವಲಂತೋ ।
ರ್ಧರಂ ಧಾವಳ್ಯಮಾ ಮಧ್ಯಮೆ
ಪರಿಕಿಸೆ ಬಾಲಾರ್ಕತೇಜಂ ವಿಳಾಸಾ
ಸ್ಪದ ಮೂರುದ್ವಂದ್ವಮುಂ ನೀರದ
ನಿಭಮೆಸೆವೀಜಂಘೆಗಳ್ ಶ್ವೇತವರ್ಣಂ
ಪದಯುಗ್ಮಂ ಸ್ವರ್ಣವರ್ಣಂ ಗರುಡ
ಪತಿಗಿಳಾಚಕ್ರದೊಳ್ ಧ್ಯೇಯರೂಪಂ
(ಪು. ೮೬)

PRINTED AT ANANDA PRESS, MADRAS.

# ಶುದ್ಧಪತ್ರಿಕೆ

| ಪು. | ಪಂ. | ಅಶುದ್ಧಪಾಠಂ | ಶುದ್ಧಪಾಠಂ |
|---|---|---|---|
| ೧೨ | ೧೫—೧೬ | ಳೆಂಬನಿತ್ತಱ ಕಷ್ಟತೆಯಿಂ | ಳೆಂಬ ನೆತ್ತರ ಕಷ್ಟತೆಯಂ |
| ೪೦ | ೬ | ದೇವ | ದೀವ |
| ೫೩ | ೧೮ | ಹೆಸರುಕಟ್ಟೈಳ | ಹೆಸಱು ಗಟ್ಟೈಳ |
| ೮೪ | ೧೨ | ॥ ೩೩ ॥ | ॥ ೨೩ ॥ |
| ೯೩ | ೧೭ | ಸಿದ್ಘ | ಸಿದ್ಧ |
| ,, | ೨೪ | ಪಾತನ | ಪಟಾಚ್ಛಾದನ |
| ೧೦೯ | ೬ | ದಂತಮು | ದಂಶಮು |
| ೧೩೩ | ೧೭ | ವಾಯೊಳೆ | ವಾಲೊಳೆ |
| ,, | ೨೧ | ಗಿಲೇರಂಡ | ಗಿಲೆರಂಡಂ |
| ೧೩೬ | ೧೬ | ಮಂ॥ | ಮ॥ |
| ೧೭೩ | ೬ | ಮಂ॥ | ಮ॥ |
| ೧೮೨ | ೬ | ಕತೆ | ಕಕೆ |
| ೨೧೬ | ೧೯ | ॥ ೬೨ ॥ | ॥ ೭೨ ॥ |
| ೨೪೦ | ೧೧ | ಮಱಿಗಿಸಿ | ಮಱುಗಿಸಿ |
| ೨೪೭ | ೧೪ | ಕುಣಿಯೊ | ಕುಣಿಕೆಯೊ |
| ೨೫೩ | ೫ | ರತ್ತಂ | ರಕ್ತಂ |
| ೨೫೮ | ೫ | ಸಂಭವಿಕುಂ ॥ ೪೬ ॥ | ಸಂಭವಿಕುಂ ॥ ೪೬ ॥ ಅದಕ್ಕೌಷಧಂ:— |
| ೨೬೧ | ೨೦ | ಆ(ನಿ)ಯು | ಅ(ನಿ)ಯು |